# 'ನಾಡು- ರಾಷ್ಟ್ರ' ಪರಿಕಲ್ಪನೆ: ಕನ್ನಡ ಕವಿತೆಗಳ ವಾಗ್ವಾದದ ತಾತ್ವಿಕತೆ

ಹಂಪಿ. ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ

ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ರೋಹಿಣಾಕ್ಷ.

ನೊಂದಣಿ ಸಂಖ್ಯೆ: KTSM-00132

ಮಾರ್ಗದರ್ಶಕರು

ಡಾ.ಆನಂದ ಕೋಡಿಂಬಳ

ಪ್ರಾಧ್ಯಾಪಕರು, ಕನ್ನಡ ವಿಭಾಗ ವಿಶ್ವವಿದ್ಯಾಲಯ ಕಾಲೇಜು

ಮಂಗಳೂರು

೨೦೧೪

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಪ್ರಮಾಣ ಪತ್ರ

"ನಾಡು- ರಾಷ್ಟ್ರ ಪರಿಕಲ್ಪನೆ: ಕನ್ನಡ ಕವಿತೆಗಳ ವಾಗ್ವಾದದ ತಾತ್ವಿಕತೆ " ಎಂಬ ಸಂಶೋಧನಾ ಮಹಾಪ್ರಬಂಧವನ್ನು ಡಾ. ಆನಂದ ಕೋಡಿಂಬಳ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಕನ್ನಡ ಅಧ್ಯಯನ ವಿಭಾಗದ ಬಾಹ್ಯ ವಿದ್ಯಾರ್ಥಿಯಾಗಿ ಸಿದ್ಧಪಡಿಸಿದ್ದೇನೆ.

ಈ ಸಂಶೋಧನಾ ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 21/10/2014

ಸ್ಥಳ : ಮಂಗಳೂರು

Rohinaksha

ರೋಹಿಣಾಕ್ಷ

# ಯೋಗ್ಯತಾ ಪತ್ರ

ಶ್ರೀ ರೋಹಿಣಾಕ್ಷ ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕನ್ನಡ ಅಧ್ಯಯನ ವಿಭಾಗದ ಬಾಹ್ಯ ವಿದ್ಯಾರ್ಥಿಯಾಗಿ ಸಂಶೋಧನೆ ನಡೆಸಿ "ನಾಡು-ರಾಷ್ಟ್ರ ಪರಿಕಲ್ಪನೆ: ಕನ್ನಡ ಕವಿತೆಗಳ ವಾಗ್ವಾದದ ತಾತ್ವಿಕತೆ " ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದಾರೆ. ಈ ಸಂಶೋಧನಾ ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 21-10-2014

ಸ್ಥಳ : ಮಂಗಳೂರು

ಡಾ. ಆನಂದ ಕೋಡಿಂಬಳ

ಮಾರ್ಗದರ್ಶಕರು

ಡಾ. ಆನಂದ ಕೋಡಿಂಬಳ
ಪ್ರಾಧ್ಯಾಪಕ
ಕನ್ನಡ ವಿಭಾಗ
ವಿಶ್ವವಿದ್ಯಾನಿಲಯ ಕಾಲೇಜು
ಹಂಪನಕಟ್ಟೆ, ಮಂಗಳೂರು - 575 001

# ಪರಿವಿಡಿ

**೧. ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ**

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಮಹತ್ವ

೧.೪. ಅಧ್ಯಯನದ ವ್ಯಾಪ್ತಿ ಮತ್ತು ಆಕರಗಳು

೧.೪.೧. ಕವಿಗಳ ವ್ಯಾಪ್ತಿ

೧.೪.೨. ಆಕರಗಳ ವ್ಯಾಪ್ತಿ

೧.೫. ಹಿಂದಿನ ಅಧ್ಯಯನಗಳ ಸಮೀಕ್ಷೆ

೧.೬. ಅಧ್ಯಯನದ ಸ್ವರೂಪ

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ೧.೧ ಪ್ರಸ್ತಾವನೆ:

ವಸಾಹತುಶಾಹಿ ಪ್ರಭುತ್ವ ಪರಿಚಯಿಸಿದ ಇಂಗ್ಲಿಷ್ ಶಿಕ್ಷಣ ಕ್ರಮ ಹತ್ತೊಂಬತ್ತನೆಯ ಶತಮಾನದ ಭಾರತದಲ್ಲಿ ಹೊಸ ಬಗೆಯ ಕ್ರಿಯಾಶೀಲತೆಯನ್ನು ಉದ್ದೀಪಿಸಿತು. ಈ ಶಿಕ್ಷಣ ಕ್ರಮದ ಜೊತೆಗೆ ಭಾರತವನ್ನು ಪ್ರವೇಶಿಸಿದ ಪಶ್ಚಿಮದ ವೈಚಾರಿಕತೆ ಭಾರತೀಯರ ಸಾಮಾಜಿಕ ಬದುಕನ್ನೂ ಸೇರಿದಂತೆ ಹಲವು ವಲಯಗಳನ್ನು ಪ್ರಭಾವಿಸಿತು. ಹತ್ತೊಂಬತ್ತನೇ ಶತಮಾನದಲ್ಲಿ ಇಂಗ್ಲಿಷ್ ಭಾಷೆಯೊಂದಿಗೆ ಉಂಟಾದ ಸಖ್ಯದ ಕಾರಣದಿಂದ ಭಾರತೀಯ ಭಾಷೆಗಳಲ್ಲಿ ಹಾಗೂ ಸಾಹಿತ್ಯದಲ್ಲಿ ಕ್ರಾಂತಿಕಾರಕವಾದ ಬದಲಾವಣೆಗಳು ಕಂಡು ಬಂದಿತು. ಭಾಷೆಯ ರಾಚನಿಕತೆಯಿಂದ, ಸಾಹಿತ್ಯದ ಅಭಿವ್ಯಕ್ತಿಯ ವಸ್ತು ವಿನ್ಯಾಸಗಳವರೆಗೂ ಹೊಸತನ ಕಾಣಿಸಿಕೊಂಡಿತು. ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವುಳ್ಳ ಕನ್ನಡ ಭಾಷೆಯ ಸೃಷ್ಟಿಶೀಲತೆಯು ಹೊಸ ಅವಸ್ಥಾಂತರಕ್ಕೆ ಹೊರಳಿಕೊಂಡಿತು. ನವೋದಯ ಎಂದು ಗುರುತಿಸಲಾದ ಹೊಸಗನ್ನಡ ಸಾಹಿತ್ಯದ ಮೊದಲ ಘಟ್ಟದ ಬರವಣಿಗೆಗಳ ಮೇಲೆ ಆಧುನಿಕತೆ, ಸುಧಾರಣಾವಾದ, ಪಶ್ಚಿಮದಲ್ಲಿ ಕೈಗಾರಿಕೀಕರಣದಿಂದ ಉಂಟಾದ ಬದಲಾವಣೆಗಳ ಪ್ರಭಾವಗಳು ತೀವ್ರಸ್ವರೂಪದಲ್ಲಿತ್ತು. ಇಂಗ್ಲಿಷ್ ಭಾಷೆಯ ಬಳಕೆಯೊಂದಿಗೆ ಹೊಸ ವೈಚಾರಿಕ ವರ್ಗವೊಂದು ಸೃಷ್ಟಿಯಾಯಿತು. ಕನ್ನಡದಲ್ಲಿ ಈ ಹಿಂದೆ ರಚನೆಯಾಗುತ್ತಿದ್ದ ಪುರಾಣ ಹಾಗೂ ಧಾರ್ಮಿಕ ವಸ್ತುಗಳುಳ್ಳ ಸಾಹಿತ್ಯ ರಚನೆಗಿಂತ ಭಿನ್ನವಾದ ಸಾಮಾಜಿಕ ವಿಷಯಗಳೂ ಸಾಹಿತ್ಯದ ವಸ್ತುಗಳಾಯಿತು. ಹೊಸಗನ್ನಡ ಸಾಹಿತ್ಯದಲ್ಲಿ ಬ್ರಿಟಿಷ್ ಪ್ರಭುತ್ವದ ದಮನಕಾರಿ ಆಡಳಿತದ ವಿರುದ್ಧದ ಧ್ವನಿಗಳು ಮತ್ತು ಪ್ರಾದೇಶಿಕವಾದ ತನ್ನ ಭಾಷೆಯ ಕುರಿತ ಚಿಂತನೆಗಳು ಮೂಡತೊಡಗಿತು. ವಸಾಹತುಶಾಹಿಯ ಆಳ್ವಿಕೆಯ ಅನುಭವ ಭಾರತೀಯ ಸಂವೇದನೆಯನ್ನು ಬಿಡುಗಡೆಯ ಕುರಿತು ಚಿಂತಿಸುವಂತೆ ಮಾಡಿತು. ನವೋದಯ ಕಾಲಘಟ್ಟದ ಕನ್ನಡ ಸಾಹಿತ್ಯದ ಪ್ರಧಾನ ಆಶಯಗಳಲ್ಲಿ ಬಿಡುಗಡೆಯ ಬಯಕೆಯು ಕೇಂದ್ರ ಸ್ಥಾನದಲ್ಲಿದೆ.

ರಾಷ್ಟ್ರೀಯತೆಯ ಕುರಿತು ಹಾಗೂ ಕನ್ನಡ ಭಾಷೆಯ ಕುರಿತ ಚಿಂತನೆಗಳು ಸಾಹಿತ್ಯದಲ್ಲಿ ಬೇರೆ ಬೇರೆ ರೂಪದಲ್ಲಿ ಪ್ರಕಟವಾಗುತ್ತಿತ್ತು. ಇದು ವರ್ತಮಾನದ ಅಗತ್ಯವೂ ಆಗಿತ್ತು. ಈ ಬಗೆಯ ವಿಚಾರಗಳು ನವೋದಯ ಪೂರ್ವದ ಸಾಹಿತ್ಯದಲ್ಲಿ ಇರಲಿಲ್ಲವೆಂದಲ್ಲ. ಆಧುನಿಕತೆಯ ಪ್ರವೇಶ ಹಾಗೂ ವಸಾಹತುಶಾಹಿ ಆಡಳಿತದ ಕಾರಣದಿಂದ ಈ ಸಂಗತಿಗಳು ಹೊಸ ಬಗೆಯಿಂದ ಮೂಡಿ ಬಂದಿತು. ಹೊಸ ಶಿಕ್ಷಣದ ಪ್ರಭಾವದಿಂದಾಗಿ ರಾಷ್ಟ್ರ ಹಾಗೂ ತಮ್ಮ ಭಾಷೆಯ ಕುರಿತು ಮೂಡಿದ ಎಚ್ಚರ ಸಾಹಿತ್ಯದಲ್ಲಿ ಅಭಿವ್ಯಕ್ತವಾಗುತ್ತಿತ್ತು. ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಮುಖ್ಯವಾಗಿ ಹೊಸಗನ್ನಡ ಕಾವ್ಯದಲ್ಲಿ ರಾಷ್ಟ್ರದ ಹಾಗೂ ನಾಡಿನ ಕುರಿತು ನಡೆದ ಚರ್ಚೆಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನ ಮಾಡಲಾಗುವುದು.

## ೧.೨ ಅಧ್ಯಯನದ ಉದ್ದೇಶ:

ಹತ್ತೊಂಬತ್ತನೆಯ ಶತಮಾನದ ಕೊನೆಯಭಾಗ ಮತ್ತು ಇಪ್ಪತ್ತನೆಯ ಶತಮಾನದ ಆರಂಭದ ಭಾಗದಲ್ಲಿ ಕನ್ನಡ ಭಾಷಿಕ ವಲಯದಲ್ಲಿ ಹೊಸ ಚರ್ಚೆ, ಚಿಂತನೆಗಳನ್ನು ಹುಟ್ಟುಹಾಕಿದ ಬೀಜ ಮಾತೃಕೆಗಳೆಂದರೆ, ಒಂದು, 'ರಾಷ್ಟ್ರೀಯ ಪ್ರಜ್ಞೆ' ಮತ್ತು ಇನ್ನೊಂದು, 'ನಾಡು-ನುಡಿಯ ಪ್ರಜ್ಞೆ'. ರಾಷ್ಟ್ರೀಯ ಪ್ರಜ್ಞೆಯು ವಸಾಹತುಶಾಹಿ ಆಳ್ವಿಕೆಯ ವಿರುದ್ಧ ಆರಂಭವಾದ ರಾಷ್ಟ್ರೀಯ ವಿಮೋಚನಾ ಚಳವಳಿಯ ರೂಪದಲ್ಲಿ ಪ್ರಕಟವಾದರೆ, ನಾಡು-ನುಡಿಯ ಪ್ರಜ್ಞೆಯು ಛಿದ್ರವಾಗಿದ್ದ ಕನ್ನಡ ಮಾತನಾಡುವ ಭೂ ಪ್ರದೇಶಗಳನ್ನು ಒಂದು ಮಾಡುವುದಕ್ಕಾಗಿ ಆರಂಭವಾದ ಏಕೀಕರಣ ಚಳವಳಿಯ ರೂಪದಲ್ಲಿ ಪ್ರಕಟವಾಯಿತು. ಈ ಎರಡೂ ಬಗೆಯ ಅರಿವು ರಾಜಕೀಯ ಮೀಮಾಂಸೆಯಾಗಿ, ಸಾಂಸ್ಕೃತಿಕ ಪರಿಭಾಷೆಯಾಗಿ ಸಿದ್ಧಾಂತಗಳನ್ನು ಹುಟ್ಟುಹಾಕುತ್ತಾ, ಸಾಹಿತ್ಯಿಕ ವಾಗ್ವಾದಗಳ ಮೂಲಕ ಹಲವು ಬಗೆಯ ಸಂಕಥನಗಳನ್ನು ಹುಟ್ಟುಹಾಕಿತು. ನಾಡು-ರಾಷ್ಟ್ರ ಪರಿಕಲ್ಪನೆಗಳೆರಡೂ ಕನ್ನಡದಲ್ಲಿ ಹಲವು ಚಿಂತಕರನ್ನು ಆಕರ್ಷಿಸಿದೆ. ಮೇಲ್ನೋಟದಲ್ಲಿ ರಾಷ್ಟ್ರದ ಬಗೆಗೆ, ನಾಡಿನ ಭಾಷೆಯ ಬಗೆಗಿನ ಆಲೋಚನೆಯ ಕುರಿತ ಸಾಮಾನ್ಯ ಪರಿಭಾಷೆಗಳು ಎಂದೆನಿಸಿದರೂ, ಇವೆರಡೂ ಸಂಗತಿಗಳು ಶತಮಾನಗಳ ಕಾಲದ ಕನ್ನಡದಲ್ಲಿನ ಭಿನ್ನ ಸೈದ್ಧಾಂತಿಕ ಚರ್ಚೆಗಳ ಆಧಾರಭೂತ ಪರಿಕಲ್ಪನೆಗಳಾಗಿ ಬೆಳೆದು ಬಂದಿದೆ.

ಇವೆರಡೂ ಪರಿಕಲ್ಪನೆಗಳು ಹಲವು ಸಾಂಸ್ಕೃತಿಕ ವಿವರಗಳು, ಭಾಷಿಕ ಸ್ವರೂಪದ ವಿವರಗಳ ಮೂಲಕ ಮಂಡಿಸಲ್ಪಟ್ಟಿದೆ. ಇವೆರಡೂ ಪರಿಕಲ್ಪನೆಗಳು ಒಂದು ನಿರ್ದಿಷ್ಟ ಕಾಲಘಟ್ಟದ ರಾಜಕೀಯ ಹೋರಾಟವನ್ನು ರೂಪಿಸಿದೆ. ಪರಕೀಯ ರಾಜಕೀಯ ನಿಯಂತ್ರಣವನ್ನು ವಿರೋಧಿಸುವ ಆಶಯವನ್ನು ಹೊಂದಿಯೂ ಅದನ್ನು ಮೀರಿದ ಒಂದು ಸಾಂಸ್ಕೃತಿಕ ಸ್ವರೂಪದ ಸಂಬಂಧವನ್ನು ನಿರ್ದೇಶಿಸುತ್ತಿದೆ. ಈ ಅಧ್ಯಯನವು ಕನ್ನಡ ಕವಿತೆಗಳು ಕಟ್ಟಿದ ರಾಷ್ಟ್ರ ಹಾಗೂ ನಾಡಿನ ಸ್ವರೂಪವನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ. ಈ ಅಧ್ಯಯನವು ಕನ್ನಡದ ಚಿಂತಕರು ರಾಷ್ಟ್ರ, ರಾಷ್ಟ್ರೀಯತೆಯ ಹಾಗೂ ನಾಡಿನ ಏಕೀಕರಣದ ಕುರಿತು ಹೇಗೆ ಪ್ರತಿಕ್ರಿಯಿಸಿದ್ದಾರೆ ಮತ್ತು ಈ ಚಿಂತನೆಗಳನ್ನು ತಮ್ಮ ಸೃಜನಶೀಲ ಅಭಿವ್ಯಕ್ತಿಗಳಲ್ಲಿ ಹೇಗೆ ಬೆಳೆಸಿಕೊಂಡು ತಾತ್ವಿಕವಾಗಿ ಬಲಗೊಳಿಸುವ ಪ್ರಯತ್ನವನ್ನು ಮಾಡಿದ್ದಾರೆ? -ಎನ್ನುವುದನ್ನು ಕನ್ನಡದ ಸೃಜನಶೀಲ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಒಂದಾದ ಕಾವ್ಯ ಪ್ರಕಾರದ ಅಧ್ಯಯನ ಮಾಡುವ ಮೂಲಕ ಫಲಿತವನ್ನು ಕಂಡುಕೊಳ್ಳುವ ಉದ್ದೇಶವನ್ನು ಹೊಂದಿದೆ.

'ಕನ್ನಡ ಕವಿತೆಗಳ ವಾಗ್ವಾದದ ತಾತ್ವಿಕತೆ' ಎಂಬ ಹಿನ್ನೆಲೆಯಲ್ಲಿ ನಾಡು-ರಾಷ್ಟ್ರ ಪರಿಕಲ್ಪನೆಯನ್ನು ವಿವರಿಸಿಕೊಳ್ಳುವಾಗ ಈ ಅಧ್ಯಯನವು ಆಯ್ಕೆ ಮಾಡಿದ ಕವಿಗಳ ಕವಿತೆಗಳನ್ನು ಭಿನ್ನ ಭಿನ್ನ ವಾಗ್ವಾದದ ರೂಪಗಳಾಗಿ ಪರಿಭಾವಿಸಿದೆ. ನಾಡು ಮತ್ತು ರಾಷ್ಟ್ರಗಳ ನಿರ್ವಚನವನ್ನು ತಾತ್ವಿಕವಾಗಿ ಇಲ್ಲಿ ಕವಿತೆಗಳೇ ನಿರೂಪಿಸುತ್ತಿವೆ. ನಾಡು ಮತ್ತು ರಾಷ್ಟ್ರ ಪರಿಕಲ್ಪನೆಗಳು ಸಾಂಸ್ಕೃತಿಕ ಹಾಗೂ ರಾಜಕೀಯ ಆಯಾಮದಿಂದ ವ್ಯಾಖ್ಯಾನಿಸಲ್ಪಡುವ ಸಂಗತಿಗಳಾದರೂ ಅವುಗಳ ತಾತ್ವಿಕ ಭಿತ್ತಿ ಸಾಹಿತ್ಯದ ಒಳಗೆ ಆಕಾರವನ್ನು ತಳೆಯುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಕವಿತೆಗಳು ನಾಡು – ರಾಷ್ಟ್ರಗಳ ಕುರಿತು ಹುಟ್ಟಿಹಾಕುವ ಚರ್ಚೆಯನ್ನೇ, ನಾಡು ರಾಷ್ಟ್ರ ಪರಿಕಲ್ಪನೆಗಳಿಗೆ ನೀಡುವ ನಿರ್ವಚನವನ್ನೇ ವಾಗ್ವಾದ ಎಂದು ಗ್ರಹಿಸಲಾಗುವುದು. ಈ ವಾಗ್ವಾದದ ತಾತ್ವಿಕತೆಯನ್ನು ಆಯ್ಕೆ ಮಾಡುವ ಕವಿಗಳ ಕವಿತೆಗಳ ಹಿನ್ನೆಲೆಯಲ್ಲಿ ಸಮಗ್ರವಾಗಿ ಗ್ರಹಿಸಲಾಗುವುದು.

ರಾಷ್ಟ್ರೀಯತೆ ಮತ್ತು ನಾಡಿನ ಚಿಂತನೆಗಳು ನಮ್ಮ ವರ್ತಮಾನದಲ್ಲಿ ಹಲವು ಬಗೆಯ ರಾಜಕೀಯ ಚರ್ಚೆಗಳಲ್ಲಿ ಅಪವ್ಯಾಖ್ಯಾನಗೊಂಡು ಪರಸ್ಪರ ವಿರುದ್ಧ ಪರಿಕಲ್ಪನೆಗಳಾಗಿ ಮಂಡಿಸಲ್ಪಡುತ್ತಿದೆ. ಈ ಸಂದರ್ಭದಲ್ಲಿ ಕನ್ನಡದ ಹಿರಿಯ ಕವಿಗಳು

ಇವೆರಡೂ ಪರಿಕಲ್ಪನೆಗಳ ನಡುವೆ ಹೇಗೆ ಉನ್ನತ ಸ್ವರೂಪದಲ್ಲಿ ಸಮನ್ವಯವನ್ನು ಸಾಧಿಸುವ ಪ್ರಯತ್ನವನ್ನು ಮಾಡಿದ್ದಾರೆ ಎಂಬುದನ್ನು ಅರಿಯುವ ಹಾಗೂ ಅಪವ್ಯಾಖ್ಯಾನದ ಹಿಂದಿನ ಗ್ರಹಿಕೆಯ ಸಮಸ್ಯೆಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ರಾಷ್ಟ್ರ ಮತ್ತು ನಾಡು ಪರಿಕಲ್ಪನೆಗಳು ಕನ್ನಡದ ಸಂದರ್ಭದಲ್ಲಿ ಒಂದು ಇನ್ನೊಂದರ ಅಧೀನ ಪರಿಕಲ್ಪನೆಯೆ? ಪರಸ್ಪರ ವಿರುದ್ಧ ಪರಿಕಲ್ಪನೆಗಳೇ? ಅಥವಾ ಅವೆರಡೂ ಪರಸ್ಪರ ಪೂರಕ ಪರಿಕಲ್ಪನೆಗಳೇ? ಎನ್ನುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳುವ ಪ್ರಯತ್ನವಿದು.

ಕನ್ನಡದ ಖ್ಯಾತ ಚಿಂತಕರಾಗಿದ್ದ ಡಾ. ಡಿ.ಆರ್. ನಾಗರಾಜ್ ಅವರು "ಪ್ರತಿಯೊಂದು ಸಾಹಿತ್ಯ ಪರಂಪರೆಯ ಭ್ರೂಣದಲ್ಲಿ ಪ್ರತ್ಯೇಕ ರಾಷ್ಟ್ರವೊಂದರ ಬೀಜವಿರುತ್ತದೆ. ಎಲ್ಲ ಉಪರಾಷ್ಟ್ರೀಯತೆಗಳೂ ಭವಿಷ್ಯದ ಪೂರ್ಣ ರಾಷ್ಟ್ರೀಯತೆಯ ಭ್ರೂಣ ರೂಪ. ಸಮಗ್ರ ರಾಷ್ಟ್ರೀಯತೆ ಯಾವಾಗ ಬೇಕಾದರೂ ತನ್ನ 'ಉಪ'ಸ್ಥಿತಿಯನ್ನು ಬಿಸಾಡಿ ಮುನ್ನಡೆಯಬಹುದು. ೨೦ನೇ ಶತಮಾನದ ಕಡೆಯ ದಶಕಗಳ ಚರಿತ್ರೆಯೇ ಉಪರಾಷ್ಟ್ರೀಯತೆಗಳು ಪೂರ್ಣ ರಾಷ್ಟ್ರೀಯತೆಗಳಾದದ್ದು. ಪೂರ್ವ ಯರೋಪ್ ಮತ್ತು ಸೋವಿಯತ್ ರಾಷ್ಟ್ರಗಳು ಮಾತ್ರ ಇದಕ್ಕೆ ಉದಾಹರಣೆಗಳಲ್ಲ. ಭಾರತ ಉಪಖಂಡವೂ ಸೇರಿದಂತೆ ಏಷ್ಯಾದ ಅನೇಕ ದೇಶಗಳೂ ಇದೇ ಬಗೆಯ ಬದಲಾವಣೆಯ ಪ್ರಕ್ರಿಯೆಯಲ್ಲಿದೆ"[೧] ಎಂಬ ಹೇಳಿಕೆಯನ್ನು ಈ ಅಧ್ಯಯನದಲ್ಲಿ ಆಯ್ಕೆ ಮಾಡಿದ ಕವಿಗಳ ಕಾವ್ಯದ ಹಿನ್ನಲೆಯಲ್ಲಿ ಪರೀಕ್ಷೆಗೊಳಪಡಿಸಲಾಗುವುದು.

ಉಪರಾಷ್ಟ್ರೀಯತೆ ರಾಷ್ಟ್ರೀಯತೆಯ ಶತ್ರುವೆ? ಉಪರಾಷ್ಟ್ರೀಯತೆ ಎನ್ನುವುದನ್ನು ಇಲ್ಲಿ ಕನ್ನಡ ಭಾಷೆ ಮತ್ತು ನಾಡಿನ ಕುರಿತ ಚಿಂತನೆ ಎಂದು ಭಾವಿಸಿ ಅದನ್ನು ಕನ್ನಡದ ಕವಿಗಳು ಹೇಗೆ ನಿರ್ವಹಿಸಿದ್ದಾರೆ? ನಾಡು ಮತ್ತು ನುಡಿಯ ಬಗೆಗೆ ತೀವ್ರವಾದ ಅಭಿಮಾನವನ್ನು ಹೊಂದಿಯೂ, ಭಾಷಾಧಾರಿತವಾದ ನಾಡಿನ ರಚನೆಯ ಹೋರಾಟವಾದ ಏಕೀಕರಣ ಚಳವಳಿಯ ಮುಂಚೂಣಿಯಲ್ಲಿ ನಿಂತೂ ಅವರ ಚಿಂತನೆ 'ರಾಷ್ಟ್ರ'ವೆನ್ನುವ ಸಮಗ್ರತೆಗೆ ಮತ್ತು ಅದರ ಅಖಂಡತೆಗೆ ಹೇಗೆ ಪ್ರತಿಕ್ರಿಯಿಸಿತು ಎನ್ನುವುದನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು.

ರಾಷ್ಟ್ರದ ಸಾರ್ವಭೌಮತೆ ಮತ್ತು ಅಧಿಕಾರದ ಬಗೆಗಿನ ಪ್ರಶ್ನೆಯನ್ನು ನಾಡಿನ ಕುರಿತ ಭಾವನೆಯ ಜಾಗೃತಿಯನ್ನು ನಿರ್ಮಾಣ ಮಾಡುತ್ತಿದ್ದ ಕಾಲಘಟ್ಟದ ಕವಿಗಳು ಹೇಗೆ ಎದುರಿಸಿದರು ಮತ್ತು ಈ ಸವಾಲನ್ನು ತಮ್ಮ ಅಭಿವ್ಯಕ್ತಿ ವಿಧಾನದಲ್ಲಿ ಹೇಗೆ ನಿರ್ವಹಿಸಿದರು ಎನ್ನುವುದನ್ನು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

'ರಾಷ್ಟ್ರ' ಎನ್ನುವುದು ಪಶ್ಚಿಮದಿಂದ ಅಂದರೆ ಬ್ರಿಟಿಷರ ಮೂಲಕ ಯುರೋಪಿನಿಂದ ಅಮದು ಮಾಡಿಕೊಂಡ ಒಂದು ಪರಿಕಲ್ಪನೆ. ಅದು ಸ್ವಭಾವದಲ್ಲೇ ಅಪಾಯಕಾರಿಯಾದುದು ಎಂಬ ಚಿಂತನೆ ಕನ್ನಡದ ವಿದ್ವತ್ ವಲಯದಲ್ಲೂ ಇದೆ. ಈ ಹಿನ್ನೆಲೆಯಿಂದ ಕನ್ನಡದ ಸೃಜನಶೀಲ ಮನಸ್ಸುಗಳು ರಾಷ್ಟ್ರ ಪರಿಕಲ್ಪನೆಯು ರಾಜಕೀಯ ಪರಿಭಾಷೆಯಾಗಿ ಮರುಹುಟ್ಟು ಪಡೆಯುತ್ತಿದ್ದ ಸಂದರ್ಭದಲ್ಲೂ ಅದನ್ನು ಮೀರಿ ಸಾಂಸ್ಕೃತಿಕ ಪರಿಭಾಷೆಯಾಗಿ ಗ್ರಹಿಸಿ ಹೇಗೆ ಮಂಡಿಸಿದರು ಮತ್ತು ಅದರ ಸ್ವರೂಪ ಏನು? ಎನ್ನುವುದನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶವನ್ನು ಹೊಂದಿದೆ.

ಕನ್ನಡದ ಕವಿಗಳಲ್ಲಿನ ರಾಷ್ಟ್ರೀಯತೆಯ ಚಿಂತನೆಗಳ ಹಾಗೂ ನಾಡಿನ ಕುರಿತ ಚಿಂತನೆಗಳ ಬಗೆಗೆ ಹಲವು ಅಧ್ಯಯನಗಳು ನಡೆದಿವೆಯಾದರೂ ಈ ಅಧ್ಯಯನದಲ್ಲಿ ಆಯ್ಕೆ ಮಾಡಿಕೊಂಡ ಕವಿಗಳ ಸಮಗ್ರ ಕವಿತೆಗಳಲ್ಲಿ ನಾಡು – ರಾಷ್ಟ್ರ ಕುರಿತ ಚಿಂತನೆಗಳನ್ನು ಹೊಂದಿದ ಕವಿತೆಗಳನ್ನು ಭಿನ್ನ ನೆಲೆಯಿಂದ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದ್ದು ಆ ಮೂಲಕ ಅವರ ಚಿಂತನೆಗಳನ್ನು ಆದಷ್ಟು ಸಮಗ್ರವಾಗಿ ಗ್ರಹಿಸಿ ಅದನ್ನು ಈ ಪ್ರಬಂಧದಲ್ಲಿ ಮಂಡಿಸುವ ಪ್ರಯತ್ನ ಮಾಡಲಾಗಿದೆ.

**೧.೩ ಅಧ್ಯಯನದ ಮಹತ್ವ :**

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ವಸ್ತುಗಳೆಂದರೆ ನಾಡು ಮತ್ತು ರಾಷ್ಟ್ರ ಪರಿಕಲ್ಪನೆಗಳು. 'ಹೊಸಗನ್ನಡ ಕವಿತೆ'ಗಳನ್ನು ಪ್ರಭಾವಿಸಿದ ಬಹಳ ಮುಖ್ಯ ಸಂಗತಿಗಳಿವು. ಇಪ್ಪತ್ತನೆಯ ಶತಮಾನದ ಕನ್ನಡ ಕಾವ್ಯ ಪ್ರಪಂಚವನ್ನು ತುಂಬಿಕೊಂಡಿರುವ ಈ ಎರಡು ವಸ್ತುಗಳು ಒಟ್ಟು ಕನ್ನಡ ಸಾಹಿತ್ಯದ ಚರ್ಚೆಯಲ್ಲಿನ ಮುಖ್ಯ ಸಮಸ್ಯೆಯೂ ಹೌದು.ಬಹು ವಿಸ್ತಾರವಾದ ಆಧುನಿಕ ಕನ್ನಡ ಸಾಹಿತ್ಯದೊಳಗಿಂದ ಮುಖ್ಯ ಕವಿಗಳಲ್ಲಿ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡಿರುವ ಕುವೆಂಪು, ದ.ರಾ.ಬೇಂದ್ರೆ, ಮತ್ತು ಬಿ.ಎಂ.ಶ್ರೀ.ಯವರ ಕಾವ್ಯಗಳಲ್ಲಿ ಪ್ರಕಟಗೊಂಡ ಈ ಎರಡು ವಸ್ತುಪರಿಕಲ್ಪನೆಗಳನ್ನು ಅಧ್ಯಯನದ ಸಮಸ್ಯೆಯನ್ನಾಗಿ ಪರಿಭಾವಿಸಿ ಈ

ಸಂಶೋಧನೆಯನ್ನು ನಡೆಸಲಾಗಿದೆ. ನಾಡು ಮತ್ತು ರಾಷ್ಟ್ರ ಈ ಎರಡೂ ಪರಿಕಲ್ಪನೆಗಳು ನವೋದಯ ಕಾವ್ಯದ ಮುಖ್ಯ ಲಕ್ಷಣವೂ ಹೌದು. ನವೋದಯ ಕಾಲದ ಕನ್ನಡ ಕಾವ್ಯವನ್ನು ಪ್ರಭಾವಿಸಿದ ಹಲವು ವಸ್ತುಗಳಲ್ಲಿ ಈ ಎರಡು ವಸ್ತುಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಗುಲಾಮಿತನದ ಪರಕೀಯ ಆಳ್ವಿಕೆಯ ವಿರುದ್ಧ ಹಾಗೂ ಛಿದ್ರಗೊಂಡ ನಾಡನ್ನು ಮರು ಸಂಘಟಿಸುವುದಕ್ಕಾಗಿ ತೀವ್ರತರವಾದ ಹೋರಾಟ ನಡೆಯುತ್ತಿದ್ದ ಕಾಲಘಟ್ಟದಲ್ಲೇ ಅದೇ ಆಶಯವನ್ನು ಮತ್ತು ಹೋರಾಟಕ್ಕೆ ಸ್ಫೂರ್ತಿಯನ್ನು ತುಂಬಬಹುದಾಗಿರುವ ರೀತಿಯಲ್ಲಿ ಕನ್ನಡದ ಕವಿಗಳು ತಮ್ಮ ಕಾವ್ಯದಲ್ಲಿ ಈ ವಸ್ತುಗಳನ್ನು ಸೃಜನಶೀಲ ಸ್ವರೂಪದಲ್ಲಿ ನಿರ್ವಹಿಸಿದ್ದಾರೆ. ಈ ವಸ್ತುಗಳನ್ನು ಬೇರೆ ಬೇರೆ ಕವಿಗಳು ಬೇರೆ ಬೇರೆ ರೀತಿಯಲ್ಲಿ ಗ್ರಹಿಸಿದ್ದಾರೆ. ಒಟ್ಟಿನಲ್ಲಿ ಆಧುನಿಕ ಕನ್ನಡ ಕಾವ್ಯ ಈ ಎರಡು ವಸ್ತುಗಳನ್ನು ನಿರ್ವಹಿಸಿದ ಬಗೆಯನ್ನು ಅಧ್ಯಯನ ಮಾಡುವುದೆಂದರೆ ಒಂದು ಕಾಲಘಟ್ಟದ ಕನ್ನಡ ಕಾವ್ಯ ಪ್ರಪಂಚದ ಪ್ರಧಾನ ನೆಲೆಗಳನ್ನು ಅರಿಯುವ ಪ್ರಯತ್ನವನ್ನು ಮಾಡಿದಂತೆ ಎಂದು ಭಾವಿಸುತ್ತೇನೆ. ಈ ಹಿನ್ನೆಲೆಯಿಂದ ಈ ಅಧ್ಯಯನ ಮಹತ್ವಪೂರ್ಣ ಎಂದೇ ಭಾವಿಸಬಹುದು.

ಕನ್ನಡದ ಸಂದರ್ಭದಲ್ಲಿ ಈ ಎರಡು ಪರಿಕಲ್ಪನೆಗಳನ್ನು ಹಲವು ವಿಚಾರಗಳು, ಸಿದ್ಧಾಂತಗಳ ಬೆಳಕಿನಲ್ಲಿ ವಿಶ್ಲೇಷಣೆ ನಡೆಸಲಾಗಿದೆ. ಕನ್ನಡದಲ್ಲಿನ ರಾಷ್ಟ್ರೀಯತೆ ಹಾಗೂ ನಾಡಿನ ಕುರಿತು ನಡೆಸಲಾದ ಚಿಂತನೆಗಳನ್ನು ಸೈದ್ಧಾಂತಿಕ ಹಿನ್ನೆಲೆಯಿಂದ ನೋಡುವುದಾದರೆ ಅಲ್ಲಿ ಹಲವು ಧಾರೆಗಳು ಕಾಣುತ್ತವೆ.

ರಾಷ್ಟ್ರೀಯತೆಯ ಕುರಿತ ಚಿಂತನೆಗಳಲ್ಲಿ ಮೂರು ಪ್ರಮುಖ ಧಾರೆಗಳಿವೆ.

೧. ಎಡಪಂಥೀಯ 'ರಾಷ್ಟ್ರ' ಚಿಂತನೆ
೨. ಸಾಂಸ್ಕೃತಿಕ ರಾಷ್ಟ್ರೀಯವಾದ
೩. ವಿಶ್ವಪ್ರಜ್ಞೆಯ ರಾಷ್ಟ್ರೀಯತೆ

**೧. ಎಡ ಪಂಥೀಯ 'ರಾಷ್ಟ್ರ' ಚಿಂತನೆ:**

ಮಾರ್ಕ್ಸ್‌ವಾದ ಮೂಲತಃ ಆರ್ಥಿಕತೆಯ ಕುರಿತ ಒಂದು ಚಿಂತನೆ. 'ವಿಶ್ವದ ಕಾರ್ಮಿಕರೆಲ್ಲಾ ಸಹೋದರರು, ಒಂದು' ಎಂಬ ಭಾವನೆಯ ಮಾರ್ಕ್ಸ್‌ವಾದಕ್ಕೆ ಈ ಹಿನ್ನೆಲೆಯಲ್ಲಿ 'ರಾಷ್ಟ್ರೀಯವಾದ' ಒಂದು ಮಿತಿಯಾಗಿಯೇ ಕಾಣುತ್ತದೆ. ವಿಶ್ವದ ಅನೇಕ ಮಾರ್ಕ್ಸ್‌ವಾದಿ ರಾಜಕೀಯ ಚಿಂತಕರು, ನಾಯಕರು ರಾಷ್ಟ್ರೀಯವಾದಕ್ಕೆ ಹೊಸ

ಸ್ವರೂಪವನ್ನು ನೀಡುವ ಪ್ರಯತ್ನವನ್ನು ಮಾಡಿದ್ದಾರೆ. ಅಂತಹ ಸಂದರ್ಭದಲ್ಲಿ ಮಾರ್ಕ್ಸ್‌ವಾದ ರಾಷ್ಟ್ರದ ರಚನೆಯ ಸಮಗ್ರ ತಳಹದಿಯಾದ ಉದಾಹರಣೆಯೂ ಇದೆ. ಭಾರತೀಯ ಸಂದರ್ಭದಲ್ಲಿ ಎಡಪಂಥೀಯ ಚಿಂತಕರು 'ರಾಷ್ಟ್ರ'ವನ್ನು ಅಪಾಯಕಾರಿ ವಿದ್ಯಮಾನವಾಗಿಯೇ ಗ್ರಹಿಸಿದ್ದು ಹೆಚ್ಚು. ಕಾರಣ 'ರಾಷ್ಟ್ರ' ಎನ್ನುವುದು ಬಹುತ್ವವನ್ನು ಕಳೆದು ಹಾಕುತ್ತದೆ, ದುಡಿಯುವ ವರ್ಗದ, ದಲಿತರ, ಮಹಿಳೆಯರ ಧ್ವನಿ ಬಲಿಷ್ಠ ರಾಷ್ಟ್ರದೊಳಗೆ ದಮನಿಸಲ್ಪಡುತ್ತದೆ ಎಂಬ ಕಾರಣದಿಂದ ರಾಷ್ಟ್ರವನ್ನು ಅಪಾಯಕಾರಿ ಸಂಗತಿಯಾಗಿಯೇ ಪರಿಗಣಿಸುತ್ತಾರೆ. ಜೊತೆಗೆ 'ರಾಷ್ಟ್ರ' ಪರಿಕಲ್ಪನೆಯೇ ಪಶ್ಚಿಮದಿಂದ ಉತ್ಪಾದಿಸಲ್ಪಟ್ಟದ್ದು. ಅದು ಹಿಂಸೆಗೆ ಪ್ರೇರಕವಾದುದು, ವಿಭಜನಕಾರಿಯಾದುದು ಎಂಬ ಅಭಿಪ್ರಾಯ ಈ ವರ್ಗದ ಚಿಂತಕರಲ್ಲಿದೆ. 'ಏಕತೆ'ಯ ಹೆಸರಿನಲ್ಲಿ ಅಧಿಕಾರ ಕೇಂದ್ರಗಳು ಹಲವು ರಾಷ್ಟ್ರಗಳಾಗಬಹುದಾದ ಧ್ವನಿಯನ್ನು ಪ್ರತ್ಯೇಕತಾವಾದದ ಹೆಸರಿನಲ್ಲಿ ದುರ್ಬಲಗೊಳಿಸುವುದಾಗಿ ಈ ಚಿಂತಕರು ಭಾವಿಸುತ್ತಾರೆ. ಒಂದು ರಾಷ್ಟ್ರವೆನ್ನುವುದು ರೂಪುಗೊಳ್ಳುವುದೇ ಆದರೂ ಅಂಚಿಗೆ ತಳ್ಳಲ್ಪಟ್ಟ ಸಮುದಾಯ, ಭಾಷೆ, ಸಂಸ್ಕೃತಿಗಳನ್ನು ಒಳಗೊಂಡೇ ರೂಪುಗೊಳ್ಳಬೇಕು ಎಂಬ ಆಶಯ ಈ ಚಿಂತನಾ ಪರಂಪರೆಯಲ್ಲಿದೆ.

**೨. ಸಾಂಸ್ಕೃತಿಕ ರಾಷ್ಟ್ರೀಯವಾದ:**

ಭಾರತೀಯ ಸಂದರ್ಭದಲ್ಲಿ ಸಾಕಷ್ಟು ಚರ್ಚೆಯನ್ನು ಹುಟ್ಟುಹಾಕಿರುವ ರಾಷ್ಟ್ರೀಯವಾದದ ಚಿಂತನಾ ಧಾರೆಯಿದು. ಭಾರತದಲ್ಲಿ 'ರಾಷ್ಟ್ರ' ಪರಿಕಲ್ಪನೆಯೇ ಇರಲಿಲ್ಲ. ಅದು ವಸಾಹತುಶಾಹಿಯ ಕೊಡುಗೆ. ಬ್ರಿಟಿಷರು ಬರುವ ಪೂರ್ವದಲ್ಲಿ ಭಾರತ ಒಂದು ರಾಷ್ಟ್ರವೇ ಆಗಿರಲಿಲ್ಲ ಎಂಬ ಪಶ್ಚಿಮದ ವಾದವನ್ನು ಭಾರತೀಯ ಚಿಂತನೆಯ ಹಿನ್ನಲೆಯಲ್ಲಿ ಮುಖಾಮುಖಿಯಾಗಿಸಿದ ಚಿಂತಕರು ಮಂಡಿಸಿದ್ದು 'ಸಾಂಸ್ಕೃತಿಕ ರಾಷ್ಟ್ರೀಯವಾದ'ದ ಪರಿಕಲ್ಪನೆಯನ್ನು. ಈ ಚಿಂತಕ ವರ್ಗ ಮಂಡಿಸುವಂತೆ ಭಾರತದಲ್ಲಿನ ರಾಷ್ಟ್ರೀಯವಾದ ಅದು ರಾಜಕೀಯ ಆಡಳಿತವನ್ನು ಪ್ರತಿಪಾದಿಸುವ 'ರಾಷ್ಟ್ರಪ್ರಭುತ್ವ'(nation state)ದ್ದಲ್ಲ. ಬದಲಾಗಿ ಅದು ಸಾಂಸ್ಕೃತಿಕ ರಾಷ್ಟ್ರೀಯತೆ. ಈ ಚಿಂತನೆಯು ದೇಶವನ್ನು ಈ ಮೊದಲಿನಿಂದಲೂ ಒಂದಾಗಿ ಬೆಸೆದದ್ದು ಇಲ್ಲಿನ ಆಡಳಿತವಲ್ಲ, ಇಲ್ಲಿನ ಸಂಸ್ಕೃತಿ ಎಂದು ನಂಬುತ್ತದೆ. ಆಡಳಿತ ವ್ಯವಸ್ಥೆ ರಾಜ್ಯ ರಾಜ್ಯದ ನಡುವೆ ಬೇರೆ ಬೇರೆಯಿದ್ದರೂ ಇಡೀ ರಾಷ್ಟ್ರವನ್ನು ಬಹಳ ಸೂಕ್ಷ್ಮವಾಗಿ ಬೆಸೆದ ಒಂದು ಕೊಂಡಿ ಇದೆ. ಅದು ಇಲ್ಲಿನ ಸಂಸ್ಕೃತಿಯದ್ದು ಎನ್ನುತ್ತದೆ ಈ ಚಿಂತನೆ. " ದೇಶವೆಲ್ಲ

ಪವಿತ್ರವೆಂದು ಭಾವಿಸಿರುವ ನಾಲ್ಕು ಪುಣ್ಯ ತೀರ್ಥಗಳು ನಾಲ್ಕು ದಿಗ್ಭಾಗಗಳಲ್ಲಿದೆ. ಗಂಗಾದಿ ನದಿಗಳನ್ನೂ, ಮಹೇಂದ್ರಾದಿ ಕುಲ ಪರ್ವತಗಳನ್ನೂ, ಅಯೋಧ್ಯಾದಿ ಮೋಕ್ಷದಾಯಕ ನಗರಗಳನ್ನೂ, ದೇಶದ ಎಲ್ಲ ಭಾಗಗಳವರೂ ಪಾವನವೆಂದು ಸದಾ ಸ್ಮರಿಸುತ್ತಾರೆ. ಮಾಲೆಯಲ್ಲಿನ ಮಣಿಗಳಂತೆ ೫೨ ಶಕ್ತಿಪೀಠಗಳು ದೇಶದುದ್ದಗಲಕ್ಕೂ ಹರಡಿದೆ. ಶೈವ ವೈಷ್ಣವಾದಿ ಯಾವುದೇ ಭೇದ ಭಾವಗಳಿಲ್ಲದೆ ಶ್ರದ್ಧಾಳುಗಳು ಎಲ್ಲ ಕ್ಷೇತ್ರಗಳನ್ನು ಭಕ್ತಿಯಿಂದ ಸಂದರ್ಶಿಸುತ್ತಾರೆ. ಇದೆಲ್ಲ ಸೂಚಿಸುವುದು ಏಕಾತ್ಮತೆಯನ್ನಲ್ಲವೆ? ಈ ಏರ್ಪಾಡುಗಳನ್ನೆಲ್ಲ ಆಂಗ್ಲರು ಮಾಡಿಟ್ಟರೆ"? [೨] ಎನ್ನುವ ಚಿಂತಕ ಎಸ್.ಆರ್ ರಾಮಸ್ವಾಮಿಯವರ ಮಾತು ಸಾಂಸ್ಕೃತಿಕ ರಾಷ್ಟ್ರೀಯವಾದದ ಮೂಲ ಧಾತುಗಳನ್ನು ಹೇಳುತ್ತದೆ.

ಕನ್ನಡದಲ್ಲಿ ಕಟ್ಟಲಾದ ರಾಷ್ಟ್ರೀಯತೆಯ ಚಿಂತನೆಗಳಲ್ಲಿ ಸಾಂಸ್ಕೃತಿಕ ಸ್ವರೂಪದ ರಾಷ್ಟ್ರೀಯತೆಯೇ ಹೆಚ್ಚು ಪ್ರಾಧಾನ್ಯತೆಯನ್ನು ಪಡೆದಿದೆ. ಇದಕ್ಕೆ ನಿದರ್ಶನವಾಗಿ ಕನ್ನಡದ ಕವಿಗಳು ಕಟ್ಟಿದ ರಾಷ್ಟ್ರೀಯತೆಯ ಸ್ವರೂಪವನ್ನು ಗಮನಿಸಬಹುದು. ಭೂಪಟವಾದಿ ನೆಲೆಯ ರಾಷ್ಟ್ರಕ್ಕಿಂತ ಸಾಂಸ್ಕೃತಿಕ ವಿವರಗಳುಳ್ಳ, ಗಡಿಗುರುತುಗಳನ್ನು ಮೀರಿದ ರಾಷ್ಟ್ರವನ್ನೇ ಕವಿತೆಗಳಲ್ಲಿ ಮಂಡಿಸಿರುವುದನ್ನು ನೋಡಬಹುದು. ಹೀಗಾಗಿ ರಾಷ್ಟ್ರವನ್ನು ಕುರಿತು ಮಾತನಾಡುವ ಕವಿ ರಾಷ್ಟ್ರವನ್ನು ಉದ್ದೇಶಿಸಿ ಹೇಳುವ ವಿವರಗಳಿಗಾಗಿ ಇಲ್ಲಿನ ಪ್ರಕೃತಿ, ನದಿ, ಪರ್ವತ, ಸಾಂಸ್ಕೃತಿಕ ವೀರರು, ಗತ ಸಾಮ್ರಾಜ್ಯಗಳ ವೈಭವಗಳನ್ನು ವರ್ಣಿಸುತ್ತಾ ಅವುಗಳ ನೆನಪುಗಳ ಮೂಲಕ ಕಟ್ಟುವ ರಾಷ್ಟ್ರದ ಚಿಂತನೆ ಇಲ್ಲಿದೆ. ಭಾಷೆ, ಮತ, ಜನಾಂಗ ಆಧಾರಿತವಲ್ಲದ, ಭೂಗಡಿರೇಖೆಗಳೆ ಅಂತಿಮವಲ್ಲದ ರಾಷ್ಟ್ರ ಪರಿಕಲ್ಪನೆ ಇಲ್ಲಿದೆ. ವೈವಿಧ್ಯತೆಗಳನ್ನು, ಬಹುತ್ವವನ್ನು ನಿರಾಕರಿಸದ ರಾಷ್ಟ್ರೀಯತೆ ಇದು. ಸಾಂಸ್ಕೃತಿಕ ರಾಷ್ಟ್ರವಾದವನ್ನು ಬಲಪಂಥೀಯ ರಾಷ್ಟ್ರವಾದವೆಂದು ಹೇಳಿ ಅದು ಅಪಾಯಕಾರಿಯಾದುದು, ಏಕತ್ವ ಪ್ರತಿಪಾದನೆಯೇ ಇದರ ಲಕ್ಷಣ, ಧರ್ಮ ಮತ್ತು ಸಂಸ್ಕೃತಿಗಳ ಆಧಾರದ ಮೇಲೆ ರಾಷ್ಟ್ರವನ್ನು ಪ್ರತಿಪಾದಿಸುತ್ತಾ ವೈವಿಧ್ಯತೆಯನ್ನು ನಿರಾಕರಿಸುತ್ತದೆ ಎಂಬ ಅಪಾದನೆಯೂ ಇದೆ. ಈ ಸಂಗತಿಗಳನ್ನು ಸಾಂಸ್ಕೃತಿಕ ರಾಷ್ಟ್ರೀಯವಾದದ ಕುರಿತು ವಿಚಾರವನ್ನು ಮಂಡಿಸುವ ಡಾ. ಅಜಕ್ಕಳ ಗಿರೀಶ್ ಭಟ್ ನಿರಾಕರಿಸುತ್ತಾರೆ. " ಒಂದು ಐಡಿಯಾಲಜಿಯಾಗಿ ರಾಷ್ಟ್ರವು ತನ್ನನ್ನು ತಾನು ನಿರ್ವಚಿಸಿಕೊಳ್ಳಬೇಕಾಗುತ್ತದೆ. ತನ್ನ 'ಗುರುತು' ಒಂದನ್ನು, 'ಅನನ್ಯತೆ'ಯೊಂದನ್ನು ಸ್ಥಾಪಿಸಿ ಕೊಳ್ಳಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ 'ಏಕತೆ' 'ಸಾಮರಸ್ಯ' ಇವೆಲ್ಲ ಅದರ

ಪರಿಭಾಷೆಗಳಾಗುತ್ತದೆ. ಭಾರತದಂತಹ ಬಹುಸಂಸ್ಕೃತಿಗಳ ದೇಶದಲ್ಲಿ ಈ ರೀತಿ ಮತ್ತೆ ಮತ್ತೆ ರಾಷ್ಟ್ರೀಯತೆಯನ್ನು ದೃಢೀಕರಿಸಿಕೊಳ್ಳುವ ಅಗತ್ಯ ಹೆಚ್ಚೇ ಇರುತ್ತದೆ. ಭಾರತದ ಆಂತರಿಕ ವೈರುಧ್ಯಗಳು ಸ್ವಾತಂತ್ರ್ಯ ಹೋರಾಟದ ಕಾಲದಿಂದಲೇ ನಾಯಕರುಗಳಿಗೆ ಆತಂಕವೊಡ್ಡುತ್ತಲೇ ಬಂದಿದೆ. ಹೀಗಾಗಿಯೇ ಭಗವದ್ಗೀತೆ, ವಂದೇಮಾತರಂ ಇವುಗಳೆಲ್ಲ ಆಂತರಿಕ ಭಿನ್ನತೆಗಳನ್ನು ಮೀರುವ ಮತ್ತು ಆ ಮೂಲಕ ರಾಷ್ಟ್ರವನ್ನು ಬಲಿಷ್ಠಗೊಳಿಸುವ ಉದ್ದೇಶದಿಂದ ರಾಷ್ಟ್ರೀಯವಾದಿ ಸಂಕಥನಗಳಲ್ಲಿ ಮುನ್ನೆಲೆಗೆ ಬಂದವು. ತಿಲಕರು ಸಾರ್ವಜನಿಕ ಗಣೇಶೋತ್ಸವವನ್ನು ಆರಂಭಿಸಿದ್ದು ಪ್ರಾಯೋಗಿಕತೆಯ ದೃಷ್ಟಿಯಿಂದ ಒಂದು ಮುಖ್ಯ ಉದಾಹರಣೆ. ಹಾಗೆಂದು ಇಂಥ ಕ್ರಮಗಳಿಂದಾಗಿ ಸ್ಥಳೀಯ ಸಂಸ್ಕೃತಿಗಳು ನಾಶವಾದವು ಅಥವಾ ಬದಿಗೆ ಸರಿಸಲ್ಪಟ್ಟವು ಎಂದು ಹೇಳುವುದು ತಪ್ಪಾಗುತ್ತದೆ" [೩] ಎನ್ನುತ್ತಾ ಸಾಂಸ್ಕೃತಿಕ ರಾಷ್ಟ್ರವಾದದ ಸ್ವರೂಪವನ್ನು ವಿಶ್ಲೇಷಿಸುತ್ತಾರೆ. ಹೀಗೆ ಸಾಂಸ್ಕೃತಿಕ ರಾಷ್ಟ್ರೀಯವಾದವು ಕನ್ನಡದಲ್ಲಿ ರಾಷ್ಟ್ರೀಯತೆಯ ಕುರಿತ ಮಹತ್ವದ ಚರ್ಚೆಯನ್ನು ಹುಟ್ಟುಹಾಕಿದೆ.

**೩. ವಿಶ್ವಪ್ರಜ್ಞೆಯ ರಾಷ್ಟ್ರೀಯತೆ:**

ಒಂದು ಸಮಾನ ಭಾಷೆ, ಮತ, ಧರ್ಮ, ಚರಿತ್ರೆ, ಜನಾಂಗದ ಆಧಾರದಲ್ಲಿ ಪಶ್ಚಿಮದ ರಾಷ್ಟ್ರಗಳು ಕಟ್ಟಲ್ಪಟ್ಟಿವೆ. ಈ ರಾಷ್ಟ್ರಗಳು ಆಕ್ರಮಣಕಾರಿಯೂ ಹೌದು. ಹಾಗಾಗಿ 'ರಾಷ್ಟ್ರೀಯತೆ'ಯೇ ಅಪಾಯಕಾರಿ ಎಂಬ ಭಾವನೆಯೂ ಇದೆ. ಕನ್ನಡದಲ್ಲಿನ ರಾಷ್ಟ್ರೀಯತೆಯ ಕುರಿತ ಚಿಂತನೆಗಳ ಸಂದರ್ಭದಲ್ಲಿ ರಾಷ್ಟ್ರೀಯತೆಯನ್ನು ಒಂದು ಅಪಾಯಕಾರಿ ವಿದ್ಯಮಾನ, ಆತಂಕಕಾರಿಯಾದದ್ದು ಎಂದೂ ವ್ಯಾಖ್ಯಾನಿಸಲಾಗಿದೆ. ಆದರೆ ಕನ್ನಡದ ಸೃಜನಶೀಲ ಸಾಹಿತ್ಯ ರಾಷ್ಟ್ರೀಯತೆಯು ಅಪಾಯಕಾರಿಯಲ್ಲ. ಅದು ರಾಷ್ಟ್ರದ ಚಿಂತನೆಯಾಗುತ್ತಲೇ ವಿಶ್ವಪ್ರಜ್ಞೆಯೂ ಆಗಬಲ್ಲದು ಎಂಬುದನ್ನು ತೋರಿಸಿಕೊಟ್ಟಿದೆ.

ರಾಷ್ಟ್ರೀಯವಾದ ಸಂಕುಚಿತವಾದವಲ್ಲ. ಅದು ವಿಶ್ವಪ್ರಜ್ಞೆಗೆ ಪೂರಕ ಎನ್ನುವುದನ್ನು ಭಾರತೀಯ ಚಿಂತಕರು ತೋರಿಸಿಕೊಟ್ಟಿದ್ದಾರೆ. ಮಹಾತ್ಮ ಗಾಂಧಿಯವರು ಕೂಡ ರಾಷ್ಟ್ರೀಯವಾದ ಸಂಕುಚಿತ ವಾದವಲ್ಲ ಎನ್ನುತ್ತಿದ್ದರು. "ರಾಷ್ಟ್ರೀಯವಾದಿಯಾಗದೆ ಅಂತರರಾಷ್ಟ್ರೀಯವಾದಿಯಾಗಲು ಸಾಧ್ಯವಿಲ್ಲ. ರಾಷ್ಟ್ರೀಯವಾದವು ಒಂದು ವಾಸ್ತವವಾದಾಗ ಮಾತ್ರ ಅಂತರರಾಷ್ಟ್ರೀಯವಾದವು ಅಸ್ತಿತ್ವ ಪಡೆಯಲು ಸಾಧ್ಯ. ರಾಷ್ಟ್ರೀಯವಾದವು ಕೆಟ್ಟದ್ದಲ್ಲ. ಬದಲಾಗಿ ಇತರರನ್ನು ಅನ್ಯರೆಂದು ಪರಿಗಣಿಸುವ

ಆಧುನಿಕ ರಾಷ್ಟ್ರಗಳ ಮನೋಭಾವ ಇವೆಲ್ಲ ಕೆಡುಕುಗಳು. ಭಾರತೀಯ ರಾಷ್ಟ್ರವಾದವು ಇದಕ್ಕಿಂತ ಭಿನ್ನ ದಾರಿಯಲ್ಲಿದೆ ಎಂದು ನಾನು ಭಾವಿಸುತ್ತೇನೆ"[9] ಎನ್ನುತ್ತಾರೆ.

ಸ್ಥಳೀಯತೆ ರಾಷ್ಟ್ರಕ್ಕೆ ವಿರೋಧಿಯಲ್ಲದ, ಆ ಮೂಲಕ ರಾಷ್ಟ್ರ ವಿಶ್ವಕ್ಕೆ ವಿರುದ್ಧವಲ್ಲದ ಒಂದು ಕಲ್ಪನೆ ಕನ್ನಡದಲ್ಲಿದೆ. ಕನ್ನಡದ ಮೂಲಕ ಭಾರತವನ್ನೂ, ವಿಶ್ವವನ್ನೂ ನೋಡುವ ಸಾಧ್ಯತೆಯನ್ನು ಕನ್ನಡದ ಚಿಂತಕರು ತೋರಿಸಿಕೊಟ್ಟಿದ್ದಾರೆ. ಉತ್ಕಟ ಕನ್ನಡಾಭಿಮಾನವನ್ನು ಹೊಂದಿಯೂ ರಾಷ್ಟ್ರೀಯವಾದಿಗಳಾದ ಚಿಂತಕರಿಗೆ, ರಾಷ್ಟ್ರೀಯವಾದಿಯಾಗಿಯೂ ವಿಶ್ವಮಾನವತೆಯ ಸಂದೇಶವನ್ನು ನೀಡಲು ಸಾಧ್ಯವಾಯಿತು. ಭೂಮಂಡಲವನ್ನೇ 'ಏಕರಾಷ್ಟ್ರ' ಎನ್ನುವುದಕ್ಕೂ ಸಾಧ್ಯವಾಯಿತು. ಅಂದರೆ ರಾಷ್ಟ್ರೀಯವಾದಿಯಾಗುವುದು ವಿಶ್ವಪ್ರಜ್ಞೆಗೆ ವಿರೋಧಿಯಾಗಿರಲಿಲ್ಲ. ಭಾರತೀಯ ರಾಷ್ಟ್ರಪ್ರಜ್ಞೆ ವಿಶ್ವಪ್ರಜ್ಞೆಗೆ ಪೂರಕವಾಗಿಯೇ ಇತ್ತು. ಕನ್ನಡ ಪ್ರಜ್ಞೆ ಹೇಗೆ ಭಾರತ ಪ್ರಜ್ಞೆಗೆ ವಿರುದ್ಧವಾಗಿರಲಿಲ್ಲವೋ ಹಾಗೆಯೇ ಭಾರತಪ್ರಜ್ಞೆ ವಿಶ್ವಪ್ರಜ್ಞೆಗೆ ವಿರುದ್ಧವಾಗಿರಲಿಲ್ಲ. ಹೇಗೆ ಭಾರತಾಂತರ್ಗತ ಕರ್ನಾಟಕ ಪ್ರಜ್ಞೆ ಇತ್ತೋ ಹಾಗೆಯೇ ವಿಶ್ವ ಅಂತರ್ಗತವಾದ ಭಾರತ ಪ್ರಜ್ಞೆಯಿದು. ಕನ್ನಡದ ಕವಿಗಳಾದ ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ.ಯವರಲ್ಲಿ ರಾಷ್ಟ್ರೀಯ ಭಾವನೆ ವಿಶ್ವಪ್ರಜ್ಞೆಯ ಭಾಗವೇ ಆಗಿತ್ತು. ಗಡಿರೇಖೆಗಳನ್ನು ಮೀರಿದ ಭ್ರಾತೃತ್ವದ ಭಾವದಿಂದ ಬೆಸೆಯಲ್ಪಟ್ಟ ಆಕ್ರಮಣಕಾರಿಯಲ್ಲದ ರಾಷ್ಟ್ರಪ್ರಜ್ಞೆಯ ರಾಷ್ಟ್ರೀಯವಾದಿಗಳಾಗಿದ್ದರು.

ಕನ್ನಡದಲ್ಲಿ ಈ ಮೂರು ಬಗೆಯ ರಾಷ್ಟ್ರಪಜ್ಞೆಯ ಕುರಿತು ಚಿಂತನೆಗಳು ನಡೆದಿದೆ. ಈ ಮೂರು ಬಗೆಯ ಚಿಂತನ ಕ್ರಮದ ಹಿನ್ನೆಲೆಯಿಂದ ಹುಟ್ಟಿಕೊಂಡ ವಾಗ್ವಾದಗಳನ್ನು ಇಟ್ಟುಕೊಂಡು ಈ ಅಧ್ಯಯನಕ್ಕೆ ಆಯ್ಕೆ ಮಾಡಿದ ಕವಿಗಳ ಕವಿತೆಗಳನ್ನು ತಾತ್ವಿಕವಾಗಿ ವಿವೇಚಿಸಲಾಗಿದೆ.

ರಾಷ್ಟ್ರ ಪರಿಕಲ್ಪನೆಯನ್ನು ಈ ಮೇಲೆ ಹೇಳಿದ ಮೂರು ಬಗೆಯ ತಾತ್ವಿಕ ಹಿನ್ನೆಲೆಯಲ್ಲಿ ವಿವೇಚಿಸಿದಂತೆ, ಕನ್ನಡದ 'ನಾಡು' ಪರಿಕಲ್ಪನೆಯನ್ನೂ ಕೂಡ ವಿವಿಧ ಸಿದ್ಧಾಂತಗಳ ಅರಿವಿನೊಂದಿಗೆ ವಿಶ್ಲೇಷಿಸುವ ಪ್ರಯತ್ನ ನಡೆದಿದೆ. ಬಹಳ ನಿಖರವಾದ ರೀತಿಯಲ್ಲಿ ವಿಭಜಿಸಿದ ಸಿದ್ಧಾಂತವಾಗಿ ಮಂಡಿಸಲ್ಪಡದಿದ್ದರೂ ಈವರೆಗೆ 'ನಾಡು' ಪರಿಕಲ್ಪನೆಯ ಕುರಿತು ನಡೆದ ಚರ್ಚೆಗಳ ಆಧಾರದಲ್ಲಿ ಪ್ರಧಾನವಾಗಿ ಎರಡು ಬಗೆಯ ನಾಡಿನ ಚಿಂತನೆಗಳನ್ನು ನೋಡಬಹುದಾಗಿದೆ.

1. ಉಪರಾಷ್ಟ್ರೀಯ ಕರ್ನಾಟಕ ಅಥವಾ ಕನ್ನಡ ರಾಷ್ಟ್ರೀಯತೆ

**೧. ಉಪರಾಷ್ಟ್ರೀಯ ಕರ್ನಾಟಕ ಅಥವಾ ಕನ್ನಡ ರಾಷ್ಟ್ರೀಯತೆ**

ಕನ್ನಡದಲ್ಲಿ ನಾಡಿನ ಕುರಿತ ಚಿಂತನೆ ಪ್ರಾಚೀನ ಕಾಲದಿಂದಲೇ ನಡೆದುಕೊಂಡು ಬಂದಿದೆ. ಆದರೆ ಅದು ನೇರವಾಗಿ ಪ್ರಭುತ್ವಕ್ಕೆ ಸಂಬಂಧಿಸಿದ ಸಂಗತಿಯಾಗಿರಲಿಲ್ಲ. ಭಾಷೆಯ ಮೂಲಕ ನಾಡನ್ನು ಪ್ರಾಸಂಗಿಕವಾಗಿ ವಿವರಿಸಿದ ಸಂದರ್ಭಗಳಿವೆ. ಬಹಳ ನಿಖರವಾಗಿ ನಾಡನ್ನು ಪರಿಕಲ್ಪಿಸಿಕೊಂಡು ಅದನ್ನು ತಾತ್ವಿಕವಾಗಿ ಗ್ರಹಿಸಿ ಮಂಡಿಸಿದ್ದು ಆಧುನಿಕ ಸಂದರ್ಭದಲ್ಲೇ. ಅಂದರೆ ವಸಾಹತುಶಾಹಿಯ ಆಡಳಿತ ಕಾಲಘಟ್ಟದ ಅನುಭವದಿಂದಲೇ ಈ ಬಗೆಯ ನಾಡಿನ ಚಿಂತನೆ ರೂಪ ಪಡೆಯಿತು.

ನಾಡನ್ನು 'ಉಪರಾಷ್ಟ್ರೀಯತೆ' ಎಂದು ಗುರುತಿಸಲಾಗಿದ್ದು, ಈ ಉಪರಾಷ್ಟ್ರೀಯತೆ ಮುಂದೊಂದು ದಿನ ತನ್ನ 'ಉಪ'ಸ್ಥಿತಿಯನ್ನು ಕಳೆದುಕೊಂಡು ರಾಷ್ಟ್ರವೇ ಆಗಬಹುದು ಎಂಬ ಚರ್ಚೆಯನ್ನು ಹುಟ್ಟುಹಾಕಿದವರು ಚಿಂತಕ ಡಿ.ಆರ್.ನಾಗರಾಜ್. ಉಪರಾಷ್ಟ್ರೀಯತೆಗಳು ಪೂರ್ಣರಾಷ್ಟ್ರೀಯತೆಗಳಾಗುವವು ಎನ್ನುತ್ತಾರೆ ಅವರು. ಅಂದರೆ ಈ ಚಿಂತನಾ ಕ್ರಮದಲ್ಲಿ ಕನ್ನಡದ್ದು ಉಪರಾಷ್ಟ್ರೀಯತೆ ಎಂದು ಗುರುತಿಸುತ್ತಲೇ, ಮುಂದಿನ ಪೂರ್ಣ ರಾಷ್ಟ್ರೀಯತೆಯ ಭ್ರೂಣ ರೂಪ ಇದು ಎಂಬ ಆಲೋಚನೆ ಇದೆ. ಹಾಗಾಗಿ ಈ 'ಉಪ' ಸ್ಥಿತಿ ರಾಷ್ಟ್ರದ ಅಧೀನವಾದ ಸ್ಥಿತಿಯಾಗಿದ್ದು ಅದನ್ನು ಕಳೆದುಕೊಳ್ಳುವುದೇ ಅರ್ಥಪೂರ್ಣಸ್ಥಿತಿ ಎಂದು ಭಾವಿಸಿದೆ. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ನೋಡಿದಾಗ ನಾಡು ಮತ್ತು ರಾಷ್ಟ್ರದ ನಡುವಿನ ಸಂಬಂಧ ಸೌಹಾರ್ದದ್ದಲ್ಲ. ಪ್ರಭುತ್ವದ ರೂಪದ ಅಧೀನತೆಯದ್ದು. ರಾಷ್ಟ್ರದ ಯಜಮಾನಿಕೆಗೆ ಒಳಪಟ್ಟದ್ದು ನಾಡು ಎಂಬ ಚಿಂತನೆಯಿದು. ಕನ್ನಡದ ಚಿಂತಕರು ಕೆಲವೊಮ್ಮೆ ಕನ್ನಡ ನಾಡು ನುಡಿಯ ಕುರಿತು ಮಾತನಾಡುವಾಗ ಇದನ್ನು 'ಕನ್ನಡ ರಾಷ್ಟ್ರೀಯತೆ' ಎಂದೇ ಗುರುತಿಸುತ್ತಾರೆ. ಇದು ಉಪರಾಷ್ಟ್ರೀಯತೆಯ ಸಿದ್ಧಾಂತದ ಮುಂದುವರಿದ ರೂಪ. ಕನ್ನಡ ರಾಷ್ಟ್ರೀಯತೆ ಎನ್ನುವಾಗ ಅದು ಭಾರತ ರಾಷ್ಟ್ರೀಯತೆಗೆ ಪರ್ಯಾಯವೂ, ಪ್ರತಿಸ್ಪರ್ಧಿಯೂ ಆಗಬಹುದಾದ ಸಾಧ್ಯತೆ ಇದೆ.

ಪಶ್ಚಿಮ ರಾಷ್ಟ್ರ ಸಿದ್ಧಾಂತದ ಮೂಲ ಅವಶ್ಯಕತೆಗಳು ಭಾರತೀಯ ರಾಷ್ಟ್ರೀಯತೆಯ ಸಂದರ್ಭದಲ್ಲಿ ಕಾಣದೇ ಇದ್ದಾಗ ಭಾರತ ಒಂದು ರಾಷ್ಟ್ರವಲ್ಲ ಎಂಬ ಸಿದ್ಧಾಂತವನ್ನು ಕಟ್ಟಲಾಗಿತ್ತು. ಅದೇ ಪಶ್ಚಿಮದ ರಾಷ್ಟ್ರ ಸಿದ್ಧಾಂತವನ್ನು ಕರ್ನಾಟಕದ

ರಚನೆಯ ಸ್ವರೂಪವನ್ನು ಮುಂದಿಟ್ಟುಕೊಂಡು ಇದನ್ನು ಕನ್ನಡ ರಾಷ್ಟ್ರೀಯತೆ ಎಂದು ಗುರುತಿಸಲಾಗುತ್ತದೆ. ಈ ಮಾದರಿ ಪರಸ್ಪರ ಒಳಗೊಳ್ಳುವಿಕೆಯ ಮಾದರಿಯದ್ದಲ್ಲ. ಈ ಚಿಂತನೆ ಕರ್ನಾಟಕ ಮತ್ತು ಭಾರತದ ಸಂಬಂಧವನ್ನು ಅತ್ಯಂತ ಸಂಕೀರ್ಣವಾಗಿಸಿದೆ ಮತ್ತು ಪರಸ್ಪರ ಎದುರಾಳಿಯನ್ನಾಗಿಸುತ್ತದೆ.

**೨. ಭಾರತಾಂತರ್ಗತ ಕರ್ನಾಟಕ:**

ನಾಡಿನ ಕುರಿತ ಚಿಂತನಾಧಾರೆಯಲ್ಲಿ ಪ್ರಧಾನಧಾರೆ 'ಭಾರತಾಂತರ್ಗತ ಕರ್ನಾಟಕ' ಮಾದರಿಯದ್ದು. ನಾಡನ್ನು ಪ್ರತ್ಯೇಕ ರಾಷ್ಟ್ರವೊಂದರ ಭ್ರೂಣರೂಪ ಎಂದು ಭಾವಿಸುವ ಕ್ರಮಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿರುವ ಚಿಂತನೆಯಿದು. ಈ ಚಿಂತನೆ ಕನ್ನಡ ನಾಡು ಅದು ಅಖಂಡ ಭಾರತದ ಒಂದು ಭಾಗ ಎಂದು ಭಾವಿಸುವುದು. ಇಲ್ಲಿ ಸಂಬಂಧದ ಸ್ವರೂಪದಲ್ಲಿ ಸಂಘರ್ಷವಿಲ್ಲ, ಹೊಂದಾಣಿಕೆ ಇದೆ. ಇದನ್ನು ಕನ್ನಡದ ಚಿಂತಕರು ಹಲವು ಬಗೆಯಲ್ಲಿ ಪ್ರಕಟಪಡಿಸಿದ್ದಾರೆ. ಕುವೆಂಪು ಅವರು 'ಜೈ ಭಾರತ ಜನನಿಯ ತನುಜಾತೆ' ಎಂಬ ಕವಿತೆಯಲ್ಲಿ ಕರ್ನಾಟಕವನ್ನು ಭಾರತ ಜನನಿಯ ಮಗಳು ಎಂಬ ಕಲ್ಪನೆಯನ್ನು ಮಂಡಿಸಿ ತಾಯಿ–ಮಗಳ ಸಂಬಂಧದ ಸ್ವರೂಪದಲ್ಲಿ ನಾಡನ್ನು ಕಟ್ಟಿಕೊಟ್ಟಿದ್ದಾರೆ. ತಾಯಿ–ಮಗಳ ಸಂಬಂಧವನ್ನು ಮಂಡಿಸಿ ಸಂಘರ್ಷ ಹುಟ್ಟಬಹುದಾದ ಎಲ್ಲಾ ಸಾಧ್ಯತೆಯನ್ನು ನಿವಾರಿಸಿಕೊಂಡಿದ್ದಾರೆ. ಇದೇ ಬಗೆಯ ಆಲೋಚನೆ ಬಿ.ಎಂ.ಶ್ರೀ.ಯವರ 'ಭರತಮಾತೆಯ ನುಡಿ'ಯಲ್ಲಿ , ದ.ರಾ.ಬೇಂದ್ರೆಯವರ 'ಕನ್ನಡ ಕಂದವ್ವನ ಲಾಲಿ' ಕವಿತೆಯಲ್ಲಿ ಬೇರೆ ಬೇರೆ ರೂಪದಲ್ಲಿ ಪ್ರಕಟವಾಗಿದೆ.

ಕನ್ನಡದ ಕೇಂದ್ರದಿಂದ ಭಾರತವನ್ನು, ವಿಶ್ವವನ್ನೂ ಕಂಡವರು ಈ ಚಿಂತಕರು. ಕನ್ನಡ, ಕನ್ನಡನಾಡು ಎರಡೂ ಪ್ರಾಧಾನ್ಯತೆಯನ್ನು ಪಡೆದರೂ ಅದು ಭಾರತವನ್ನು ಬಿಟ್ಟು ಅಲ್ಲ ಎಂಬ ಪ್ರಜ್ಞೆ ಸದಾ ಎಚ್ಚರವಾಗಿದೆ. ಈ ಬಗೆಯ ಕಲ್ಪನೆ ವೈವಿಧ್ಯತೆಯನ್ನು ಒಪ್ಪಿಕೊಂಡ ಸ್ವರೂಪದ್ದು. ಇದು ಕನ್ನಡ ಕಟ್ಟಿದ ಸಮನ್ವಯಶೀಲ ನಾಡಿನ ಚಿಂತನೆ. ವಸಾಹತುಶಾಹಿ ಪ್ರಭುತ್ವದ ವಿರುದ್ಧ ನಡೆಯುತ್ತಿದ್ದ ಹೋರಾಟದಷ್ಟೇ ತೀವ್ರವಾಗಿ ಕರ್ನಾಟಕ ಏಕೀಕರಣದ ಚಳವಳಿಯು ನಡೆಯುತ್ತಿದ್ದರೂ ಇವೆರಡರ ನಡುವೆ ಸಂಘರ್ಷರಹಿತ ಸಂಬಂಧ ಇರಲು ಕಾರಣವಾದುದು ಇದೇ ಚಿಂತನೆಯಿಂದ. ಪರಸ್ಪರ ಪೂರಕವಾದ ಹೋರಾಟವಾಗಿ ಕಂಡುಬರುತ್ತಿತ್ತು. ಈ ಕಾರಣದಿಂದಾಗಿಯೇ ಭಾರತ ಮಾತೆಯ ಕುರಿತು ಮೈದುಂಬಿ ವರ್ಣಿಸುವ ಕನ್ನಡದ ಕವಿಯಲ್ಲಿ ಕರ್ನಾಟಕದ

ಬಗೆಗೆ ಮಾತನಾಡುವಾಗಲೂ ಅದೇ ಬಗೆಯ ದ್ವಂದ್ವರಹಿತ ಮನಸ್ಥಿತಿಯನ್ನು ಕಾಣಬಹುದು. ಪರಕೀಯ ಸಂಸ್ಕೃತಿಯ ವಿರೋಧವನ್ನು ಮಾಡುವ ಜೊತೆಗೆ ತನ್ನ ಪ್ರಾದೇಶಿಕ ಸಂಸ್ಕೃತಿಯ ಸತ್ವವನ್ನು ಹುಡುಕಿ ಸಮಾನಾಂತರವಾಗಿ ಕಟ್ಟುತ್ತಿದ್ದರು.

ಈ ಎರಡೂ ಪ್ರಕಾರದ ನಾಡಿನ ಚಿಂತನೆಗಳ ತಾತ್ವಿಕ ಹಿನ್ನೆಲೆಯಿಂದ ಕನ್ನಡದ ಕವಿಗಳ ನಾಡಿನ ಚಿಂತನೆ ಮತ್ತು ಅದರ ಸ್ವರೂಪವನ್ನು ಅಧ್ಯಯನಕ್ಕೊಳಪಡಿಸಲಿದ್ದು ಒಟ್ಟು ಚರ್ಚೆಯ ಸಾರವನ್ನು ಸಮಗ್ರವಾಗಿ ಗ್ರಹಿಸಿ ಮಂಡಿಸಲಾಗುವುದು.

## ೧.೪ ಅಧ್ಯಯನದ ವ್ಯಾಪ್ತಿ ಮತ್ತು ಆಕರಗಳು :

### ೧.೪.೧ ಕವಿಗಳ ವ್ಯಾಪ್ತಿ :

ವಸಾಹತುಶಾಹಿ ಕಾಲಘಟ್ಟದಲ್ಲಿ ಇಡೀ ರಾಷ್ಟ್ರಾದ್ಯಂತ ಜನಗಳಲ್ಲಿ ತಾವು ಸಾಂಸ್ಕೃತಿಕವಾಗಿ ಕುಸಿದು ಹೋಗುತ್ತಿದ್ದೇವೆ ಎಂಬ ಪ್ರಜ್ಞೆಯೊಂದು ಹುಟ್ಟಿದ ಪರಿಣಾಮವಾಗಿ ತಮ್ಮ ಸಂಸ್ಕೃತಿ, ಸಾಹಿತ್ಯದ ಕುರಿತು ಹೆಚ್ಚು ರಕ್ಷಣಾತ್ಮಕವಾದ ನಿಲುವುಗಳನ್ನು ವ್ಯಕ್ತಪಡಿಸುತ್ತಿದ್ದರು. ಇದಕ್ಕಾಗಿ ಜನಸಮುದಾಯಗಳು ತಮ್ಮ ಚರಿತ್ರೆಯ ಶೋಧವನ್ನು ಮಾಡಿಕೊಂಡು ಅದರೊಳಗಿಂದ ಹಿರಿಮೆಯನ್ನು ಸಾರುವ ಸಂಗತಿಗಳನ್ನು ಮರು ಸಂಯೋಜಿಸಿಕೊಳ್ಳುತ್ತಿದ್ದವು. ಹೀಗೆ ವಸಾಹತುಶಾಹಿಯ ಪ್ರಭಾವದಿಂದ ಹೊರಬರಲು ಸಾಂಸ್ಕೃತಿಕ ವಲಯ ಹಲವು ಉಪಾಯಗಳನ್ನು ಕಂಡುಕೊಳ್ಳುವ ಪ್ರಯತ್ನ ನಡೆಸುತ್ತಿತ್ತು. ಆ ಕಾಲದ ಇಡೀ ಸಮಾಜವನ್ನು ರಾಷ್ಟ್ರೀಯ ಹೋರಾಟ ಮತ್ತು ನಾಡಿನ ಏಕೀಕರಣದ ಚಳವಳಿ ಪ್ರಭಾವಿಸಿದ್ದು, ಸಾಹಿತ್ಯವೂ ಇದಕ್ಕೆ ಪೂರಕವಾಗಿ ಸ್ಪಂಧಿಸುತ್ತಿತ್ತು. ಆ ಕಾಲಘಟ್ಟದಲ್ಲಿ ರಚನೆಯಾದ ಬರವಣಿಗೆಗಳಲ್ಲಿ ಈ ಕುರಿತು ಬರೆಯದ ಬರಹಗಾರರೇ ಇಲ್ಲವೇನೋ ಎಂಬಷ್ಟು ಈ ಚಿಂತನೆಯ ಪ್ರಭಾವ ವ್ಯಾಪಿಸಿತ್ತು. ಅಗಾಧವಾದ ಸಾಹಿತ್ಯ ರಾಶಿಯೊಳಗೆ ಈ ನಿರ್ದಿಷ್ಟ ಸಂಗತಿಯ ಕುರಿತು ಹೆಚ್ಚು ಸಮಗ್ರವೂ, ನಿಖರವೂ ಆದಂತಹ ಸ್ವರೂಪದಲ್ಲಿ ಅಧ್ಯಯನವನ್ನು ಕೈಗೊಳ್ಳಲು ಪ್ರಾತಿನಿಧಿಕವಾಗಿ ಮೂರು ಪ್ರಮುಖ ಕವಿಗಳನ್ನು ಇಲ್ಲಿ ಆರಿಸಿಕೊಳ್ಳಲಾಗಿದೆ.

ನೇರವಾಗಿ ಬ್ರಿಟಿಷರ ಆಡಳಿತಕ್ಕೊಳಪಟ್ಟ ಮುಂಬೈ ಪ್ರಾಂತಕ್ಕೆ ಸೇರಿದವರು. ಬ್ರಿಟಿಷರ ದೌರ್ಜನ್ಯವನ್ನು ವಿರೋಧಿಸಿದ ಕವಿ 'ನರಬಲಿ'ಯಂಥ ಕವಿತೆ ಬರೆದು ಅದಕ್ಕಾಗಿ ಜೈಲುವಾಸವನ್ನೂ ಅನುಭವಿಸಿದವರು. ಕನ್ನಡ ನಾಡಿನ ಏಕೀಕರಣಕ್ಕಾಗಿ ತೀವ್ರವಾಗಿ ಹಂಬಲಿಸಿದ ಕವಿ. ಏಕೀಕರಣದ ಚಳವಳಿಗೆ ಮೈಸೂರು ಪ್ರಾಂತದ ಜನರ ಅಸಹಕಾರದ ನಡುವೆಯೂ ಕ್ರಿಯಾಶೀಲರಾದವರು. ಈ ಕಾರಣದಿಂದ ಈ ಕವಿಯನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಲಾಗಿದೆ.

ಬಿ.ಎಂ.ಶ್ರೀ.ಯವರು ಮೈಸೂರಿನವರು. ಇಂಗ್ಲಿಷ್ ಪ್ರಾಧ್ಯಾಪಕರು. ಹೊಸಗನ್ನಡ ಕಾವ್ಯಕ್ಕೆ ಹೊಸತನವನ್ನು ನೀಡಿದವರು. ಈ ಕಾರಣದಿಂದಲೇ 'ಕನ್ನಡದ ಕಣ್ವ' ಎಂದೇ ಹೆಸರಾದವರು. ಮೈಸೂರಿನ ರಾಜರಿಗೆ ನಿಕಟವರ್ತಿಯಾಗಿದ್ದರು. ಈ ಕಾರಣದಿಂದ ಅವರ ಕನ್ನಡ ಪ್ರೀತಿ, ಭಾರತ ಪ್ರೀತಿ ಮೈಸೂರ ಒಡೆಯರ ಪ್ರೀತಿಯಾಗಿಯೇ ಹೊರಹೊಮ್ಮಿದೆ. ಉಭಯ ದಾಸ್ಯದ ಮೈಸೂರಿನಲ್ಲಿ ಕುವೆಂಪು ಅವರಿಗಿಂತ ಭಿನ್ನವಾಗಿ ಬ್ರಿಟಿಷ್ ಪ್ರಭುತ್ವ ಮತ್ತು ಮೈಸೂರು ಒಡೆಯರ ಜೊತೆ ಒಂದು ಬಗೆಯ ಸಮನ್ವಯವನ್ನು ಸಾಧಿಸಿಕೊಂಡೇ ಕನ್ನಡ ಪ್ರೀತಿಯನ್ನು ತೋರಿದ ಕವಿ. ಏಕೀಕರಣಕ್ಕಾಗಿ ತಾತ್ವಿಕವಾಗಿ ದುಡಿದರೂ, ಅವರ ಏಕೀಕರಣ ಕಲ್ಪನೆ ಕುವೆಂಪು, ಬೇಂದ್ರೆಯವರಿಗಿಂತ ಭಿನ್ನವಾದುದು. ಮೈಸೂರು ಒಡೆಯರ ಮೇಲಿನ ಪ್ರೀತಿ ಅವರ ಕಾವ್ಯಾಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಯಾವುದೋ ಒಂದು ರೂಪದಲ್ಲಿ ಹಿಡಿದಿಟ್ಟಾಂತಾಗಿತ್ತು. ಕುವೆಂಪು, ಬೇಂದ್ರೆಯವರಂತೆ ಸ್ವತಂತ್ರ ನಿಲುವು ಹೊಂದಿದ್ದ ಕವಿಗಳೊಂದಿಗೆ ಹೋಲಿಸಿ ನೋಡಿದಾಗ ಈ ಕವಿಯ ಕಾವ್ಯದ ಮಿತಿ, ಶಕ್ತಿಗಳೆರಡನ್ನೂ ನೋಡಬಹುದಾಗಿದೆ.

ಈ ಹಿನ್ನೆಲೆಯಿಂದ ಈ ಮೂರು ಕವಿಗಳು ಕನ್ನಡದ ಮಹತ್ವದ ಕವಿಗಳಾಗಿ, ಅವರುಗಳ ಪ್ರಾದೇಶಿಕ ಭಿನ್ನತೆಗಳು, ಅವರುಗಳ ತಾತ್ವಿಕ ನಿಲುವುಗಳಲ್ಲಿನ ಭಿನ್ನತೆಗಳ ಕಾರಣದಿಂದ ಅವರ ಕಾವ್ಯದ ಒಟ್ಟು ವಿಸ್ತಾರ, ಮಹತ್ವವನ್ನು ಭಿನ್ನವಾಗಿ ಗ್ರಹಿಸಲು ಅನುವು ಮಾಡಿಕೊಡುತ್ತದೆ. ಈ ಅಧ್ಯಯನವು ಈ ಮೂರು ಕವಿಗಳು ನಾಡು ರಾಷ್ಟ್ರದ ಚಿಂತನೆಗಳನ್ನು ಏಕಕಾಲದಲ್ಲಿ ನಿರ್ವಹಿಸಿದ ಬಗೆ ಹೇಗೆ? ಅವರ ಗ್ರಹಿಕೆಯ ರಾಷ್ಟ್ರ ಯಾವುದು? ನಾಡಿನ ಸ್ವರೂಪವೇನು? ಅದನ್ನು ಕಾವ್ಯ ಭಿತ್ತಿಯ ಒಳಗೆ ಹೇಗೆ ವಿವರಿಸಿಕೊಂಡಿದ್ದಾರೆ ಎನ್ನುವುದರ ಕಡೆಗೆ ಗಮನವನ್ನು ಹರಿಸಿದೆ.

### ೧. ೪.೨ ಆಕರಗಳ ವ್ಯಾಪ್ತಿ:

ಕುವೆಂಪು, ಬೇಂದ್ರೆ ಹಾಗೂ ಬಿ.ಎಂ.ಶ್ರೀ.ಯವರ ಸಮಗ್ರ ಕಾವ್ಯವೇ ಈ ಅಧ್ಯಯನದ ಆಕರಗಳು. ಪ್ರಸ್ತುತ ಕವಿಗಳ ಸಮಗ್ರ ಕಾವ್ಯದಿಂದ ರಾಷ್ಟ್ರೀಯತೆ, ವಸಾಹತುಶಾಹಿ ಪ್ರಭುತ್ವಕ್ಕೆ ಪ್ರತಿಕ್ರಿಯಿಸಿದ ರೀತಿ, ಸ್ವಾತಂತ್ರ್ಯ ಹೋರಾಟದ ಕುರಿತ ಮತ್ತು ಕನ್ನಡ ನಾಡು -ನುಡಿ, ಏಕೀಕರಣ ಚಳವಳಿಯ ಕುರಿತಂತೆ ಬರೆಯಲಾದ ಕವಿತೆಗಳನ್ನು ಆಯ್ಕೆ ಮಾಡಿಕೊಂಡು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಆ ಮೂಲಕ ಸಾಧ್ಯವಾದಷ್ಟು ಮಟ್ಟಿಗೆ ಈ ಕವಿಗಳ ಕಾವ್ಯವು ಕಟ್ಟಿಕೊಡುವ ಈ ಅಧ್ಯಯನ ಪರಿಕಲ್ಪನೆಗಳನ್ನು ಸಮಗ್ರವಾಗಿ ಗ್ರಹಿಸಿ ಮಂಡಿಸುವ ಪ್ರಯತ್ನ ಮಾಡಲಾಗಿದೆ.

### ೧.೫. ಹಿಂದಿನ ಅಧ್ಯಯನಗಳ ಸಮೀಕ್ಷೆ:

ಕುವೆಂಪು, ಬೇಂದ್ರೆ ಹಾಗೂ ಬಿ.ಎಂ.ಶ್ರೀಯವರ ಕವಿತೆಗಳ ಕುರಿತು ಕನ್ನಡದಲ್ಲಿ ಹಲವು ಆಯಾಮಗಳ ಅಧ್ಯಯನ ನಡೆದಿವೆ. ಇಂತಹ ಅಧ್ಯಯನಗಳು ಪ್ರಾಸಂಗಿಕವಾಗಿ ಈ ಕವಿಗಳ ನಾಡು–ನುಡಿಯ ಚಿಂತನೆಯನ್ನು, ರಾಷ್ಟ್ರೀಯತೆಯ ಕುರಿತ ನಿಲುವುಗಳನ್ನು ಪ್ರಕಟಪಡಿಸಿದ್ದಿದೆ. ಕೆಲವೊಮ್ಮೆ ಇವುಗಳನ್ನು ಒಟ್ಟಾಗಿಯೇ ಪ್ರಸ್ತಾಪಿಸಿ ನಾಡು– ನುಡಿಯ ಬಗೆಗಿನ ಚಿಂತನೆಗಳನ್ನು ಪ್ರಸ್ತಾಪಿಸುವಾಗ ಅಲ್ಲೇ ಒಂದೆರಡು ಕವಿತೆಗಳನ್ನು ಉಲ್ಲೇಖಿಸಿ ಆ ಕವಿಗಳ ರಾಷ್ಟ್ರೀಯತೆಯ ಕುರಿತ ನಿಲುವುಗಳನ್ನು ಪ್ರಕಟಪಡಿಸಿದ್ದಾರೆ. ಈ ಕುರಿತು ನಡೆದ ಕೆಲವು ಮಹತ್ವದ ಅಧ್ಯಯನಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಡಾ. ಕೆ.ಸಿ.ಶಿವಾರೆಡ್ಡಿಯವರು 'ಕನ್ನಡದ ಹಾಡು ಪಾಡು: ವಸಾಹತುಶಾಹಿ ಸಂಸ್ಕೃತಿಗೆ ಆಧುನಿಕ ಕನ್ನಡ ಕಾವ್ಯ ತೋರಿದ ಪ್ರತಿಕ್ರಿಯೆ' ಎಂಬ ಅಧ್ಯಯನವನ್ನು ನಡೆಸಿದ್ದು, ಈ ಅಧ್ಯಯನದಲ್ಲಿ ಬೇಂದ್ರೆ, ಕುವೆಂಪು, ಗೋಪಾಲಕೃಷ್ಣ ಅಡಿಗ ಮತ್ತು ಚಂದ್ರಶೇಖರ ಕಂಬಾರರ ಕಾವ್ಯಗಳನ್ನು ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆಯ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನದಲ್ಲಿ ಕುವೆಂಪು ಮತ್ತು ಬೇಂದ್ರೆಯವರ ಕಾವ್ಯಗಳಲ್ಲಿನ ನಾಡು–ನುಡಿ, ರಾಷ್ಟ್ರೀಯತೆಗಳ ವಿಷಯವನ್ನು ಚರ್ಚೆಗೆ ಒಳಪಡಿಸಲಾಗಿದೆ. ಈ ಕವಿಗಳ ಕವಿತೆಗಳಲ್ಲಿ ಪ್ರಕಟಗೊಂಡ ನಾಡು– ನುಡಿಯ ಪ್ರೀತಿ, ರಾಷ್ಟ್ರೀಯತೆಯ ಸ್ವರೂಪದ ಕುರಿತು ಕೆಲವು ಸಂಗತಿಗಳನ್ನು ಈ ಅಧ್ಯಯನವು ಚಿಂತನೆಗೆ ಒಳಪಡಿಸಿದೆ. ಕಾವ್ಯದೊಳಗೆ ಅಭಿವ್ಯಕ್ತವಾದ ನಾಡು–

ನುಡಿಯ ಕುರಿತ ಅಧ್ಯಯನಗಳಲ್ಲಿ ಇದೊಂದು ಮಹತ್ವದ ಅಧ್ಯಯನವಾಗಿದೆ. ಆದರೆ ಈ ಅಧ್ಯಯನವು ಹಲವು ಪರಿಕಲ್ಪನೆಗಳನ್ನು ಏಕಕಾಲಕ್ಕೆ ಅಧ್ಯಯನಕ್ಕೆ ಒಳಪಡಿಸಿರುವುದರಿಂದ, ಒಟ್ಟು ಸಂಶೋಧನೆಯ ಒಂದು ಸಣ್ಣ ಭಾಗ ಮಾತ್ರ ಈ ಪರಿಕಲ್ಪನೆಗಳ ಚರ್ಚೆಗೆ ಮೀಸಲಾಗಿದೆ. ವಿಸ್ತಾರವಾದ ಚರ್ಚೆಯ ಅವಕಾಶ ಅಲ್ಲಿಲ್ಲ.

ಡಾ.ಕಾ.ವೆಂ.ಶ್ರೀನಿವಾಸ ಮೂರ್ತಿಯವರ 'ಕನ್ನಡ ಪರ ಚಿಂತನೆ ಮತ್ತು ಪರಂಪರೆ' ಎಂಬ ಅಧ್ಯಯನದಲ್ಲಿ ಪ್ರಾಚೀನ ಕಾಲದ ಕನ್ನಡ ಸಾಹಿತ್ಯದಿಂದ ನವವಸಾಹತು ಸಂದರ್ಭದ ಕನ್ನಡ ಕಾವ್ಯಗಳವರೆಗಿನ ನಾಡು–ನುಡಿಯ ಕುರಿತ ಚಿಂತನೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಕವಿರಾಜಮಾರ್ಗ, ಶಾಸನಗಳಿಂದ ತೊಡಗಿ ಪಂಪ, ನಯಸೇನ, ವಚನಕಾರರು, ಹರಿಹರ, ನಂಜುಂಡ, ಮುದ್ದಣನಂತಹ ಕವಿಗಳ ಮಹತ್ವದ ಕಾವ್ಯಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಇದಲ್ಲದೆ ವಸಾಹತುಶಾಹಿ ಕಾಲಘಟ್ಟದಲ್ಲಿ ಕನ್ನಡಕ್ಕೆ ಒದಗಿದ ಸಂಕಟ, ಅದನ್ನು ನಿವಾರಿಸುವಲ್ಲಿ ನಡೆದ ಪ್ರಯತ್ನಗಳ ವಿಮರ್ಶಾತ್ಮಕ ಅಧ್ಯಯನ ನಡೆದಿದೆ. ಈ ಅಧ್ಯಯನದ ವ್ಯಾಪ್ತಿ ಹಿರಿದು. ಸಾವಿರ ವರ್ಷಗಳ ಒಟ್ಟು ಕನ್ನಡ ಪರಂಪರೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿರುವುದರಿಂದ ಅಧ್ಯಯನದಲ್ಲಿ ಒಬ್ಬೊಬ್ಬ ಕವಿಗಳನ್ನು ಸಮಗ್ರವಾಗಿ ಮತ್ತು ಆಳವಾಗಿ ಅಧ್ಯಯನಕ್ಕೊಳಪಡಿಸುವುದು ಸಾಧ್ಯವಾಗಿಲ್ಲ.

ಡಾ. ಎಸ್.ಶೇಖರ್ ಅವರ "ನಾಡು ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರ (ಏಕೀಕರಣ ಪೂರ್ವ)" ಎಂಬ ಅಧ್ಯಯನವು ನಾಡು ನುಡಿಯ ಚಿಂತನೆಯ ಕುರಿತಾಗಿ ನಡೆಸಿದ ಮಹತ್ವದ ಅಧ್ಯಯನಗಳಲ್ಲಿ ಒಂದು. ನಾಡುನುಡಿಯ ಕುರಿತ ಬಹುವಿಸ್ತಾರವಾದ ಚರ್ಚೆಗೆ ಕಾರಣವಾದ ಪತ್ರಿಕೆಗಳಲ್ಲಿ ಒಂದಾದ 'ಪ್ರಬುದ್ಧ ಕರ್ನಾಟಕ'ದಲ್ಲಿ ಈ ಕುರಿತು ನಡೆದ ವಾಗ್ವಾದಗಳನ್ನು, ಹುಟ್ಟು ಹಾಕಿದ ಚಿಂತನೆಗಳನ್ನು ಕುರಿತು ನಡೆಸಿದ ಅಧ್ಯಯನವಿದು. ನಾಡಿನ ಮತ್ತು ನುಡಿಯ ಕುರಿತು ಕರ್ನಾಟಕದಲ್ಲಿ ಏಕೀಕರಣ ಪೂರ್ವದ ಕಾಲಘಟ್ಟದಲ್ಲಿ ಹಲವು ಬಗೆಯ ಚರ್ಚೆಗಳು ನಡೆಯುತ್ತಿದ್ದು ಈ ಚರ್ಚೆಗೆ 'ಪ್ರಬುದ್ಧ ಕರ್ನಾಟಕ' ಒಂದು ವೇದಿಕೆಯಾಗಿತ್ತು. ಹಾಗಾಗಿ ಈ ಕುರಿತು ನಡೆಸಿದ ಅಧ್ಯಯನವು ನಾಡು ನುಡಿ ಕುರಿತು ನಡೆಸಿದ ಮಹತ್ವದ ಅಧ್ಯಯನವೇ ಆಗುತ್ತದೆ. ಈ ಅಧ್ಯಯನವು ನೇರವಾಗಿ ಕನ್ನಡ ಕಾವ್ಯದ ಕುರಿತು ನಡೆಸಿದ

ಅಧ್ಯಯನವಲ್ಲ. ಪ್ರಾಸಂಗಿಕವಾಗಿ ಕಾವ್ಯದ ಕುರಿತು ಪ್ರಸ್ತಾಪ ಮಾಡಿ ಅದರ ಬಗೆಗೆ ಕಿರು ಚರ್ಚೆಯೊಂದನ್ನು ಮಾಡುತ್ತದೆ.

ಪ್ರೊ.ಕೆ.ರಾಘವೇಂದ್ರ ರಾವ್ ಅವರ 'Imagining Unimaginable Communities' ('ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಗೊಂಡಿದೆ) ಕೃತಿ ಕರ್ನಾಟಕ ಏಕೀಕರಣ ಚಳವಳಿಯಲ್ಲಿ ತೊಡಗಿಸಿಕೊಂಡ ನಾಲ್ವರು ಚಿಂತಕರಾದ ಆಲೂರ ವೆಂಕಟರಾಯರು, ಹರ್ಡೇಕರ ಮಂಜಪ್ಪ, ಡಿ.ವಿ.ಜಿ, ಪಂಡಿತ ತಾರಾನಾಥ ಇವರುಗಳ ಸಾಮಾಜಿಕ-ರಾಜಕೀಯ ಚಿಂತನೆಗಳನ್ನು ಕುರಿತು ನಡೆಸಿದ ಅಧ್ಯಯನವಾಗಿದೆ. ಈ ನಾಲ್ವರು ಚಿಂತಕರ ನಾಡು-ನುಡಿ, ರಾಷ್ಟ್ರೀಯತೆಯ ಚಿಂತನೆಯ ಜೊತೆಗೆ ಅವರ ಧಾರ್ಮಿಕ ಹಾಗೂ ಉದಾರವಾದಿ ಚಿಂತನೆಗಳನ್ನು ಕುರಿತು ಈ ಅಧ್ಯಯನ ನಡೆದಿದ್ದು ಕನ್ನಡದ ಮಹತ್ವಪೂರ್ಣ ಅಧ್ಯಯನವಾಗಿದೆ.

ಡಾ.ಸಿ.ಆರ್.ಗೋವಿಂದರಾಜುರವರ " ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ" ಎಂಬ ಅಧ್ಯಯನವು ಏಕೀಕರಣ ಚಳವಳಿಯ ಸ್ವರೂಪ ಮತ್ತು ಕನ್ನಡ ಸಾಹಿತ್ಯ ಇದನ್ನು ಅಭಿವ್ಯಕ್ತಿಸಿದ ದಾಟಿಯ ಬಗೆಗೆ ನಡೆಸಿದ ಅಧ್ಯಯನವಾಗಿದೆ. ಈ ಅಧ್ಯಯನವು ಕರ್ನಾಟಕ ಏಕೀಕರಣ ಚಳವಳಿಗೆ ಕನ್ನಡ ಸಾಹಿತ್ಯದ ಪ್ರತಿಸ್ಪಂದನೆಯನ್ನು ಅಭ್ಯಸಿಸಿದೆ. ಅದರಲ್ಲೂ ಕನ್ನಡದ ಪ್ರಮುಖ ಕವಿಗಳಾದ ಶಾಂತಕವಿ, ಬಿ.ಎಂ.ಶ್ರೀ, ಬೇಂದ್ರೆ, ಕುವೆಂಪು ಅವರ ಕಾವ್ಯಗಳಲ್ಲಿ ಕನ್ನಡ ನಾಡು-ನುಡಿಯ ಬಗೆಗಿನ ಚಿಂತನೆಗಳನ್ನು ದಾಖಲಿಸಿದ ಬಹುಮುಖ್ಯ ಅಧ್ಯಯನವಿದು.

ಪ್ರೊ.ಜಿ.ಎಸ್. ಶಿವರುದ್ರಪ್ಪನವರು ಸಂಪಾದಿಸಿದ 'ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ' ಎಂಬ ವಿಚಾರಗೋಷ್ಠಿಯ ಪ್ರಬಂಧಗಳ ಸಂಕಲವು ಕನ್ನಡದಲ್ಲಿ ರಾಷ್ಟ್ರೀಯತೆಯ ಕುರಿತು ನಡೆಸಿದ ಮಹತ್ವಪೂರ್ಣ ಚರ್ಚೆಯ ಸಂಕಲನವಾಗಿದೆ. ಸಾಹಿತ್ಯದ ಹಲವು ಪ್ರಕಾರಗಳಾದ ಕಾವ್ಯ, ಕಥೆ. ನಾಟಕ ಸಾಹಿತ್ಯವನ್ನು ಕಣ್ಮುಂದೆ ಇಟ್ಟುಕೊಂಡು ನಡೆಸಿದ ಸಂಕಿರಣವಾದುದರಿಂದ ಮತ್ತು ಬೇರೆ ಬೇರೆ ಪ್ರಬಂಧಕಾರರು ಮಂಡಿಸಿದ ಪ್ರಬಂಧಗಳಾದುದರಿಂದ ಪ್ರತಿಯೊಂದೂ ಬಹಳ

ಆಳವಾದ ಅಧ್ಯಯನವುಳ್ಳ ಪ್ರಬಂಧಗಳು ಎನ್ನಲಾಗದಿದ್ದರೂ ಕೆಲವು ಬರವಣಿಗೆಗಳು ಮಹತ್ವವನ್ನು ಪಡೆದಿದೆ.

ಕಾ.ವೆಂ. ಶ್ರೀನಿವಾಸ ಮೂರ್ತಿಯವರು ಸಂಪಾದಿಸಿದ 'ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ' ಎಂಬ ಸಂಕಲನವು ಕನ್ನಡ ಸಾಹಿತ್ಯದಲ್ಲಿ 'ಕನ್ನಡ – ಕನ್ನಡಿಗ – ಕರ್ನಾಟಕ' ಎಂಬ ವಿಷಯದ ಕುರಿತ ಚರ್ಚೆಯಾಗಿದೆ. ಈ ಸಂಕಲನದಲ್ಲಿ ಪ್ರಕಟಗೊಂಡ ಪ್ರಬಂಧಗಳು ಕೂಡ ವಿಚಾರ ಸಂಕಿರಣದ ಪ್ರಬಂಧಗಳಾದುದರಿಂದ ಅದರದೇ ಆದ ಮಿತಿಯನ್ನು ಹೊಂದಿವೆ. ಆದರೂ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕರ್ನಾಟಕತ್ವದ ಕುರಿತು ಮೂಡಿ ಬಂದ ಚಿಂತನೆಗಳನ್ನು ಒಗ್ಗೂಡಿಸಿದ ಸಂಕಲನವಿದು.

ಹೀಗೆ ಕನ್ನಡದಲ್ಲಿ ನಾಡು ಮತ್ತು ರಾಷ್ಟ್ರ ಪರಿಕಲ್ಪನೆಗಳನ್ನು ಕುರಿತು ಈ ವರೆಗೆ ಹಲವು ಅಧ್ಯಯನಗಳು ನಡೆದಿದ್ದು ಬಹುಮುಖ್ಯ ಚರ್ಚೆಗಳನ್ನು ಹುಟ್ಟುಹಾಕಿದೆ. ವಿವಿಧ ಕಾಲಘಟ್ಟಗಳಲ್ಲಿ ನಡೆದ ಈ ಎಲ್ಲಾ ಅಧ್ಯಯನಗಳೂ ಕೂಡ ಆಯಾಯ ನೆಲೆಯಲ್ಲಿ ಮಹತ್ವಪೂರ್ಣವೇ ಆಗಿದೆ. ಕನ್ನಡದಲ್ಲಿ ನಾಡು ಮತ್ತು ರಾಷ್ಟ್ರದ ಚಿಂತನೆಗಳ ಕುರಿತು ಬೇರೆ ಬೇರೆ ಬಗೆಯಲ್ಲಿ ಮತ್ತೆ ಮತ್ತೆ ಚರ್ಚೆಗಳು ನಡೆಯುತ್ತಲೇ ಇದೆ. ವರ್ತಮಾನದ ಹಲವು ಚಿಂತನಾ ಪರಂಪರೆಗಳು ಹುಟ್ಟುಹಾಕುತ್ತಿರುವ ಅಧ್ಯಯನ ಪರಿಕಲ್ಪನೆಗಳ ಹಿನ್ನಲೆಯಲ್ಲಿ ಈ ಅಧ್ಯಯನವು ಚರಿತ್ರೆಯಲ್ಲಿ ದಾಖಲಾದ ಈ ಎಲ್ಲಾ ಚಿಂತನೆಗಳನ್ನು ಗಮನದಲ್ಲಿಟ್ಟುಕೊಂಡು ನನ್ನ ಆಲೋಚನೆಗಳನ್ನು ಮಂಡಿಸುವ ಪ್ರಯತ್ನವಾಗಿದೆ.

### ೧.೬. ಅಧ್ಯಯನದ ಸ್ವರೂಪ:

ಆಧುನಿಕ ಕನ್ನಡ ಕಾವ್ಯ ನಾಡು ಮತ್ತು ರಾಷ್ಟ್ರ ಪರಿಕಲ್ಪನೆಗಳ ಕುರಿತು ಹುಟ್ಟು ಹಾಕಿದ ವಾಗ್ವಾದಗಳನ್ನು ಕುರಿತು ನಡೆಸುವ ಈ ಅಧ್ಯಯನದಲ್ಲಿ ಪ್ರಾತಿನಿಧಿಕವಾಗಿ ಕನ್ನಡದ ಮೂರು ಮಹತ್ವದ ಕವಿಗಳಾದ ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀಯವರುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರ ಕಾವ್ಯದೊಳಗೆ ಚರ್ಚಿತವಾದ ಈ ಪರಿಕಲ್ಪನೆಗಳ ಅಧ್ಯಯನವೇ ಇಲ್ಲಿನ ವಸ್ತು. ಅಧ್ಯಯನದ

ಅವಶ್ಯಕತೆಗಾಗಿ ಇಡೀ ವಿಷಯವನ್ನು ಆರು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲಾಗಿದೆ. ಮೊದಲ ಅಧ್ಯಾಯವನ್ನು ಪ್ರಸ್ತುತ ಸಂಶೋಧನೆಯ ಉದ್ದೇಶ, ಪ್ರೇರಣೆ, ವ್ಯಾಪ್ತಿ ಹಾಗೂ ಈ ಕುರಿತು ಈ ಹಿಂದೆ ನಡೆದ ಅಧ್ಯಯನಗಳನ್ನು ಗುರುತಿಸಿ ಚರ್ಚಿಸುವುದಕ್ಕೆ ಮೀಸಲಾಗಿರಿಸಲಾಗಿದೆ. ಇಲ್ಲೇ ಕವಿಗಳ ಆಯ್ಕೆಯ ಹಿಂದಿನ ಕಾರಣಗಳನ್ನು ಹಾಗೂ ಕನ್ನಡದಲ್ಲಿ ಪ್ರಸ್ತುತ ಪರಿಕಲ್ಪನೆಗಳನ್ನು ಪರಿಭಾವಿಸಲಾದ ವಿವಿಧ ದೃಷ್ಟಿಕೋನಗಳನ್ನು ಚರ್ಚಿಸಿ ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ನಾಡು-ರಾಷ್ಟ್ರ' ಪರಿಕಲ್ಪನೆಗಳ ತಾತ್ವಿಕ ವಿವೇಚನೆಯನ್ನು ಮಾಡಲಾಗಿದೆ. ಅಂದರೆ ನಾಡು ಮತ್ತು ರಾಷ್ಟ್ರ ಪರಿಕಲ್ಪನೆಗಳನ್ನು ಬೇರೆ ಬೇರೆ ಅಧ್ಯಯನಕಾರರು ವ್ಯಾಖ್ಯಾನಿಸಿಕೊಂಡ ಬಗೆ ಹೇಗೆ? ವಿವಿಧ ಸೈದ್ಧಾಂತಿಕ ಹಿನ್ನೆಲೆಯಿಂದ ಬಂದ ಇಂತಹ ವ್ಯಾಖ್ಯಾನಗಳ ವಿಶಿಷ್ಟತೆ ಹಾಗೂ ಮಿತಿಗಳನ್ನು ಚರ್ಚಿಸಲಾಗಿದೆ. ಬಹು ಆಯಾಮಗಳ ವೈಚಾರಿಕ ವಾಗ್ವಾದವನ್ನು ಹುಟ್ಟು ಹಾಕಿದ ಈ ಪರಿಕಲ್ಪನೆಗಳ ಕುರಿತು ಜಿಜ್ಞಾಸೆಯನ್ನು ನಡೆಸಿ, ಒಟ್ಟು ಅಧ್ಯಯನಕ್ಕೆ ತಳಹದಿಯಾಗಿ ರೂಪಿಸಿಕೊಂಡ ಒಂದು ಮಾರ್ಗಸೂಚಕ ಚರ್ಚೆಯನ್ನು ಇಲ್ಲಿ ನಡೆಸಲಾಗಿದೆ.

'ಕನ್ನಡ ಕವಿತೆ ಕಟ್ಟುವ ನಾಡು ಪರಿಕಲ್ಪನೆ' ಎಂಬ ಮೂರನೆಯ ಅಧ್ಯಾಯದಲ್ಲಿ ಕುವೆಂಪು, ದ.ರಾ.ಬೇಂದ್ರೆ ಹಾಗೂ ಬಿ.ಎಂ.ಶ್ರೀಯವರ ಕವಿತೆಗಳನ್ನು ವಿವರವಾಗಿ ಚರ್ಚೆಗೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದೆ. ಪ್ರತಿ ಕವಿಯ ಕವಿತೆಗಳಲ್ಲಿ ಕನ್ನಡ ಭಾಷೆ, ಕನ್ನಡಿಗ, ಕರ್ನಾಟಕ ಏಕೀಕರಣ ಚಳವಳಿಯ ಕುರಿತು ನಡೆದ ಚರ್ಚೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕಾವ್ಯದೊಳಗೆ ಅಭಿವ್ಯಕ್ತವಾದ ಈ ಎಲ್ಲಾ ಚಿಂತನೆಗಳು ಅಂದಿನ ಕಾಲದ ಹೋರಾಟಕ್ಕೆ ಯುವಕರನ್ನು ಸೆಳೆಯುವಂಥ ಪ್ರಭಾವಶಾಲಿಯಾಗಿದ್ದವು. ಈ ಕಾವ್ಯಗಳ ಭಾಷೆಯ ಸ್ವರೂಪ ಹೇಗಿದೆ? ಸಾಮಾಜಿಕ ಆಯಾಮ ಏನು? ಎನ್ನುವುದನ್ನು ತಿಳಿಯುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯವಾದ 'ಕನ್ನಡ ಕವಿತೆಗಳಲ್ಲಿ ರಾಷ್ಟ್ರ ಪರಿಕಲ್ಪನೆ: ಗ್ರಹಿಕೆ ಮತ್ತು ಅಭಿವ್ಯಕ್ತಿ'ಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿದ ಕವಿಗಳು 'ರಾಷ್ಟ್ರ' ಪರಿಕಲ್ಪನೆಯನ್ನು ಹೇಗೆ ಗ್ರಹಿಸಿಕೊಂಡಿದ್ದಾರೆ ಮತ್ತು ಕವಿತೆಗಳಲ್ಲಿ ಅದು ಹೇಗೆ

ಅಭಿವ್ಯಕ್ತವಾಗಿದೆ ಎನ್ನುವ ಚರ್ಚೆಯನ್ನು ನಡೆಸಲಾಗಿದೆ. ಇಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಹೋರಾಟ, ವಸಾಹತುಶಾಹಿ ಪ್ರಭುತ್ವದ ದೌರ್ಜನ್ಯದ ವಿರುದ್ಧ ಪ್ರಕಟಗೊಳ್ಳುವ ಆಕ್ರೋಶದ ಬಗೆಯನ್ನು ಮತ್ತು ಒಟ್ಟು ಹೋರಾಟಕ್ಕೆ ಜನರನ್ನು ಸೆಳೆಯುವ ಮಾದರಿಯಲ್ಲಿ ಕಾವ್ಯ ಹೇಗೆ ಸ್ಪಂದಿಸಿದೆ ಎಂಬುದನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಇದಕ್ಕಾಗಿ ಕನ್ನಡದ ಕವಿತೆಗಳು ಒಂದು ಅಖಿಲ ಭಾರತೀಯ ಸ್ವರೂಪವನ್ನು ಕಟ್ಟಿಕೊಂಡು ನಾಡಿನ ಜೊತೆಗೆ ಸಂಘರ್ಷ ರಹಿತವಾಗಿ ಹೇಗೆ ಮುನ್ನಡೆಯಿತು? ಎನ್ನುವುದನ್ನು ಗುರುತಿಸಲಾಗಿದೆ.

ಐದನೆಯ ಅಧ್ಯಾಯವಾದ 'ನಾಡು- ರಾಷ್ಟ್ರ: ಕನ್ನಡ ಕವಿಗಳ ಸಮನ್ವಯ ಪ್ರಜ್ಞೆ' ಯಲ್ಲಿ ಕನ್ನಡ ಕವಿತೆಗಳು ಏಕಕಾಲದಲ್ಲಿ ಎರಡು ಸ್ತರದಲ್ಲಿ ಮುನ್ನಡೆದು ಅದನ್ನು ನಿಭಾಯಿಸಿದ ರೀತಿಯನ್ನು ಚರ್ಚಿಸಲಾಗಿದೆ. ಅಂದರೆ ಒಬ್ಬನೇ ಕವಿ ಒಂದು ಸ್ತರದಲ್ಲಿ ಕನ್ನಡ ಭಾಷೆ, ನಾಡು ಕರ್ನಾಟಕದ ಬಗೆಗೆ ಪ್ರಜ್ಞಾವಂತಿಕೆಯಿಂದ ತನ್ನ ಚಿಂತನೆಗಳನ್ನು ಪ್ರಕಟಿಸಿ, ಉನ್ನತ ಭಾವುಕ ಶಿಖರದಲ್ಲಿ ನಿಂತೇ ಅದಕ್ಕೆ ವಿರುದ್ಧವಲ್ಲದ ನೆಲೆಯಿಂದ ರಾಷ್ಟ್ರವನ್ನು, ಅದರ ಅಖಂಡತೆ, ಸಾಂಸ್ಕೃತಿಕ ಹಿರಿಮೆಯನ್ನು ಕುರಿತು ಕಾವ್ಯದಲ್ಲಿ ಅಭಿವ್ಯಕ್ತಿಸಿದರು ಎನ್ನುವುದು ಕುತೂಹಲದ ವಿಷಯ. ಕುವೆಂಪು, ದ.ರಾ.ಬೇಂದ್ರೆ. ಬಿ.ಎಂ.ಶ್ರೀಯವರ ಕವಿತೆಗಳು ಇವೆರಡು ಪರಿಕಲ್ಪನೆಗಳ ನಡುವೆ ಕಂಡುಕೊಂಡ ಅನುಸಂಧಾನದ ಮಾರ್ಗ ಗಮನಾರ್ಹ. ಇದರ ಹಿಂದಿರುವುದು ಕವಿಗಳ ಸಮನ್ವಯ ಪ್ರಜ್ಞೆ. ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಕವಿಗಳ ಈ ಸಮನ್ವಯ ಪ್ರಜ್ಞೆಯನ್ನು ಅರಿಯುವ ಯತ್ನ ಮಾಡಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ಹಾಗೂ ಒಟ್ಟು ಅಧ್ಯಯನದ ಸ್ವರೂಪವನ್ನು ಸಂಗ್ರಹಿಸಿ ನೀಡಲಾಗಿದೆ.

**ಕೊನೆ ಟಿಪ್ಪಣಿಗಳು:**

೧. ನಾಗರಾಜ್ ಡಿ.ಆರ್. ೧೯೯೬, ಕನ್ನಡ ರಾಷ್ಟ್ರೀಯತೆಯ ಸ್ವರೂಪ, ಸಾಹಿತ್ಯ ಕಥನ, ಪುಟ ೨೮೩-೨೮೪

೨. ರಾಮಸ್ವಾಮಿ ಎಸ್.ಆರ್, ೨೦೧೧, 'ದ್ರುವಜಲ' ಪುಟ ೬೧

೩. ಗಿರೀಶ್ ಭಟ್ಟ ಅಜಕ್ಕಳ, ೨೦೧೨, 'ಭಾರತೀಯ ರಾಷ್ಟ್ರವಾದವು ಅಪಾಯಕಾರಿಯೆ?, ಚಿಂತನ ಬಯಲು (ಸಂ) ರೇಶ್ಮಾ ಜಿ.ಭಟ್, ಪುಟ ೯೦

೪. ಗಾಂಧೀ ಮೋ.ಕ.,ಉದೃತ: ಅಮೋಘ ನಾಯಕ ಗಾಂಧೀ: ಪಾಸ್ಕಲ್ ಆಲೆನ್ ನಜ಼ರತ್(ಅನು) ನೀಲತ್ತಹಳ್ಳಿ ಕಸ್ತೂರಿ,೨೦೦೭ ಪುಟ-೩೭

# ೨.ನಾಡು-ರಾಷ್ಟ್ರ ಪರಿಕಲ್ಪನೆಗಳ ತಾತ್ವಿಕ ವಿವೇಚನೆ

೨.೧.ಪ್ರಸ್ತಾವನೆ

೨.೨.ನಾಡು ಪರಿಕಲ್ಪನೆಯ ತಾತ್ವಿಕ ವಿವೇಚನೆ

೨.೩.ರಾಷ್ಟ್ರ ಪರಿಕಲ್ಪನೆಯ ತಾತ್ವಿಕ ವಿವೇಚನೆ

# ಅಧ್ಯಾಯ -೨

## ನಾಡು -ರಾಷ್ಟ್ರ ಪರಿಕಲ್ಪನೆಗಳ ತಾತ್ವಿಕ ವಿವೇಚನೆ

### ೨.೧ ಪ್ರಸ್ತಾವನೆ:

ಕನ್ನಡದ ಬೌದ್ಧಿಕ ವಲಯದಲ್ಲಿ ಒಂದು ಶತಮಾನಕ್ಕಿಂತಲೂ ಹೆಚ್ಚು ಕಾಲದಿಂದ ವೈಚಾರಿಕ ಚರ್ಚೆಯನ್ನು ಹುಟ್ಟುಹಾಕುತ್ತಾ ಬೆಳೆದ ಎರಡು ಮುಖ್ಯ ಪರಿಕಲ್ಪನೆಗಳೆಂದರೆ 'ನಾಡು' ಮತ್ತು 'ರಾಷ್ಟ್ರ' ಎಂಬ ಪರಿಕಲ್ಪನೆಗಳು. ಸ್ವರೂಪದಲ್ಲಿ ಹೆಚ್ಚು ಅಮೂರ್ತ. ಮೂರ್ತಗೊಳಿಸಲು ನಡೆದ ಹಲವು ಚಿಂತನೆಗಳು ತಾತ್ವಿಕವಾಗಿ ಈ ಪರಿಕಲ್ಪನೆಗಳನ್ನು ಹೊಸದಾಗಿಯೇ ವ್ಯಾಖ್ಯಾನಿಸತೊಡಗಿತು. ವಿಶ್ಲೇಷಣೆಯ ಸೈದ್ಧಾಂತಿಕ ಚೌಕಟ್ಟು ಬದಲಾಗುತ್ತಾ ಹೋದಂತೆ ಪರಿಕಲ್ಪನೆಯ ಕುರಿತು ಹೊಂದುತ್ತಾ ಬಂದ ತೀರ್ಮಾನವೂ ಬದಲಾಗುವುದು ಅಧ್ಯಯನದ ಸಾಮಾನ್ಯ ಲಕ್ಷಣ. ಕನ್ನಡದ ಚಿಂತನಾ ಪರಂಪರೆ 'ನಾಡು' ಮತ್ತು 'ರಾಷ್ಟ್ರ' ಪರಿಕಲ್ಪನೆಯ ಕುರಿತು ನಡೆಸುತ್ತಾ ಬಂದ ವಾಗ್ವಾದವನ್ನು ಪರಿಶೀಲಿಸುತ್ತಲೇ ಈ ಅಧ್ಯಯನದ ಚೌಕಟ್ಟಿಗೆ ಪೂರಕವಾಗಿ ರೂಪಿಸಿಕೊಳ್ಳಬಹುದಾದ ಒಂದು ಸಾಮಾನ್ಯ ತಾತ್ವಿಕತೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗುವುದು.

ಇವೆರಡೂ ಪರಿಕಲ್ಪನೆಗಳು ಕೂಡ ಅವುಗಳ ರಚನೆಯಿಂದ ಒಂದು ಸಾಮಾನ್ಯ ವಿಚಾರದೊಂದಿಗೆ ಸಾಮ್ಯತೆಯನ್ನು ಹೊಂದಿರುವ ಅಂದರೆ ಭಾಷಿಕ, ಸಾಂಸ್ಕೃತಿಕ, ರಾಜಕೀಯ ಒಕ್ಕೂಟವಾಗಿ ಒಂದು ಎಂಬ ಭಾವನೆಯೊಂದಿಗೆ ಅಥವಾ ಇವುಗಳೊಳಗೆ ಬಹುರೂಪತೆ ಇದ್ದರೂ ಈ ವೈವಿಧ್ಯವನ್ನು ಹೊಂದಿಯೂ ಏಕತೆಯ ಮನೋಭಾವವನ್ನು ಹೊಂದಿರುವ ಜನರ ವಾಸದ ನೆಲೆಯಾಗಿ ಕಂಡು ಬರುತ್ತದೆ. ನಾಡಿನ ಕುರಿತ ಮನೋಭಾವದ ಹಿಂದೆ ಭಾಷೆಯೇ ಪ್ರಧಾನ ಮಾಧ್ಯಮವಾದರೆ, ರಾಷ್ಟ್ರವೆನ್ನುವುದು ಒಂದು ವಿಶಾಲಾರ್ಥದ ಸಾಂಸ್ಕೃತಿಕ ಕೊಂಡಿಯಿಂದ ಬೆಸೆಯಲ್ಪಟ್ಟ ಭಾವನೆಯು ಇಲ್ಲಿ ಪ್ರಧಾನವಾಗಿದೆ.

ರಾಷ್ಟ್ರೀಯತೆಗೆ, ವಿಶ್ವಾತ್ಮಕ ಮಾನವೀಯತೆಗೆ ವಿರೋಧವಾಗುವುದಿಲ್ಲ. ಕನ್ನಡದ ಕವಿಗಳು ಕರ್ನಾಟಕದ ಸ್ವಂತಿಕೆಯನ್ನು ಕುರಿತು ಮಂಡಿಸುವ ವಿಚಾರಗಳು ಭಾರತೀಯ ರಾಷ್ಟ್ರೀಯತೆಗೂ ಸಂಬಂಧ ಪಟ್ಟದ್ದೇ ಆಗಿ ಒಡಮೂಡುತ್ತದೆ. ಕನ್ನಡಿಗನೆಂದು ನಿರ್ವಚಿಸಿಕೊಳ್ಳುವ ವ್ಯಕ್ತಿಯ ಸ್ವಂತಿಕೆ ಭಾರತೀಯ ಎನ್ನುವ ಸ್ವಂತಿಕೆಯನ್ನು ಕುಗ್ಗಿಸುವುದಿಲ್ಲ ಅಥವಾ ಇಲ್ಲವಾಗಿಸುವುದಿಲ್ಲ. ಈ ಬಹುಸ್ವಂತಿಕೆಗಳು ಪರಸ್ಪರ ಸಂಬಂಧಿಸಿದೆ ಹಾಗೂ ಒಟ್ಟಾಗಿಯೇ ಬದುಕುತ್ತದೆ. ಸಕ್ರಿಯ ಸಂವಾದಾತ್ಮಕ ಸ್ವರೂಪದ ನೆಲೆಯಿಂದ ಇವುಗಳು ಜೊತೆಯಾಗಿಯೇ ಕ್ರಿಯಾಶೀಲವಾಗಿರುತ್ತದೆ. ಹೀಗಾಗಿ ಈ ಬಹುಸ್ವಂತಿಕೆಗಳು ಕೇವಲ ಲಕ್ಷಣವಷ್ಟೇ ಆಗದೆ ಜೀವಂತಿಕೆಯೇ ಆಗಿಬಿಡುತ್ತದೆ.

ಜಗತ್ತಿನ ಚರಿತ್ರೆಯಲ್ಲಿ ಭಾಷೆ ಹಲವು ಸ್ವತಂತ್ರ ರಾಷ್ಟ್ರಗಳ ರಚನೆಯ ಅಡಿಗಲ್ಲಾಗಿರುವುದನ್ನು ನೋಡಬಹುದು. ಅದಕ್ಕಾಗಿ ದೊಡ್ಡ ಪ್ರಮಾಣದ ಹೋರಾಟಗಳು, ಚಳವಳಿಗಳೂ ನಡೆದಿರುವುದಿದೆ. ತಮ್ಮ ಭಾಷೆಯ ಕುರಿತ ಅರಿವೇ ಇಂತಹ ಹೋರಾಟಗಳಿಗೆ ಮೂಲ ಕಾರಣವಾಯಿತು. ಕನ್ನಡದ ಸಂದರ್ಭದಲ್ಲೂ ಕನ್ನಡದ ಕುರಿತ ಅರಿವು ಒಂದು ದೊಡ್ಡ ಚಳವಳಿಗೆ ನಾಂದಿಯಾಯಿತು. ಪರಿಣಾಮವಾಗಿ ಕನ್ನಡ ಮಾತನಾಡುವ ಪ್ರದೇಶ ಒಂದು ಆಡಳಿತ ಘಟಕವಾಗಿ, ರಾಜ್ಯವಾಗಿ ತನ್ನ ಅಸ್ತಿತ್ವವನ್ನು ಪಡೆಯಿತು. ಹಾಗೆಂದು ಕನ್ನಡ ಭಾಷೆಯ ಕುರಿತ, ನೆಲದ ಕುರಿತ ಚರ್ಚೆ–ಚಿಂತನೆಗಳು ಈ ಚಳವಳಿಯ ಸಂದರ್ಭದಲ್ಲೇ ಹುಟ್ಟಿಕೊಂಡ ಸಂಗತಿಯೇನಲ್ಲ, ಇದಕ್ಕೆ ಹಲವು ಶತಮಾನಗಳ ಕಾಲದ ಭಾಷಿಕ ಅರಿವೊಂದು ವಿಶಿಷ್ಟ ಸನ್ನಿವೇಶವೊಂದರಲ್ಲಿ ಜಾಗೃತಗೊಂಡು ಮುಂದೆ ಬಹುದೊಡ್ಡ ಚಳವಳಿಗೆ ಕಾರಣವಾಯಿತು.

ಭಾಷೆಯ ಕುರಿತ ಈ ಅರಿವನ್ನು ಹಾಗೂ ಆ ಮೂಲಕ ಹುಟ್ಟಿಕೊಂಡ ಚಳವಳಿಯ ಫಲವಾಗಿ ರೂಪುತಾಳಿದ ಕರ್ನಾಟಕದ ಅಸ್ತಿತ್ವವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಆಧುನಿಕ ಕನ್ನಡ ಕವಿತೆಗಳು ಅದಕ್ಕೆ ಸ್ಪಂದಿಸಿದ ಬಗೆಯನ್ನು ಅಧ್ಯಯನ ಮಾಡುವುದು ಈ ಸಂಶೋಧನೆಯ ಒಂದು ಪ್ರಮುಖ ಉದ್ದೇಶವಾಗಿದೆ. ಅಂದರೆ ಆಧುನಿಕ ಸನ್ನಿವೇಶದಲ್ಲಿ, ನಿರ್ದಿಷ್ಟಗೊಳಿಸಿ ಹೇಳುವುದಾದರೆ ವಸಾಹತುಶಾಹಿಯ ಪ್ರವೇಶದಿಂದ ಈ ಭಾಷಿಕ ವಲಯದ ಮೇಲೆ ಉಂಟಾದ ಪರಿಣಾಮವನ್ನು ಹಾಗೂ ಅದಕ್ಕೆ ಕನ್ನಡದ ಸೃಜನಶೀಲ ಮನಸ್ಸುಗಳು ಸ್ಪಂದಿಸಿ ಪ್ರತಿಕ್ರಿಯಿಸಿದ ಸ್ವರೂಪವನ್ನು

ಕಣ್ಮುಂದೆ ಇಟ್ಟುಕೊಂಡು ಭಾಷೆ ಹಾಗೂ ನೆಲದ ಪ್ರಶ್ನೆಯನ್ನು ಮುಖ್ಯವಾಗಿಟ್ಟುಕೊಂಡು ರೂಪು ತಾಳಿದ ನಾಡಿನ ಕುರಿತ ಚರ್ಚೆಗೆ ಬೇಕಾದ ಒಂದು ಸಾಮಾನ್ಯ ತಾತ್ವಿಕ ಚೌಕಟ್ಟನ್ನು ಇಲ್ಲಿ ಚರ್ಚಿಸಲಾಗುವುದು. ಕರ್ನಾಟಕ ಏಕೀಕರಣ ಚಳವಳಿಯೂ ಸೇರಿದಂತೆ ಆ ಹಿಂದಿನ ಹಾಗೂ ಅದೇ ಕಾಲಘಟ್ಟದ ಕನ್ನಡದ ಚಿಂತನಶೀಲರು ಕನ್ನಡದ ಆಧಾರದ ಮೇಲೆ ಕಟ್ಟಲು ಹೊರಟ ಕರ್ನಾಟಕದ ಸ್ವರೂಪ ಏನು? ಮತ್ತು ಇದನ್ನು ಸಾಧಿಸಲು ಕನ್ನಡದ ಕವಿತೆಗಳು ಯಾವ ರೀತಿಯಲ್ಲಿ ಸ್ಪಂದಿಸಿದವು ಎನ್ನುವುದನ್ನು ನೋಡಬೇಕಾಗಿದೆ.

"ಕನ್ನಡ ಎನ್ನುವುದು ಭಾಷೆಯ ಆಧಾರದ ಮೇಲೆ ರೂಪಿತವಾದ ಗುರುತು. ಕನ್ನಡ ಭಾಷೆಯನ್ನು ಬಳಸುವವರನ್ನೆಲ್ಲಾ ಒಂದು ಸಮುದಾಯವಾಗಿ ಭಾವಿಸುವ ಪ್ರಕ್ರಿಯೆ ಮತ್ತು ವ್ಯಕ್ತಿಗಳು ಆ ಸಮುದಾಯದ ಸದಸ್ಯರೆಂದು ಭಾವಿಸಿಕೊಂಡು ತಮ್ಮನ್ನು 'ಕನ್ನಡಿಗ'ರೆಂದು ಗುರುತಿಸಿಕೊಳ್ಳುವುದೇ ಕನ್ನಡ ಗುರುತು ರಾಜಕಾರಣ (Identity Politics). ಈ ಗುರುತು ರಾಜಕಾರಣ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ಗುರುತಿಸಿ, ಅದನ್ನು ತನ್ನದು ಎಂದು ಸಾಧಿಸುತ್ತದೆ"[೨] ಎನ್ನುವ ತಾರಕೇಶ್ವರ ವಿ.ಬಿ.ಯವರ ಅಭಿಪ್ರಾಯ ನಾಡಿನ ತಾತ್ವಿಕ ವಿವೇಚನೆಯನ್ನು ಮಾಡುತ್ತದೆ. ನಾಡು ಭಾಷೆ ಆಧಾರದಲ್ಲೇ ರೂಪುಗೊಂಡ ರಚನೆ. ಭಾಷೆಯು ನಾಡಿನ ಗುರುತಾದ ಹಾಗೆ, ನಾಡಿನ ಸದಸ್ಯನಿಗೂ ಭಾಷೆಯೇ ಗುರುತು. ಕನ್ನಡ ನಾಡಿನ ರಚನೆಯ ಹಿಂದಿರುವ ಏಕಮಾತ್ರ ಮೂಲಾಧಾರ ಅದರ ಜನಭಾಷೆ. ಅಂದರೆ ಕನ್ನಡ ಭಾಷೆ. ಈ ಭಾಷೆಯ ಮೂಲಕವೇ ಒಂದು ಭೌಗೋಳಿಕ ಪ್ರದೇಶದ ಮೇಲೆ ತನ್ನ ಹಕ್ಕನ್ನು ಸಾಧಿಸುವ ಪ್ರಯತ್ನ ಇಲ್ಲಿ ನಡೆಯುತ್ತದೆ.

ಕನ್ನಡ ನಾಡಿನ ಒಳಗೆ ಕನ್ನಡಿಗನೆನ್ನುವುದು ಒಂದು ಕಲ್ಪಿತ ಸಮುದಾಯ. ವಸಾಹತುಶಾಹಿಯ ಆಡಳಿತಕ್ಕೆ ಒಳಪಟ್ಟ ಸಂದರ್ಭದಲ್ಲಿ ಬ್ರಿಟಿಷರು ಆಡಳಿತಾತ್ಮಕ ಉದ್ದೇಶವನ್ನು ಮುಂದಿಟ್ಟುಕೊಂಡು ಕನ್ನಡವನ್ನು ಮಾತನಾಡುವ ಪ್ರದೇಶಗಳು ಎಂದು ಗುರುತಿಸಲ್ಪಟ್ಟ ಭೂಭಾಗವನ್ನು ವಿವಿಧ ಆಡಳಿತ ಘಟಕಗಳಲ್ಲಿ ಅಂದರೆ ಪ್ರಾಂತ್ಯಗಳಲ್ಲಿ ವಿಂಗಡಿಸಿ ಸೇರಿಸಿದಾಗ ಆ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಜನರಿಗೆ ತಾವು ಕನ್ನಡವನ್ನು ಮಾತನಾಡುವ ಜನಸಮುದಾಯ, ತಮ್ಮನ್ನು ವಿಭಜಿಸುವ ಉದ್ದೇಶದಿಂದಲೇ ಹೀಗೆ ವಿಂಗಡಿಸಲಾಗಿದೆ ಎಂಬ ಪ್ರಜ್ಞೆಯೊಂದು ಮೂಡಿ ಮುಂದೆ ಈ ಎಲ್ಲಾ ಪ್ರದೇಶಗಳನ್ನು

ಒಂದಾಗಿಸಬೇಕು ಎಂಬ ಹೋರಾಟ ಆರಂಭವಾಯಿತು. ಕನ್ನಡ ಬಳಸಲ್ಪಡುವ ಪ್ರದೇಶಗಳು ಸಾಂಸ್ಕೃತಿಕವಾಗಿ ಒಂದು ಘಟಕ ಎಂದು ಭಾವಿಸಿಕೊಂಡ ಕಾರಣದಿಂದಾಗಿ, ಅವುಗಳು ರಾಜಕೀಯವಾಗಿಯೂ ಒಂದು ಆಳ್ವಿಕೆಯಡಿ ಬರಬೇಕು ಎಂಬ ಉದ್ದೇಶ ಏಕೀಕರಣ ಚಳವಳಿಯ ಹಿಂದಿತ್ತು. ರಾಜಕೀಯವಾಗಿ ತಾವು ಒಂದು ಆಡಳಿತದ ಚೌಕಟ್ಟಿನೊಳಗೆ ಸೇರಿಕೊಳ್ಳುವ ಬಯಕೆ ಈ ಏಕೀಕರಣದ ಚಿಂತನೆಯಲ್ಲಿ ವ್ಯಕ್ತಗೊಂಡಿದೆ. ಆ ಮೂಲಕ ತಾವು ಒಂದು ಆಡಳಿತ ಚೌಕಟ್ಟಿನೊಳಗೆ ಸೇರಿ ತಮ್ಮ ಗುರುತನ್ನು ವಿಶಿಷ್ಟವಾಗಿ ಕಂಡುಕೊಳ್ಳುವ ಉದ್ದೇಶ ಇಲ್ಲಿತ್ತು. ಕನ್ನಡಿಗರನ್ನು ಈ ಮುಖ್ಯ ಆಶಯಕ್ಕಾಗಿ ಹುರಿದುಂಬಿಸಲು ಚಳವಳಿ ಮತ್ತು ಸಾಹಿತ್ಯ ಹಲವು ರೀತಿಯ ತಂತ್ರಗಳನ್ನು ಬಳಸಿಕೊಂಡಿವೆ. ಸಾಮಾನ್ಯವಾಗಿ ಬಳಸಲ್ಪಟ್ಟ ತಂತ್ರಗಳೆಂದರೆ, ಸದ್ಯದ ಕನ್ನಡ ನಾಡಿನ ಛಿದ್ರೀಕರಣಗೊಂಡ ಚಿತ್ರಣವನ್ನು ಮನದಟ್ಟು ಮಾಡುವುದಕ್ಕಾಗಿ, ಒಂದು ಕಾಲದಲ್ಲಿ ವೈಭವಯುತವಾಗಿ ಮೆರೆದ ಸಾಮ್ರಾಜ್ಯಗಳು, ಸಾಂಸ್ಕೃತಿಕ ಕೇಂದ್ರಗಳು ಇದ್ದವು ಎನ್ನುವುದಕ್ಕೆ ಗತಚರಿತ್ರೆಯಿಂದ ಹೆಕ್ಕಿಕೊಂಡ ಕೆಲವು ಸಾಮ್ರಾಜ್ಯಗಳನ್ನು ಅವುಗಳ ವೈಭವವನ್ನು ಚಿತ್ರಿಸಿದಂತೆ ಅವುಗಳು ಪತನಗೊಂಡು ಛಿದ್ರವಾಗಿರುವ, ನಾಶವಾಗಿರುವ ಚಿತ್ರಣಗಳನ್ನು ನೀಡಿ ಕನ್ನಡ ನಾಡು ಸದ್ಯದಲ್ಲಿ ಹೀಗೆ ಛಿದ್ರಗೊಂಡಿದೆ ಎನ್ನುವುದನ್ನು ಬಿಂಬಿಸಲಾಗುತ್ತಿತ್ತು. ಜೊತೆಗೆ ಈ ನಾಡಿನ ನದಿ- ಬಯಲು, ಕಾಡು-ಗುಡ್ಡಗಳು, ಸಮೃದ್ಧಿಯ ತೋಟಗಳನ್ನು ವರ್ಣಿಸಿ ಇಂತಹ ಸುಂದರ ನಾಡು ಇನ್ನೆಲ್ಲೂ ಇಲ್ಲ ಎಂದು ಜನರಲ್ಲಿ ಅಭಿಮಾನ ಹುಟ್ಟುವಂತೆ ಹೇಳಲಾಗುತ್ತಿತ್ತು. ಇವೆಲ್ಲದರ ಪರಿಣಾಮದಿಂದ ಜನರಿಗೆ ತಮ್ಮ ನಾಡಿನ ಪ್ರಜ್ಞೆಯು ಅರಳಿ, ಅದನ್ನು ಮರಳಿ ಸಂಪಾದಿಸುವ ಅಭೀಪ್ಸೆ ಮನಸ್ಸಿನಲ್ಲಿ ಹುಟ್ಟುವಂತೆ ಮಾಡಿತು.

ಕನ್ನಡ ನಾಡು ರಾಜಕೀಯವಾಗಿ ಏಕ ಘಟಕವಾಗಬೇಕು ಎಂಬ ಚಿಂತನೆ ಹುಟ್ಟಿದ್ದು ಆಧುನಿಕ ಕಾಲಘಟ್ಟದಲ್ಲೇ. ಅದರಲ್ಲೂ ವಸಾಹತುಶಾಹಿಯ ಆಡಳಿತಕ್ಕೆ ಒಳಪಟ್ಟ ಸಂದರ್ಭದಲ್ಲಿ. ಭಾಷೆಯ ಕುರಿತು ಹುಟ್ಟಿದ ಅಭಿಮಾನ, ಭಾಷಾ ಪ್ರೇಮ ಒಂದು ಭಾಷೆಯನ್ನಾಡುವ ಜನ ಒಂದೇ ಆಡಳಿತಕ್ಕೆ ಒಳಪಡುವಂತಾಗಬೇಕು ಎಂಬ ಬೇಡಿಕೆ ಹುಟ್ಟಿಕೊಂಡದ್ದು ಅದೇ ಮೊದಲು. ಈ ಹಿಂದೆ ಭಾಷಾಧಾರಿತವಾದ ನಾಡಿನ ಕಲ್ಪನೆ ಇತ್ತಾದರೂ ಅದು ಏಕ ರಾಜಕೀಯ ಘಟಕವಾಗಿರಲಿಲ್ಲ. ಉದಾಹರಣೆಗೆ, ಒಂಬತ್ತನೆಯ ಶತಮಾನದಲ್ಲಿ ಪ್ರಸ್ತಾಪಿತಗೊಂಡ 'ತಿರುಳ್ಗನ್ನಡ ಪ್ರದೇಶ', ಆಂಡಯ್ಯನಲ್ಲಿ ಬಳಕೆಯಾದ 'ಕನ್ನಡಮೆನಿಪ್ಪಾ ನಾಡು', ಹದಿನೇಳನೇ ಶತಮಾನದ ಚಿಕ್ಕುಪಾಧ್ಯಾಯನ

‘ಕನ್ನಡ ನಾಡಿನ ವರ್ಣನೆ’ ಕನ್ನಡ ಭಾಷಾಧಾರಿತ ನಾಡನ್ನು ಒಂದು ಸಾಂಸ್ಕೃತಿಕ ಪರಿಭಾಷೆಯಲ್ಲಿ ಮಂಡಿಸಿರುವುದನ್ನು ನೋಡಬಹುದು. ಈ ಹಿನ್ನೆಲೆಯಿಂದ “ನಾಡು ಪರಿಕಲ್ಪನೆ ಆಯಾ ಪ್ರಾಂತೀಯ ಭಾಷೆಯಿಂದ ಗುರುತಿಸಿಕೊಳ್ಳುವುದರ ಮೂಲಕ ಅಭಿವ್ಯಕ್ತ ಆಗುತ್ತಿತ್ತು. ಈ ಸನ್ನಿವೇಶದಲ್ಲಿಯೇ ‘ಕನ್ನಡ ನಾಡು’ ಹುಟ್ಟಿಕೊಂಡದ್ದು”[೩] ಎಂದು ಡಾ.ಸಿ.ಆರ್. ಗೋವಿಂದರಾಜು ಗುರುತಿಸಿರುವುದು ಸೂಕ್ತವಾಗಿದೆ.

ಏಕೀಕರಣದ ಸಂದರ್ಭದಲ್ಲಿ ರೂಪುಗೊಂಡ ‘ಕರ್ನಾಟಕ’ ಎಂಬ ಭೌಗೋಳಿಕ ಪ್ರದೇಶ ವಸಾಹತುಪೂರ್ವದಲ್ಲಿ ಇದೇ ಸ್ವರೂಪದಲ್ಲಿ ಸಂಘಟಿತವಾಗಿರಲಿಲ್ಲ. ಹೀಗೊಂದು ರೂಪವನ್ನು ಈ ಭೂಪ್ರದೇಶ ಒಂದು ನಿರ್ದಿಷ್ಟ ಹೆಸರಿನಲ್ಲಿ ಪಡೆದದ್ದೇ ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದಲ್ಲಿ. ಹೀಗೆ ಸಂಘಟಿತಗೊಳ್ಳುವ ಮೊದಲು ಇದೇ ಭೂಪ್ರದೇಶ ಮಂಗಳವೀಡು ಶ್ರೀನಿವಾಸರಾಯರು ಗುರುತಿಸುವಂತೆ ೨೨ ಆಡಳಿತ ಘಟಕಗಳಾಗಿತ್ತು[೪]. ಅಂದರೆ ಇಲ್ಲಿ ಒಂದು ಸಂಗತಿ ಬಹಳ ಸ್ಪಷ್ಟವಾಗಿದೆ. ಅದೇನೆಂದರೆ ಕನ್ನಡ ಮಾತನಾಡುವ ಪ್ರದೇಶ ‘ಕರ್ನಾಟಕ’ ಒಂದೇ ಪ್ರಾಂತವಾಗಬೇಕು ಎಂಬ ಭಾವನೆ ಇಲ್ಲಿ ಮೊಳೆತದ್ದೇ ವಸಾಹತುಶಾಹಿಯ ಆಳ್ವಿಕೆಯ ಸಂದರ್ಭದಲ್ಲಿ. ಬ್ರಿಟಿಷರು ಜಾರಿಗೊಳಿಸಿದ ಹೊಸ ಬಗೆಯ ವಿಂಗಡನೆಗೆ ಒಳಗಾಗಿ ಅನ್ಯ ಭಾಷೆಯನ್ನಾಡುವ ಜನಗಳ ಪ್ರಾಂತಗಳೊಂದಿಗೆ ಸೇರಬೇಕಾದ ಸಂದರ್ಭ ಒದಗಿ ಬಂದಿತು. ಹಳೆಯ ಆಡಳಿತ ವ್ಯವಸ್ಥೆಯ ಒಳಗೆ ಭಾಷೆ ಬದುಕಿಗೆ ತೊಡಕಾಗಿರಲಿಲ್ಲ. ಆದರೆ ಈ ಹೊಸ ವ್ಯವಸ್ಥೆಯಲ್ಲಿ ಶಿಕ್ಷಣ, ಆಡಳಿತ, ವ್ಯವಹಾರದ ಸಂಗತಿಗಳು ಬದಲಾದಾಗ ಭಾಷೆಯ ಕಾರಣದಿಂದ ಉಂಟಾಗುತ್ತಿದ್ದ ತೊಡಕು, ಸಂಘರ್ಷಗಳಿಂದಾಗಿ ಒಂದು ಭಾಷೆಯನ್ನಾಡುವ ಜನ ಒಂದು ಆಡಳಿತ ವ್ಯವಸ್ಥೆಗೆ ಒಳಪಟ್ಟ ಒಂದು ಪ್ರಾಂತ್ಯವಾಗಬೇಕು ಎಂಬ ಭಾವನೆ ಬೆಳೆಯುತ್ತಿದ್ದುದರ ಪರಿಣಾಮವಾಗಿ ‘ಭಾಷಿಕ ರಾಜ್ಯ’ದ ಕಲ್ಪನೆ ಬೆಳೆಯತೊಡಗಿತು. ಬಂಗಾಳ ವಿಭಜನೆಯ ಘಟನೆ ರಾಷ್ಟ್ರಾದ್ಯಂತ ಬ್ರಿಟಿಷರು ಒಡೆದು ಆಳುವ ಉದ್ದೇಶಕ್ಕಾಗಿಯೇ ಈ ವಿಭಜನೆ ಮಾಡುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ಹುಟ್ಟುಹಾಕಿತು. ಹೀಗಾಗಿ ರಾಷ್ಟ್ರೀಯ ಸ್ವಾತ್ರಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ನಡೆಯುತ್ತಿದ್ದ ಸ್ವಾತಂತ್ರ್ಯ ಚಳವಳಿಯ ಜೊತೆ ಜೊತೆಗೆ ಮಾತ್ರವಲ್ಲದೆ ಆ ಹೋರಾಟಕ್ಕೆ ಪೂರಕವಾಗಿಯೇ ಹುಟ್ಟಿಕೊಂಡ ಏಕೀಕರಣ ಚಳವಳಿ ‘ಭಾಷಿಕ ಕರ್ನಾಟಕ’ದ ಪರಿಕಲ್ಪನೆಯನ್ನು ಮುಂದಿಟ್ಟಿತು. ವಿವಿಧ ಪ್ರಾಂತಗಳ ನಡುವೆ ಹಂಚಿಹೋಗಿರುವ ಕನ್ನಡ ಮಾತನಾಡುವ ಭೂ ಪ್ರದೇಶವನ್ನು ಒಂದುಗೂಡಿಸುವುದು

ಎಂದರೆ ಏಕಕಾಲದಲ್ಲಿ ಅದು ಬ್ರಿಟಿಷರ ಉದ್ದೇಶವನ್ನು ಸೋಲಿಸುವುದೂ ಆಗಿತ್ತು. ಹೀಗಾಗಿ ಏಕೀಕರಣ ಚಳವಳಿ ರಾಷ್ಟ್ರೀಯ ಚಳವಳಿಗೆ ಪೂರಕವಾಗಿಯೇ ಜೊತೆ ಜೊತೆ ಸಾಗಿತು. ನಾಡು ಎಂಬ ಪರಿಕಲ್ಪನೆಯಡಿ ಪರಿಭಾವಿಸಲ್ಪಟ್ಟ 'ಕನ್ನಡ ನಾಡು' ಎಂಬ ಏಕೀಕೃತ ರೂಪ ರಾಜಕೀಯ ಸ್ವರೂಪದ ಏಕಾದಿಪತ್ಯವನ್ನು ಈ ಹಿಂದೆ ಪಡೆದಿರಲಿಲ್ಲ. ಅಂದರೆ ಆಡಳಿತಾತ್ಮಕವಾಗಿ ಒಂದೇ ವ್ಯವಸ್ಥೆಗೆ ಈ ಭೂಭಾಗ ಒಳಪಟ್ಟಿರಲಿಲ್ಲ. ವಸಾಹತುಶಾಹಿ ಆಳ್ವಿಕೆಯು ಬರುವ ಪೂರ್ವದಲ್ಲಿ ಇಂತಹ ವಿಭಜಿತ ಭಾವನೆಗಳು ಇರಲಿಲ್ಲ. ವಸಾಹತು ಆಡಳಿತಗಾರರು ಮೊದಲ ಬಾರಿಗೆ ಅಧಿಕೃತವಾಗಿ ಮತ್ತು ನಿಖರವಾಗಿ ಭಾಷಿಕ ಪ್ರದೇಶವೊಂದರ ವಿಭಜನೆಗೆ ಕೈ ಹಾಕಿದರು. ಈ ಬಗೆಯ ತುಂಡಾಗುವಿಕೆ ಮತ್ತು ಅದರ ಪರಿಣಾಮವಾಗಿ ಉಂಟಾದ ದೂರಗೊಂಡ ಅನುಭವ ಇದರ ವಿರುದ್ಧ ಹೋರಾಡುವ ಮನಸ್ಥಿತಿಯೊಂದನ್ನು ಹುಟ್ಟುಹಾಕಿಸಿತು. ಹೀಗೆ ರೂಪುಗೊಂಡ ಕನ್ನಡ ನಾಡಿನ ಅಭಿಮಾನ, ನಾಡ ಪ್ರಜ್ಞೆ ಈಗಾಗಲೇ ರೂಪುಗೊಂಡಿದ್ದ ರಾಷ್ಟ್ರೀಯ ಪ್ರಜ್ಞೆಗೆ ವಿರೋಧಿಸ್ಥಿತಿಯಲ್ಲಿರಲಿಲ್ಲ. ಕನ್ನಡ ನಾಡು ಎಂಬ ಪ್ರಾದೇಶಿಕ ಮೀಮಾಂಸೆಯು ರಾಷ್ಟ್ರೀಯ ಮೀಮಾಂಸೆಯಿಂದ ಬೇರ್ಪಡಿಸಲು ಸಾಧ್ಯವಿಲ್ಲದಂತೆ ಬೆಸೆಯಲ್ಪಟ್ಟಿತ್ತು. ಭಾರತೀಯ ಸಂದರ್ಭದಲ್ಲಿ ಈ ಎರಡೂ ಮೀಮಾಂಸೆಗಳು ಕೂಡ ಸಮಗ್ರ ಮಾನವತೆಯ ಒಳಿತನ್ನು ತಬ್ಬಿಕೊಂಡ ವಿಶ್ವಾತ್ಮಕ ಮೀಮಾಂಸೆಯ ಕಡೆಗೆ ಚಲಿಸುತ್ತಿತ್ತು. ಈ ಕಾರಣದಿಂದ ಕನ್ನಡ ನಾಡು ಭಾರತೀಯ ರಾಷ್ಟ್ರೀಯ ಸ್ವಂತಿಕೆಯ ಅಡಿಯಲ್ಲಿ ನಕಾರಗೊಳ್ಳದ ಅಥವಾ ನಿಕೃಷ್ಟಗೊಳ್ಳದ ಒಂದು ವಾಸ್ತವ ಸ್ಥಾನವನ್ನು ಪಡೆದಿದೆ. ಈ ಎರಡೂ ಪರಿಕಲ್ಪನೆಗಳು ಕೂಡ ಸಮೂಹದ ನಿಷ್ಕ್ರಿಯತೆಯ ಕುರಿತೇ ಮಾತನಾಡುತ್ತಾ, ಅಂತಿಮವಾಗಿ ಕ್ರಿಯಾತ್ಮಕತೆಯನ್ನು ರೂಢಿಸಿಕೊಳ್ಳುವಂತೆ ಸಮೂಹವನ್ನು ಉತ್ತೇಜಿಸುತ್ತಿತ್ತು.

ರಾಷ್ಟ್ರವನ್ನು ಪಾರತಂತ್ರ್ಯದಿಂದ ಬಿಡುಗಡೆಗೊಳಿಸಿ, ಮತ್ತೆ ಕಟ್ಟುವ ಸಂಕಲ್ಪದೊಂದಿಗೆ, ಹಂಚಿಹೋಗಿರುವ, ಛಿದ್ರವಾಗಿರುವ ನಾಡನ್ನು ಕಟ್ಟಿಕೊಳ್ಳುವುದಕ್ಕೂ ಉತ್ಸಾಹದ ಹೋರಾಟ ನಡೆಯುತ್ತಿತ್ತು. ನಾಡು ಕೂಡ ತನ್ನ ಹಳೆಯ ನೆನಪುಗಳಿಂದಲೇ ಪುನರ್ ಸಂಘಟಿತಗೊಳ್ಳುತ್ತಿತ್ತು. ನಾಡು ಜನರಿಗೆ ಒಂದು ಭಾಷಿಕ ಗುರುತಾಗಿ, ನೆಲದ ಹೆಸರಾಗಿ ರೂಪುತಾಳುತ್ತದೆ. ಚದುರಿ ಹೋಗಿದ್ದ ನಾಡನ್ನು ನೆನಪುಗಳ ಮೂಲಕ ಕಲ್ಪಿಸಿಕೊಂಡು ಅದನ್ನು ಸಾಧಿಸುವುದಕ್ಕಾಗಿ ಒಂದು ಪ್ರಜ್ಞಾಪೂರ್ವಕವಾದ ಕ್ರಿಯೆ ನಡೆಯುತ್ತಿತ್ತು. ಛಿದ್ರಗೊಂಡ ಸ್ಥಿತಿಯಿಂದ ಹೊರಬಂದು ಮತ್ತೆ ತನ್ನನ್ನು ಸಂಘಟಿಸಿ

ಕೊಳ್ಳುವ ಹೊತ್ತಿನಲ್ಲಿ ತನ್ನೊಳಗಿನ ಹಲವುತನವನ್ನೂ, ವೈವಿಧ್ಯತೆಗಳನ್ನೂ ಸವಾಲಾಗಿ ಸ್ವೀಕರಿಸುತ್ತಲೇ ತನ್ನನ್ನು ಏಕಾಕಾರದಲ್ಲಿ ರೂಪಿಸಿಕೊಳ್ಳುತ್ತದೆ. ಭಾಷೆಯೊಳಗಿನ ಹಲವು ರೂಪಗಳು ನೆಲದ ಚರಿತ್ರೆಯೊಳಗಿನ ಭಿನ್ನ ಧ್ವನಿಗಳನ್ನು ದಮನಿಸದೆ ಐಕ್ಯ ಮಾದರಿಯಲ್ಲಿ ತನ್ನ ಚೆಲುವನ್ನು ಬಣ್ಣಿಸಿಕೊಳ್ಳುತ್ತದೆ.

ಭಾರತ ಮತ್ತು ಕರ್ನಾಟಕದ ಸಂಬಂಧದ ಸ್ವರೂಪವೂ ಕೂಡ ಪರಸ್ಪರ ಒಳಗೊಳ್ಳುವಿಕೆಯ ಆಯಾಮದ್ದೇ ಆಗಿದೆ. ರಾಷ್ಟ್ರ ತಾಯಿಯಾಗಿ, ನಾಡು ತನುಜಾತೆಯಾಗಿ, ಹಿರಿಮಗಳಾಗಿ, ಪೆರ್ಮಗಳ್, ಪುತ್ರಿ, ಸೋದರಿಯಾಗಿ ಕಾಣಿಸಿಕೊಳ್ಳುತ್ತದೆ. ತಾಯಿ ಮಗಳ ಚಿತ್ರಣದೊಂದಿಗೆ, ವರ್ತಮಾನದ ಛಿದ್ರತೆಯ ವಿರುದ್ಧ ಕನ್ನಡಮ್ಮ ಕ್ಷಾತ್ರರೂಪವನ್ನು ತಾಳುವುದಕ್ಕಾಗಿ ಭುವನೇಶ್ವರಿಯಾಗಿ, ಚಾಮುಂಡಿ, ದೇವಿಯಾಗಿ, ರಾಜರಾಜೇಶ್ವರಿಯಾಗಿ ಕಾಣಿಸಿಕೊಳ್ಳುವುದನ್ನು ನೋಡಬಹುದು. "ಇಪ್ಪತ್ತನೆಯ ಶತಮಾನದ ಮೊದಲರ್ಧದ ಕನ್ನಡ ಸಾಂಸ್ಕೃತಿಕ ವಲಯ ತಾಯಿಯ ಕಲ್ಪನೆಯನ್ನು ಎರಡು ರೀತಿಯಲ್ಲಿ ಬಳಸಿಕೊಂಡಿದೆ. ಒಂದು ಪಾಲಕಿಯಾಗಿ, ಇನ್ನೊಂದು ರಕ್ಷಕಿಯಾಗಿ. ಕನ್ನಡ ತಾಯಿಯನ್ನು ಭುವನೇಶ್ವರಿಗೆ, ರಾಜರಾಜೇಶ್ವರಿಗೆ ಸಮೀಕರಿಸಿದ ಪ್ರಯತ್ನಗಳು ಗಮನಾರ್ಹ. ಏಕೆಂದರೆ ಇಲ್ಲಿ ತಾಯಿ ಕೇವಲ ಪಾಲಕಿಯಲ್ಲ, ರಕ್ಷಕಿ. ಅದಕ್ಕಾಗಿ ತನ್ನ ಉಗ್ರ ಅವತಾರವನ್ನು ತಳೆದು ನಿಲ್ಲಬಲ್ಲಳು. ಕನ್ನಡಕ್ಕೆ ಹೀಗೆ ಒಳಗಿನಿಂದಲೇ ಪೋಷಣೆ ಪಡೆಯುವ ಹೊತ್ತಿನಲ್ಲೇ ಹೊರಗಿನಿಂದ ಬರುವ ಆಕ್ರಮಣಕಾರಿ ಶಕ್ತಿಗಳಿಗೆ ಸಡ್ಡು ಹೊಡೆಯುವ ತಾಯಿಯ ರಕ್ಷೆಯೂ ಬೇಕು" [೫] ಎಂದು ಡಾ.ಕೆ.ವಿ. ನಾರಾಯಣ ಹೇಳುತ್ತಾರೆ.

ಈ ಕಾರಣದಿಂದಲೇ ವೀರತ್ವದ ಪರಿಭಾಷೆಗಳು ಮತ್ತೆ ಮತ್ತೆ ಬಳಕೆಯಾಗುತ್ತದೆ. ತಾಯಿ-ಮಗಳ ಸಂಬಂಧದ ಹಿನ್ನೆಲೆಯಲ್ಲಿ ರಾಷ್ಟ್ರೀಯ ಹೋರಾಟಕ್ಕೆ ಈ ಪ್ರಾಂತೀಯ, ಭಾಷಿಕ ಭಾವನೆಗಳು ಮಾರಕವಾಗದಂತೆ ಎಚ್ಚರವೂ ಇದೆ. ಕನ್ನಡ ಕವಿಗಳು ಕಟ್ಟಿದ 'ನಾಡು' ಒಂದು ಭಾಷೆಯನ್ನಾಡುವ ಜನಗಳ ಒಂದು ಆಡಳಿತ ಘಟಕ ಎಂಬ ಚಿಂತನೆಯನ್ನು ಮೀರಿ ವಿಶಾಲವಾಗಿತ್ತು. ಕುವೆಂಪು ಅವರು " ವ್ಯಷ್ಟಿ ರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ ಎಂದು ಭಾವಿಸುವುದಾದರೆ ಕರ್ನಾಟಕಕ್ಕೆ ಅನ್ನಮಯ ರೂಪವಾದ ಭೂಪ್ರದೇಶವಿರುವಂತೆಯೇ. ಪ್ರಾಣಮಯ ಮನೋಮಯ ರೂಪವಾದ ಚಿತ್ ಪ್ರದೇಶವೂ ಇದೆ. ಚಿನ್ಮಯವೂ.

ಅಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿ ಕೋಶವೇ ಕರ್ನಾಟಕ ದೇವಿಯ ಸೂಕ್ಷ್ಮ ಶರೀರ"[೬] ಎನ್ನುತ್ತಾರೆ. ಕವಿ ಕರ್ನಾಟಕದ ಕುರಿತು ಸಜೀವವೂ ಸಾವಯವವೂ, ಮೂರ್ತವೂ ಆದ ಒಂದು ಭಾವರೂಪವನ್ನೂ, ಭಾವಕೋಶವನ್ನೂ ಹೊಂದಿದ್ದರು. ರಾಜಕೀಯ ಘಟಕವಾಗುವ ಸ್ಥಿತಿಯನ್ನು ಮೀರಿದ ಒಂದು ಸಾಂಸ್ಕೃತಿಕ ಕರ್ನಾಟಕದ ಕಲ್ಪನೆ ಕುವೆಂಪು ಅವರಿಗಿದೆ. ಹಾಗಾಗಿ ಅವರಿಗೆ ಕರ್ನಾಟಕ 'ಭಾರತ ಜನನಿಯ ತನುಜಾತೆ' ಯಾಗುತ್ತದೆ. ಏಕೀಕರಣ ಚಳವಳಿಯ ಕಾಲಘಟ್ಟದಲ್ಲಿ ಕನ್ನಡ ನಾಡಿನ ಒಂದು ಸೈದ್ಧಾಂತಿಕ ಚೌಕಟ್ಟನ್ನು ಖಚಿತಪಡಿಸಲಾಗುತಿತ್ತು. ಈ ಕ್ರಮದೊಳಗೆ ಕನ್ನಡ ನಾಡಿಗೆ ಒಂದು ಸಿದ್ಧಗೊಂಡ ಮಾದರಿಯಿಲ್ಲ. ಅದನ್ನು 'ವಿಕಾಸ'ದ ಕ್ರಮದಲ್ಲಿ ಗ್ರಹಿಸಲಾಗುತ್ತಿತ್ತು. ನಾಡು ರಾಷ್ಟ್ರಕ್ಕೆ ಪರ್ಯಾಯವಲ್ಲದೇ ಇದ್ದುದರಿಂದ ಪರಸ್ಪರ ಪ್ರತಿಸ್ಪರ್ಧಿಗಳಾಗಿರಲಿಲ್ಲ. ಈ ಸಂಬಂಧದ ಸ್ವರೂಪವೇ ಅವುಗಳ ನಡುವೆ ಸಂಘರ್ಷವನ್ನು ಹುಟ್ಟುಹಾಕಿಸದೆ ಒಂದು ಬಗೆಯ ಅನುಸಂಧಾನವನ್ನು ರೂಪಿಸಿತು. ಈ ಹಿನ್ನೆಲೆಯಲ್ಲಿ ನಾಡು ಪ್ರತ್ಯೇಕ ರಾಷ್ಟ್ರವಾದದ ಬೀಜ ಅಲ್ಲ. ಆಂತರಿಕವಾಗಿ ತಮ್ಮೊಳಗೆ ಸದಾ ಸಂವಾದದ ಸಾಧ್ಯತೆಯನ್ನು, ಸಕ್ರಿಯ ಸಂವಾದಾತ್ಮಕ ನೆಲೆಯನ್ನು ಉಳಿಸಿಕೊಂಡ ರಚನೆಯಾಗಿ ಕಾಣುತ್ತದೆ. ಕೇವಲ ಒಂದು ಸಾಮಾನ್ಯ ಆಡಳಿತ ಘಟಕ ಎನ್ನುವುದನ್ನು ಮೀರಿ ಭಾರತೀಯತ್ವದಲ್ಲಿ ಕರ್ನಾಟಕ, ಕರ್ನಾಟಕತ್ವದ ಒಳಗೆ ಭಾರತೀಯತೆಯನ್ನು ಒಳಗೊಂಡು ಅಂತಿಮವಾಗಿ ಕನ್ನಡಿಗನು ಭಾರತೀಯನೂ, ವಿಶ್ವಮಾನವನೂ ಆಗಬಹುದಾದ ಬಹುಸ್ವಂತಿಕೆಯ ನೆಲೆಯ ವಿಸ್ತಾರವನ್ನು ಪಡೆದಿದೆ. ನಾಡಿನ ಈ ನೆಲೆ ಕನ್ನಡಿಗನಾಗಿರುತ್ತಲೇ ಭಾರತೀಯನೂ, ವಿಶ್ವಮಾನವನೂ ಆಗುವ ನಂಬಿಕೆಯನ್ನು ಸಮಸ್ಯಾತ್ಮಕವಾಗಿಸುವುದಿಲ್ಲ. ಕರ್ನಾಟಕ ಭಾರತೀಯತೆಯಲ್ಲಿ ಅಂತರ್ಗತಗೊಂಡ 'ಐಕ್ಯ'ವನ್ನು ಪ್ರತಿಪಾದಿಸುತ್ತದೆ. ಪರಿಕಲ್ಪನಾತ್ಮಕವಾಗಿ ಈ ಐಕ್ಯ ಸಂಕೀರ್ಣ ತತ್ವವನ್ನಾಗಿಸಿದೆ.

ಬಿ.ಎಂ.ಶ್ರೀ.ಯವರು ನಾಡನ್ನು ಪ್ರಭುತ್ವದ ರೂಪದಲ್ಲಿ ಗ್ರಹಿಸುವುದಕ್ಕಿಂತಲೂ ಹೆಚ್ಚಾಗಿ ಸಾಂಸ್ಕೃತಿಕ ಸ್ವರೂಪದ ಭಾವ ಕರ್ನಾಟಕವಾಗಿ ಗ್ರಹಿಸುತ್ತಾರೆ. ಹಾಗಾಗಿ ಅವರು ನಾಡನ್ನು ಆತಂಕದ ನೆಲೆಯಲ್ಲಿ ಪರಿಕಲ್ಪಿಸಿ ಕೊಳ್ಳುವುದಿಲ್ಲ. ವರ್ತಮಾನದ ಕನ್ನಡ ನಾಡು ಕುಗ್ಗಿಹೋಗಿದೆ ಎಂಬ ಕೀಳರಿಮೆಯನ್ನು ಹೊಂದದೆ, ಕನ್ನಡ ನಾಡು ಚಿಕ್ಕದಿದ್ದರೂ, ಕನ್ನಡಿಗರು ಸ್ವಲ್ಪ ಜನವೇ ಇದ್ದರೂ ಕರ್ನಾಟಕದ ಪೂರ್ವ ಚರಿತ್ರೆಯ ಆಧಾರದಲ್ಲಿ ಭವಿಷ್ಯದ ಬಗೆಗೆ ಆಶಾವಾದಿಯಾಗಿದ್ದಾರೆ. ನಾಡಿನ ವರ್ತಮಾನದ ಧಾರುಣತೆಯಿಂದ

ಭರವಸೆ ಕಳೆದುಕೊಳ್ಳದೆ, ತನ್ನದೆ ನಾಡಿನ ಗತದೊಳಗಿಂದ ಸ್ಫೂರ್ತಿಯನ್ನು ಪಡೆದುಕೊಳ್ಳುತ್ತಾರೆ. ಕುವೆಂಪು ನಾಡಿಗೆ ಭೌತಿಕ ಗಡಿಗಳನ್ನು ನಿಗದಿಪಡಿಸಿ ನೋಡುವುದಿಲ್ಲ. ಕರ್ನಾಟಕ ಬಹುರೂಪಿ ಮತ್ತು ವಿಶ್ವತೋಮುಖಿ ಎಂದೇ ಭಾವಿಸುತ್ತಾರೆ. ಹಾಗಾಗಿ ಎಲ್ಲಾ ಬಹುತ್ವಗಳನ್ನು ಕಾಪಾಡಿಕೊಂಡೇ ಕಟ್ಟುವ ನಾಡದು. ಆ ಮೂಲಕ ನಾಡಭಿತ್ತಿಯನ್ನು ಇನ್ನಷ್ಟು ವಿಸ್ತರಿಸಿದರು ಮತ್ತು ಉದಾತ್ತೀಕರಿಸಿದರು. ಬೇಂದ್ರೆಯವರು 'ಕನ್ನಡ ಪ್ರಾಣ ಸಂಹಾರಕವಲ್ಲ, ಜೀವದಾಯಕ ಎಂಬ ಸೊಲ್ಲು ಒಡನುಡಿಯಲು ಪ್ರಾರಂಭಿಸಿದಾಗ ಕನ್ನಡಿಗರ ಏಕೀಕರಣ ಆರಂಭವಾಗುವುದು' ಎನ್ನುತ್ತಾರೆ. ಅವರು, ಕನ್ನಡತನ ಮೈಮನವನ್ನು ಮೀರಿ ಕನ್ನಡವೇ ಧರ್ಮವಾಗಿ ನೇತ್ರ ಸೂತ್ರವಾಗಿ ಉಳಿಯಬೇಕು ಎಂದು ಬಯಸಿದ್ದರು.

ಕನ್ನಡದಲ್ಲಿ ನಾಡಿನ ಪರಿಕಲ್ಪನೆಯನ್ನು ಸಾಕಾರಗೊಳಿಸುವಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸಿದ್ದು ಆ ಕಾಲದಲ್ಲಿ ರಚನೆಯಾದ ನಾಡಗೀತೆಗಳು. ಈ ದಿಸೆಯಿಂದ ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ಚೆಲುವ ಕನ್ನಡ ನಾಡು', ಕುವೆಂಪು ಅವರ, 'ಜೈ ಭಾರತ ಜನನಿಯ ತನುಜಾತೆ,' ಮೊದಲಾದ ಕವಿತೆಗಳು ನಾಡಗೀತೆ ಎಂಬ ಹೆಸರಿನಲ್ಲಿ ಕನ್ನಡದ ಗುರುತುಗಳನ್ನು ದೃಢಗೊಳಿಸುತ್ತಿದ್ದವು. ಏಕೀಕರಣ ಪೂರ್ವದ ಆಶಯವು ಏಕೀಕರಣದ ನಂತರದಲ್ಲಿ ಬದಲಾದಾಗ ನಾಡಗೀತೆಯೂ ಬದಲಾಗುತ್ತದೆ. ನಾಡು ಈ ನಾಡಗೀತೆಯ ಮೂಲಕ ಭಾಷಾ ಸಮುದಾಯ ಒಪ್ಪುವ ಒಂದು ಸಾಂಸ್ಕೃತಿಕ ಪರಂಪರೆಯ ಪ್ರತೀಕವಾಗಿ ರೂಪುತಳೆಯುತ್ತದೆ. ನಾಡು ತಾನು ರೂಪುಗೊಳ್ಳುವಾಗ ಏಕ ಧ್ವನಿಯಾಗಲು ಯತ್ನಿಸಿದರೂ ಅನೇಕ ಸಂದರ್ಭದಲ್ಲಿ ಅದರೊಳಗಿನ ಭಿನ್ನ ಧ್ವನಿಗಳು ಕೂಡ ಹೊರ ಬಂದಿದ್ದಿದೆ. ನಾಡಗೀತೆಯು ಪ್ರಜ್ಞಾಪೂರ್ವಕವಾಗಿ ಕಟ್ಟುತ್ತಾ ಹೋಗುವ ಸಾಂಸ್ಕೃತಿಕ ಪರಂಪರೆ, ಸಾಂಸ್ಕೃತಿಕ ಸ್ಮೃತಿಗೆ, ಹೀಗೆ ರೂಪುಗೊಳ್ಳುವ ಚರಿತ್ರೆಗೆ, ಅಂತಿಮವಾಗಿ ರೂಪುಗೊಳ್ಳುವ ರಾಜಕೀಯ ವಿನ್ಯಾಸಕ್ಕೆ ತಾವು ಬದ್ಧರಲ್ಲ ಎಂದಾದಾಗ ಭಿನ್ನ ಧ್ವನಿ ಪ್ರಕಟವಾಗುತ್ತದೆ. ಉದಾಹರಣೆಗೆ ಕುವೆಂಪು ನಾಡಗೀತೆಯಲ್ಲಿ ಒಂದೊಮ್ಮೆ ಪ್ರಯೋಗಗೊಂಡಿದೆ ಎನ್ನಲಾಗಿ ಆಮೇಲೆ ಸ್ಥಾನ ನಿರಾಕರಿಸಲ್ಪಟ್ಟ 'ಮಧ್ವಾಚಾರ್ಯ'ರ ಉಲ್ಲೇಖವನ್ನೂ ನೆನಪಿಸಿಕೊಳ್ಳಬಹುದಾಗಿದೆ. "ನಾಡಗೀತೆಯ ಸಮಸ್ಯೆ ಎಂದರೆ ಅದು ಕಾಲ ದೇಶಬದ್ಧ ಚರಿತ್ರೆಯೊಂದರ ಸ್ಮೃತಿಯನ್ನು ಅಳವಡಿಸಿಕೊಂಡಿರುತ್ತದೆ. ಆ ಸ್ಮೃತಿಗೆ ಭಾಷಿಕರೆಲ್ಲರೂ ಹಕ್ಕುದಾರರು ಎಂಬ ಪೂರ್ವನಿರ್ಧಾರಿತ ತರ್ಕವನ್ನು ಹೊಂದಿರುತ್ತದೆ.

ಯಾವುದೇ ನಾಡಗೀತೆ ಕೇವಲ ಸಮಕಾಲೀನ ವಿನ್ಯಾಸಗಳನ್ನು ಮಾತ್ರ ತನ್ನ ಭಾಷಿಕ ಶರೀರದಲ್ಲಿ ಹೊಂದಿರುವುದಿಲ್ಲ. ಅದು ವಿವರಿಸುವ, ಮೆಚ್ಚುವ ಚರಿತ್ರೆ ಸಹಜವಾಗಿಯೇ ಕೆಲವು ಆಯ್ಕೆಗಳನ್ನು ಮತ್ತು ನಿರಾಕರಣೆಗಳನ್ನು ಹೊಂದಿರುತ್ತದೆ"[೭] ಎಂಬ ಮಾತು ನಾಡಗೀತೆಯ ಮೂಲಕ ಅಸ್ತಿತ್ವವನ್ನು ಪಡೆಯುವ ನಾಡಿನ ಸ್ವರೂಪವನ್ನು ಹೇಳುತ್ತದೆ. ಕನ್ನಡ ಭಾಷಾ ಸಮುದಾಯವು ಕಂಡುಕೊಂಡ 'ಸ್ವಪ್ರಜ್ಞೆ'ಯು 'ಅನ್ಯ'ದಿಂದ ತನಗೆ ಉಂಟಾಗುವ ಅಪಾಯವನ್ನು ಊಹಿಸಿಕೊಂಡು ಅದನ್ನು ಎದುರಿಸುವುದಕ್ಕಾಗಿ ಹೆಚ್ಚು ಕ್ರಿಯಾಶೀಲವಾಗುತ್ತದೆ. 'ಅನ್ಯ'ದ ಎದುರು ತಾನು ಕರಗಿ ಹೋಗುತ್ತೇನೆ ಎಂಬ ಪ್ರಜ್ಞೆ ಬಲವಾದಂತೆಲ್ಲಾ ತನ್ನನ್ನು ತಾನು ಬಲಿಷ್ಠಗೊಳಿಸಿಕೊಳ್ಳುವುದಕ್ಕಾಗಿ ತನಗೊಂದು ಭೌಗೋಳಿಕ ಗಡಿರೇಖೆಯನ್ನು ಕಲ್ಪಿಸಿ, ಅದು ಸಮುದಾಯದ ಆಸ್ತಿ ಎಂಬ ಭಾವನೆಯಿಂದ ಅದನ್ನು ಕಾಪಾಡಿಕೊಳ್ಳುವುದು ತನ್ನ ಕರ್ತವ್ಯ ಎಂಬ ನೆಲೆಯಲ್ಲಿ ಕೆಲವೊಮ್ಮೆ ಆಕ್ರಮಣಕಾರಿಯೂ ಆಗುತ್ತದೆ. ಅನ್ಯದ ಎದುರು ತಾನು ಕರಗಿಹೋಗದಂತೆ ಹೆಚ್ಚು ರಕ್ಷಣಾತ್ಮಕವಾಗಿ ತನ್ನ ಗುರುತುಗಳನ್ನು ಮರುಸ್ಥಾಪಿಸಿಕೊಳ್ಳುವ ಯತ್ನದಲ್ಲಿಯೇ ನಾಡು ರಚನೆಯಾಗುತ್ತದೆ. "ನಾವು ಇಂದು ಕರ್ನಾಟಕವೆಂದು ಹೇಳಲ್ಪಡುವ ಪ್ರದೇಶದ ವಸಾಹತು ಪೂರ್ವ ರಾಜಕೀಯ ಇತಿಹಾಸವನ್ನು ಪರೀಕ್ಷಿಸಿದರೆ, ಮತ್ತು ವಸಾಹತು ಆಳ್ವಿಕೆ ಪೂರ್ವದಲ್ಲಿ ಕನ್ನಡ ಭಾಷೆಯಲ್ಲಿ ನಿರ್ಮಿತ ಸಾಹಿತ್ಯಿಕ ಕೃತಿಗಳನ್ನು ಪರಿಶೀಲಿಸಿದರೆ, ನಿಖರ ರಾಜಕೀಯ ರೂಪದ ಪರಿಕಲ್ಪನೆಯಾಗಿ ಒಪ್ಪಿತವಾದ ರಾಜ್ಯ/ರಾಷ್ಟ್ರ ಎನ್ನುವ ಕಲ್ಪನೆ ಕಾಣಸಿಗುವುದಿಲ್ಲ. ನಿಶ್ಚಯವಾಗೂ ಕನ್ನಡ ನಾಡು ಮತ್ತು ಭಾರತ ಎನ್ನುವುದು ಒಂದು ಉಲ್ಲೇಖ ರೂಪದ ವಿಷಯಗಳಾಗಿ ಪ್ರಚಲಿತವಿದ್ದುವು. ಆದರೆ ಅವು ಯಾವುದೇ ನಿಖರ ರಾಜಕೀಯ-ಧಾರ್ಮಿಕ ಅಥವಾ ನಾಗರಿಕತೆಯ ಕಲ್ಪನೆಗಳಾಗಿರುವ ಬದಲು ಅವು ಪ್ರಾದೇಶಿಕ ಅಥವಾ ಸಾಂಸ್ಕೃತಿಕ ರೂಪದಲ್ಲಿದ್ದುವು"[೮] ಎಂದು ಕೆ. ರಾಘವೇಂದ್ರ ರಾವ್ ಗುರುತಿಸುತ್ತಾರೆ. ಕರ್ನಾಟಕ ಎಂಬ ನಾಡಿನ ರಚನೆ ತಾನೇ ಕಟ್ಟುವ ಸೈದ್ಧಾಂತಿಕ ಚೌಕಟ್ಟಿನೊಳಗೆ ನೋಡಿದರೆ ಅದು ಒಂದು ಆದಿಯಿಲ್ಲದ ಅಸ್ತಿತ್ವವನ್ನು ಹೊಂದಿದೆ. ಹಾಗಾಗಿ ಅದು ಕಾಲಾತೀತವೂ ಹೌದು ಎನ್ನಬಹುದು. ಐತಿಹಾಸಿಕವಾಗಿ ನೋಡಿದಾಗ ವಸಾಹತು ಪೂರ್ವದಲ್ಲಿ ಭಾಷೆಯ ನೆಲೆಯಿಂದ ರೂಪಿಸಿಕೊಂಡಿದ್ದ ಘಟಕವಾಗಿರದಿದ್ದರೂ, ವಸಾಹತು ಕಾಲಘಟ್ಟದ ಸಾಂಸ್ಕೃತಿಕ ಒತ್ತಡವು ಒಂದು ನಾಡನ್ನು ಕಲ್ಪಿಸಿ ಕೊಂಡಿತ್ತು. ಮುಂದೆ ಇದು ಸ್ವತಂತ್ರ ಭಾರತದೊಳಗೆ ಅಧಿಕೃತವಾದ ಒಂದು ಅಸ್ತಿತ್ವವನ್ನು, ರೂಪವನ್ನು ತಾಳುವುದನ್ನು ನೋಡಬಹುದು.

ಹೀಗಾಗಿ ಕರ್ನಾಟಕ ಎಂದು ಸ್ಥಾಪಿತವಾದ ಈ ಐತಿಹಾಸಿಕ ರಚನೆಯನ್ನು ಕಾಲದ ಜಾಡು ಹಿಡಿದು ನೋಡಿದಾಗ ಈಗ ರೂಪುತಳೆದ ಮಾದರಿಯ ಕರ್ನಾಟಕ ಹಿಂದೊಮ್ಮೆ ಅಸ್ತಿತ್ವದಲ್ಲಿ ಇತ್ತು ಎನ್ನುವುದನ್ನು ಒಪ್ಪಲಾಗದು. ಈಗ ನೋಡುವ ಮಾದರಿಯ ರಾಜಕೀಯ ಸ್ವರೂಪದ ಏಕಾಧಿಪತ್ಯದಲ್ಲಿ ಈ ಭೂಭಾಗವನ್ನು ಈ ಪೂರ್ವದ ಇತಿಹಾಸದಲ್ಲಿ ನೋಡುವುದು ಸಾಧ್ಯವಿಲ್ಲ. ಏಕೀಕರಣ ಪೂರ್ವದ ಈ ಭೂಭಾಗ ರಾಜಕೀಯವಾಗಿ ಮತ್ತು ಆಡಳಿತಾತ್ಮಕವಾಗಿ ಅಥವಾ ಪ್ರಾದೇಶಿಕವಾಗಿ ಒಂದೇ ವ್ಯವಸ್ಥೆಯಾಗಿ ಇದ್ದಿರಲಿಲ್ಲ. ಆದರೆ ಸಾಂಸ್ಕೃತಿಕ ಗುಣ ಸ್ವರೂಪದಲ್ಲಿ ವೈವಿಧ್ಯತೆಯ ಭಾವನೆಯ ಹೊರತಾಗಿ ಸಂಘಟಿತವಾದ ಭಾವನೆ ಇರಲಿಲ್ಲ. ಕನ್ನಡಿಗರಲ್ಲಿನ ವಿಭಜಿತ ಭಾವನೆಯೇ ಮುಂದೆ ತಾವು ಮತ್ತೆ ಒಂದಾಗಬೇಕು ಎಂಬ ಆಲೋಚನೆಯಿಂದ ಹುಟ್ಟಿದ ಏಕೀಕರಣ ಚಳವಳಿಗೆ ನಾಂದಿಯಾಗಿ ಹೆಚ್ಚು ನಿಖರವಾದ ಗಡಿರೇಖೆಗಳನ್ನು ಒಳಗೊಂಡ ಸ್ವರೂಪದ ನಾಡನ್ನೂ ಪರಿಭಾವಿಸಿಕೊಂಡು ಅದನ್ನು ಸಾಧಿಸುವುದು ತೀವ್ರ ಸ್ವರೂಪದ ರಾಜಕೀಯ ಉದ್ದೇಶವೂ ಆಗಿ ಬದಲಾದುದನ್ನು ನೋಡಬಹುದು. ಏಕೀಕರಣವನ್ನು ಸಾಧಿಸುವುದು ಒಂದು ರಾಜಕೀಯ ಉದ್ದೇಶವಾದರೂ ಕನ್ನಡದ ಚಿಂತಕರು ಕಲ್ಪಿಸಿಕೊಂಡ ಕನ್ನಡ ನಾಡು, ಒಂದು ಭೂಪ್ರದೇಶ, ಒಂದು ಭಾಷೆ ಎನ್ನುವ ಸ್ವರೂಪದಲ್ಲಿ ಇದನ್ನು ಸಾಧಿಸಲು ಬಯಸಿರಲಿಲ್ಲ. ಆಲೂರ ವೆಂಕಟರಾಯರು ಹೇಳುವಂತೆ 'ಕರ್ನಾಟಕ ಬರೇ ನಾಡಲ್ಲ, ಬರೇ ಒಂದು ಭಾಷೆಯಲ್ಲ, ಬರೇ ಅದರ ಕಲೆ ಶಿಲ್ಪವಲ್ಲ. ಬರೇ ಅದರ ಇತಿಹಾಸವಲ್ಲ' ಎನ್ನುತ್ತಾ ಕನ್ನಡ ನಾಡಿನ ಸಾಂಸ್ಕೃತಿಕ ಸ್ವರೂಪವನ್ನು ಪ್ರಧಾನವಾಗಿಸುತ್ತಾರೆ. ಅಂದರೆ ಯುರೋಪಿನ ಭಾಷಾ ರಾಷ್ಟ್ರೀಯತೆಗಳಂತೆ ಒಂದು ನಿರ್ದಿಷ್ಟ ಗಡಿಯನ್ನು ಗುರುತಿಸಿಕೊಂಡು ಅದನ್ನು ಒಂದು ಪ್ರಭುತ್ವವಾಗಿ ಸ್ಥಾಪಿಸಿಕೊಳ್ಳುವ ಬಗೆಯ ಭಾಷಾ ಪ್ರಜ್ಞೆ ಕನ್ನಡದ್ದಲ್ಲ. ಕನ್ನಡಿಗರಾಗಿ ತಾವೆಲ್ಲರೂ ಒಂದೇ ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ. ಆದರೆ ಆ ಪ್ರಜ್ಞೆಯೇ ಒಂದು ಪ್ರತ್ಯೇಕ ಪ್ರಭುತ್ವದ ಪ್ರಜ್ಞೆಯಾಗಿ ಬೆಳೆಯುವುದಿಲ್ಲ. ಮರಾಠಿ, ತಮಿಳು, ತೆಲುಗು, ಮಲೆಯಾಳಗಳ ವಿಸ್ತರಣಾವಾದಿ ಪ್ರವೃತ್ತಿ, ಇಂಗ್ಲಿಷ್, ಹಿಂದಿಯ ಹೇರಿಕೆಯ ಕುರಿತು ವಿರೋಧವನ್ನು ಈ ನಾಡು ತೋರಿಸುತ್ತಿದ್ದರೂ ಅದು ಭಾಷೆಯ ವಿರೋಧವಾಗದೇ ಕನ್ನಡದ ಅಸ್ತಿತ್ವದ ಸವಾಲಾಗುತ್ತದೆ. ಅನ್ಯ ಭಾಷೆಗಳಿಂದ ಕನ್ನಡಕ್ಕಾಗುವ ನೋವು ನಷ್ಟಗಳ ಕುರಿತು ತೀವ್ರವಾದ ವೇದನೆಯನ್ನು ವ್ಯಕ್ತಪಡಿಸುತ್ತಲೇ ಕನ್ನಡಿಗರನ್ನು ಸಮೀಪಕ್ಕೆ ತರುವ ಪ್ರಯತ್ನವನ್ನು ತೀವ್ರ ಸ್ವರೂಪದಲ್ಲಿ ಮಾಡುತ್ತದೆ. ಕನ್ನಡ ನಾಡಿನ ಕಲ್ಪನೆ

ಅನ್ಯಭಾಷೆಗಳನ್ನು ಶತ್ರುತ್ವದ ನೆಲೆಯಲ್ಲಿ ಕಾಣುವ ಬಗೆಯಲ್ಲಿ ಬೆಳೆಯಲಿಲ್ಲ. ಅನ್ಯ ಭಾಷೆಗಳಿಂದ ಕನ್ನಡದ ಪ್ರಜ್ಞೆಗೆ ತೊಂದರೆಯಾಗಿದ್ದರೂ ನಾಡಿನ ಕುರಿತು ಮಾತನಾಡುವಾಗ ಕನ್ನಡಿಗರ ನಿಷ್ಕ್ರಿಯತೆಯನ್ನೇ ವಿಷಾದದ ಧ್ವನಿಯಲ್ಲಿ ಚಿತ್ರಿಸುತ್ತಾರೆ. ದ.ರಾ.ಬೇಂದ್ರೆಯವರು ತಮ್ಮ ಕವಿತೆಯಲ್ಲಿ

" ತಮಿಳರಣ್ಣಾ ತೆಲುಗ ತಮ್ಮಾ ಕೇರಳ ಕಿರಿಸೋದರಾ
ಆರದಿರಲೈ ಆದರಾ
ಮಹಾರಾಷ್ಟ್ರನಿರು ನೀನುತ್ತರಾ
ನೆರೆ ಹೊರಿಕೆಯಾಗಲಿ ಹತ್ತಿರಾ
ಬೆಳೆಸೋಣ ಇಬ್ಬರ ಎತ್ತರಾ" ಎನ್ನುವಾಗ ಕನ್ನಡಿಗರ ಬದುಕಿನ ಅರ್ಥಪೂರ್ಣತೆಯನ್ನು ಅನ್ಯ ಭಾಷಿಕರ ಜೊತೆಗಿನ ಸ್ನೇಹದಲ್ಲಿ ವಿಶ್ವಾಸದಲ್ಲಿ ಕಾಣುತ್ತಾರೆ. ಕುವೆಂಪು ಅನ್ಯಭಾಷೆಗಳ ಹೊರೆಯಿಂದ ಕನ್ನಡಕ್ಕಾಗುವ ಕೇಡಿನ ಬಗ್ಗೆಯೂ ಗಟ್ಟಿಧ್ವನಿಯಲ್ಲಿಯೇ ಮಾತನಾಡುತ್ತಾರೆ.

"ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ
ಹೊರ ನುಡಿಯ ಹೊರೆಯಿಂದ ಕುಸಿದು ಕುಗ್ಗಿ"

ಎನ್ನುತ್ತಾರೆ. ಕನ್ನಡದ 'ಸ್ವ'ವನ್ನು ಚಿಂತಿಸುವ ಸಂದರ್ಭದಲ್ಲಿ, ಕನ್ನಡದ ಗುರುತಾಗಿ ನಾಡನ್ನು ಕಲ್ಪಿಸುವಾಗ ವಸಾಹತುಶಾಹಿಯ ವಿಭಜನಾವಾದಿ ಪ್ರವೃತ್ತಿಯನ್ನು ಮತ್ತು ಕನ್ನಡಿಗರ ನಿಷ್ಕ್ರಿಯತೆಯನ್ನು ಪ್ರಶ್ನಿಸುತ್ತಾ, ಅದಕ್ಕೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಛಿದ್ರೀಕರಣಗೊಂಡ ಈ ಸ್ಥಿತಿಯಿಂದ ಪಾರಾಗಲು ಕರ್ನಾಟಕವನ್ನು ಕಾಲ-ದೇಶಾತೀತವಾಗಿ ಕಲ್ಪಿಸಿಕೊಳ್ಳುತ್ತಾರೆ. ಗತದ ರಾಜರನ್ನು, ಕವಿಗಳನ್ನು, ವೀರರನ್ನು, ಮುನ್ನೆಲೆಗೆ ತಂದುಕೊಂಡು ಅವರಿಂದ ಸ್ಫೂರ್ತಿಯನ್ನು ಪಡೆಯುತ್ತಾರೆ. ವರ್ತಮಾನದ ಬಿಕ್ಕಟ್ಟುಗಳಿಗೆ ಉತ್ತರವನ್ನು ಶೋಧಿಸುತ್ತಾರೆ. ಹೀಗಾಗಿಯೇ ಕುವೆಂಪು ಅವರು ಅಖಂಡ ಕರ್ನಾಟಕವನ್ನು ಕಟ್ಟುವಾಗ ಭೌಗೋಳಿಕ ಕರ್ನಾಟಕವನ್ನು ಬದಿಗೆ ಸರಿಸಿ, ಅದರ ವರ್ತಮಾನದ ರಾಜರನ್ನು ಪರಿಹಾರವಾಗಿ ಕಾಣದೆ, ನೃಪತುಂಗ, ಪಂಪ-ರನ್ನರಲ್ಲಿ ಪರಿಹಾರವನ್ನು ಹುಡುಕುತ್ತಾರೆ. ಕಾಲಗತಿಯಲ್ಲಿ ಛಿದ್ರಗೊಳ್ಳದೆ, ನಿರಂತರವಾಗಿ ಮುಂದುವರಿದು ಸಾಂಸ್ಕೃತಿಕವಾಗಿ ಮೆರೆಯಬಲ್ಲ ಕರ್ನಾಟಕವನ್ನು ಅವರು ಕಲ್ಪಿಸುತ್ತಾರೆ. ಎಲ್ಲ ಕಾಲದಲ್ಲೂ ಎದ್ದು ನಿಲ್ಲಬಲ್ಲ ಕರ್ನಾಟಕವೇ

ಅವರಿಗೆ ಪ್ರಧಾನವಾಗುತ್ತದೆ. ಪರಕೀಯ ವಶದಲ್ಲಿರುವ ಭಾರತ ರಾಷ್ಟ್ರದ ಕುರಿತಾಗಲಿ, ಛಿದ್ರಗೊಂಡಿರುವ ಕನ್ನಡ ನಾಡಿನ ಕುರಿತ್ತಾಗಲೀ ಕನ್ನಡದ ಕವಿಗಳು ಭರವಸೆ ಕಳೆದುಕೊಳ್ಳದೆ ಅವರು ಗತದಿಂದ ಮತ್ತೆ ಸ್ಫೂರ್ತಿಯನ್ನು ಪಡೆಯುತ್ತಾರೆ.

ಕನ್ನಡದ ನೆಲ ಒಂದು ನಾಡಾಗಿ ಮಂಡಿಸಲ್ಪಡುತ್ತಿದ್ದಾಗ ಸಹಜವಾಗಿಯೇ ನಾಡಿಗೆ ಸಮುದಾಯದ ಮಾನ್ಯತೆಯನ್ನು ಗಳಿಸಲು ಮತ್ತು ಸಮುದಾಯವನ್ನು ಹೋರಾಟಕ್ಕೆ ಅಣಿಗೊಳಿಸಲು ಬೇಕಾದ ಅನೇಕ ಬಗೆಯ ತಂತ್ರಗಳು ಕ್ರಿಯಾರೂಪದಲ್ಲಿದ್ದವು. ಇದರ ಭಾಗವಾಗಿಯೇ, ಕನ್ನಡದ ನೆಲವನ್ನು ಪವಿತ್ರೀಕರಿಸುವ, ಅದನ್ನು ಎಲ್ಲಾ ದೋಷಗಳಿಂದಲೂ ಮುಕ್ತವಾದ ನೆಲೆಯಲ್ಲಿ ವೈಭವೀಕರಿಸುವ ಪ್ರಯತ್ನ ನಡೆದಿದೆ. ಒಂದೆಡೆ ಕನ್ನಡದ ಕವಿ-ಚಿಂತಕರು ಕರ್ನಾಟಕದ ಮೂಲಕ ಜಗತ್ತನ್ನೇ ಕಾಣುತ್ತಿದ್ದರೂ, ಈ ಪವಿತ್ರಿಕರಣ, ವೈಭವೀಕರಣಗಳ ಉದ್ದೇಶ ಏನು ಎಂಬ ಪ್ರಶ್ನೆ ಸಹಜವಾಗಿಯೇ ಕಾಡುತ್ತದೆ. ಇದರ ಕಾರಣ ನಾಡಿನ ಕುರಿತು ಆಲೋಚನೆಗಳು ಹುಟ್ಟಿಕೊಂಡ ಕಾಲಘಟ್ಟದಲ್ಲಿದೆ. ಒಡೆದು ಹೋದ ಭಾಷಿಕ ಪ್ರದೇಶವನ್ನು ಮರಳಿ ಸಂಘಟಿಸಬೇಕಾದರೆ, ನಾಡಿನ ಜನಗಳಲ್ಲಿ ಎಚ್ಚರವನ್ನು, ಮೂಡಿಸಬೇಕಾಗಿತ್ತು. ಹೀಗಾಗಿ ಈ ಬಗೆಯ ವೈಭವೀಕರಣದ ಹಿಂದೆ ನಾಡಿನ ವೈವಿಧ್ಯತೆಯನ್ನು ನಿರಾಕರಿಸುವ, ಆ ಮೂಲಕ ಬಲಿಷ್ಠ ಸಮುದಾಯಗಳ ಪರವಾದ ಯೋಚನೆ ಇತ್ತು ಎಂದು ಭಾವಿಸುವ ಅವಶ್ಯಕತೆಯಿಲ್ಲ. ಆ ಕಾಲಧರ್ಮವೇ ಹಾಗಿತ್ತು. ಕನ್ನಡದ ಏಕೀಕರಣವು ಅಂತಿಮವಾಗಿ ರಾಷ್ಟ್ರೀಯತೆಯ ಒಂದು ಭಾಗವಾಗಿಯೇ ಮುಂದುವರಿಯಿತು. "ಕನ್ನಡ ನಾಡು ಎಂಬ ಪರಿಕಲ್ಪನೆ ಹಳೆಯದು. ದೇಶ-ಭಾಷೆ ಎರಡನ್ನೂ ಸೂಚಿಸುವ ಒಂದು ಪದವಾಗಿ ಕನ್ನಡ ಬಳಕೆಯಾಗಿದೆ. ಏಕೀಕರಣದ ಅನಂತರದಲ್ಲಿ ಭಾರತದಲ್ಲಿ ಅಂತರ್ಗತವಾದ ಕರ್ನಾಟಕಕ್ಕೆ ಒಂದು ಉಪರಾಷ್ಟ್ರೀಯ ಚಹರೆ ಇದೆ ಎಂಬ ಚಿಂತನೆಗಳು ಮಂಡಿತವಾದವು. ಭಾರತವೆಂಬ ಸಂರಚನೆಯಲ್ಲಿ ಸ್ವತಂತ್ರ ಅಸ್ತಿತ್ವ ಇದ್ದರೂ ತಾನು ಬೇರೆಯಾಗಿ ತೋರದ ಕರ್ನಾಟಕ ಎಂಬುದನ್ನು ಕಲ್ಪಿಸಲಾಯಿತು".[೬] ಎಂಬ ಕೆ.ವಿ.ನಾರಾಯಣ ಅವರ ಅಭಿಪ್ರಾಯ ಕನ್ನಡ ನಾಡಿನ ತಾತ್ವಿಕ ಸ್ವರೂಪವನ್ನು ಗ್ರಹಿಸುವಲ್ಲಿ ಸೂಕ್ತವಾಗಿದೆ. ನಾಡು ಎನ್ನುವುದು ಈಗಾಗಲೇ 'ಉಪ ರಾಷ್ಟ್ರೀಯತೆ'ಯಾಗಿ, ಕನ್ನಡದ 'ಪ್ರಾದೇಶಿಕ ಮೀಮಾಂಸೆ'ಯಾಗಿ, ಏಕೀಕರಣ ಚಳವಳಿಯ ಮೂಲಕ ರೂಪುಗೊಂಡ ಒಂದು ಆಡಳಿತ ಘಟಕವಾಗಿ ಹೀಗೆ ಹಲವು ಸ್ವರೂಪದಲ್ಲಿ ಚರ್ಚೆಗೆ ಒಳಪಟ್ಟಿದ್ದು. ಈ

ಅಧ್ಯಯನದ ಸಂದರ್ಭದಲ್ಲಿ ಕನ್ನಡ ಭಾಷಿಕ ಚಹರೆಯಿಂದ ಸಂಘಟಿತಗೊಂಡ ಸಮುದಾಯದ ಗುರುತೊಂದರ ಪ್ರತೀಕವಾಗಿ ನಾಡನ್ನು ಪರಿಕಲ್ಪಿಸಲಾಗಿದೆ.

**೨.೩ 'ರಾಷ್ಟ್ರ' ಪರಿಕಲ್ಪನೆಯ ತಾತ್ವಿಕ ವಿವೇಚನೆ:**

" ನಮ್ಮಲ್ಲಿ ಆಧುನಿಕ ಪೂರ್ವದಲ್ಲೆ ರಾಷ್ಟ್ರಗಳು ಇದ್ದುವು. ಸೌರಾಷ್ಟ್ರ, ಮಹಾರಾಷ್ಟ್ರಗಳು ರಾಷ್ಟ್ರಗಳೇ ಆಗಿದ್ದುವು. ಆದರೆ ಅವುಗಳು ಆಧುನಿಕ ಅರ್ಥದ ರಾಷ್ಟ್ರಗಳಲ್ಲ. ಏಕಭಾಷೆ, ಏಕಜನಾಂಗ, ಏಕಧರ್ಮ, ಏಕಧ್ವಜದ ರಾಷ್ಟ್ರಗಳಲ್ಲ. ಆಧುನಿಕ ಪೂರ್ವದ ಈ ರಾಷ್ಟ್ರ ಕಲ್ಪನೆ ಬಹುರೂಪದ ರಾಷ್ಟ್ರ ಕಲ್ಪನೆಯನ್ನು ಮಂಡಿಸುತ್ತದೆ. ಆದರೆ ಆಧುನಿಕ ಅರ್ಥದ ರಾಷ್ಟ್ರ ಪರಿಕಲ್ಪನೆ ಬಹುಭಾಷೆ, ಪ್ರದೇಶ, ಜನಾಂಗಗಳ ಬಹುರೂಪಗಳನ್ನು ಕರಗಿಸಿ ಏಕತ್ವಗೊಳಿಸುತ್ತವೆ ಅಥವಾ ಏಕರೂಪಗೊಳಿಸುತ್ತದೆ. ಈ ಅರ್ಥದಲ್ಲಿ ಆಧುನಿಕ ಪೂರ್ವದ ನಮ್ಮ ರಾಷ್ಟ್ರ ಕಲ್ಪನೆ ಆಧುನಿಕ ರಾಷ್ಟ್ರ ಪರಿಕಲ್ಪನೆಗಿಂತ ಭಿನ್ನವಾಗಿರುವುದು ಮಾತ್ರವಲ್ಲ, ಅದಕ್ಕೆ ತೀರಾ ವಿರುದ್ಧವಾದುದು ಕೂಡ"[೧೦] ಎನ್ನುವುದು ರಾಷ್ಟ್ರ ಪರಿಕಲ್ಪನೆಯ ಕುರಿತು ಬಂದಿರುವ ಅಭಿಪ್ರಾಯಗಳಲ್ಲಿ ಒಂದು. ಈ ಅಭಿಪ್ರಾಯಗಳ ಹಿಂದಿರುವ ಗ್ರಹಿಕೆಯು ರಾಷ್ಟ್ರದ ಪಾಶ್ಚಾತ್ಯ ಸ್ವರೂಪವನ್ನು ಮಾದರಿಯಾಗಿ ಸ್ವೀಕರಿಸಿದಂತಿದೆ. ಇಲ್ಲಿ ಯಾವುದನ್ನು ಆಧುನಿಕ ಪೂರ್ವದ ರಾಷ್ಟ್ರ ಕಲ್ಪನೆ ಎಂದು ಭಾವಿಸಲಾಗಿದೆಯೋ ಅದು ಬಹುತ್ವದ ಪೋಷಕ ಎಂಬ ಗ್ರಹಿಕೆವಿದೆ. ಆಧುನಿಕ ಭಾರತೀಯ ಸಂದರ್ಭದಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬಂದ ಭಾರತೀಯ ರಾಷ್ಟ್ರೀಯತೆಯು ಸ್ವರೂಪದಲ್ಲಿ ಪಾಶ್ಚಿಮಾತ್ಯ ರಾಷ್ಟ್ರ ಪರಿಕಲ್ಪನೆಗಿಂತ ಭಿನ್ನವಾಗಿಯೇ ಇತ್ತು. ಭಾರತೀಯ ರಾಷ್ಟ್ರೀಯವಾದ ಏಕಭಾಷೆಯನ್ನಾಗಲಿ, ಏಕಜನಾಂಗವನ್ನಾಗಲೀ ಪ್ರತಿಪಾದಿಸಲಿಲ್ಲ. ಏಕ ಮಾದರಿಯ ಆಡಳಿತವನ್ನು ಪ್ರತಿಪಾದಿಸಿದ್ದರೂ ಅದಕ್ಕೆ ಕಾರಣವಾದದ್ದು ಭಾರತೀಯ ರಾಷ್ಟ್ರ ಪರಿಕಲ್ಪನೆಯು ವ್ಯಾಖ್ಯಾನಗೊಂಡ ಸಂದರ್ಭವೇ ಬಹು ಮುಖ್ಯವಾದುದು. ಅಂದರೆ ಭಾರತದಲ್ಲಿ ಬ್ರಿಟಿಷ್ ವಸಾಹತುಶಾಹಿಗಳು ಹುಟ್ಟುಹಾಕಿದ ವಸಾಹತು ಪ್ರಭುತ್ವದ ವಿರುದ್ಧ ಸಂಘಟಿತರಾಗಿ ಹೋರಾಟ ಮಾಡುವ ಸಂದರ್ಭದಲ್ಲಿ ಇಲ್ಲಿ ರಾಷ್ಟ್ರೀಯ ಅಸ್ಮಿತೆ ಪ್ರಧಾನವಾಗಿ ಗುರುತಿಸಲ್ಪಟ್ಟ ಕಾರಣದಿಂದ ಈ ಹೋರಾಟಕ್ಕಾಗಿ ಜನ ಒಟ್ಟಾಗಲು, ಆ ಮೂಲಕ ಬ್ರಿಟಿಷ್ ಪ್ರಭುತ್ವವನ್ನು ಕಿತ್ತೊಗೆದು ತಮ್ಮದೇ ಆದ ಒಂದು ಪ್ರಭುತ್ವವನ್ನು ಸ್ಥಾಪಿಸಬೇಕು ಎಂಬ ಆಲೋಚನೆಯು ಆಡಳಿತಾತ್ಮಕವಾಗಿ ಏಕಮಾದರಿಯ ಕಲ್ಪನೆ ಬರಲು ಕಾರಣವಾಯಿತು.

ಆಧುನಿಕ ಪೂರ್ವ ಮತ್ತು ಆಧುನಿಕ ರಾಷ್ಟ್ರಗಳ ನಡುವಿನ ವ್ಯತ್ಯಾಸವನ್ನು ಡಿ.ಆರ್.ನಾಗರಾಜ್ ಅವರು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ಹೇಳುವಂತೆ, " ...... ಹಾಗೆಂದ ಮಾತ್ರಕ್ಕೆ ೧೯ನೆಯ ಶತಮಾನದ ಹಿಂದೆ ಹೀಗೆ 'ರಾಷ್ಟ್ರ'ಗಳು ಇರಲಿಲ್ಲವೆಂದಲ್ಲ. ಭಾರತ ಆಗ ಒಂದು 'ರಾಷ್ಟ್ರ'ವಾಗಿರಲಿಲ್ಲವೆಂದಲ್ಲ. ಅಂದೂ ರಾಷ್ಟ್ರಗಳಿದ್ದವು. ಆದರೆ, ಆಧುನಿಕ ಪೂರ್ವಕಾಲದಲ್ಲಿ ಇದ್ದಂತಹ ರಾಷ್ಟ್ರಗಳಿಗೂ ಈಗಿನ ಆಧುನಿಕ ರಾಷ್ಟ್ರಗಳಿಗೂ ಕೆಲವು ಮೂಲಭೂತವಾದ ವ್ಯತ್ಯಾಸಗಳಿವೆ. ಸ್ಥೂಲವಾಗಿ ಹೇಳುವುದಾದರೆ ಅಂದು ಇದ್ದದ್ದು 'ರಾಷ್ಟ್ರ' (ನೇಷನ್). ಇಂದಿರುವುದು 'ರಾಷ್ಟ್ರ ಪ್ರಭುತ್ವ' (ನೇಷನ್ ಸ್ಟೇಟ್)"[೧೧]. ಅಂದರೆ ಆಧುನಿಕ ಕಾಲಘಟ್ಟದಲ್ಲಿ ಅಸ್ತಿತ್ವಕ್ಕೆ ಬಂದ ರಾಷ್ಟ್ರಗಳು 'ರಾಷ್ಟ್ರಪ್ರಭುತ್ವ'ಗಳೇ ಆಗಿದೆ. ಇದು 'ರಾಷ್ಟ್ರ'ಕ್ಕಿಂತ ಭಿನ್ನವಾದುದು. ಈ ವ್ಯತ್ಯಾಸವನ್ನು ಅರಿಯದೇ ಹೋದಲ್ಲಿ ಆಧುನಿಕ 'ರಾಷ್ಟ್ರಪ್ರಭುತ್ವ'ದ ಹಿನ್ನೆಲೆಯಲ್ಲಿ 'ಭಾರತ ರಾಷ್ಟ್ರ'ವೇ ಅಲ್ಲ ಎಂದುಬಿಡುವ ಸಾಧ್ಯತೆ ಇದೆ. 'ರಾಷ್ಟ್ರ ಪ್ರಭುತ್ವ'ವು ಪ್ರಭುತ್ವದ ಪ್ರಶ್ನೆಯಾಗುವುದರಿಂದ ಇದು ಅಪಾಯಕಾರಿಯೂ ಆಗಿಬಿಡುವ ಸಾಧ್ಯತೆ ಇದೆ. ಅಂದರೆ ಇದು ಆಧುನಿಕ ಪ್ರಭುತ್ವದ ಅಪಾಯ. ರವೀಂದ್ರನಾಥ ಠಾಗೋರ್ ಅವರು ಕೂಡ ರಾಷ್ಟ್ರವನ್ನು ಅಪಾಯಕಾರಿ ಎಂದದ್ದು ಇದೇ ಹಿನ್ನೆಲೆಯಿಂದ. ಯಾಕೆಂದರೆ ರಾಷ್ಟ್ರ ಪ್ರಭುತ್ವಕ್ಕೆ ಎಲ್ಲಾ ಬಗೆಯಿಂದಲೂ ಸಮರ್ಥನೆಗಳು ಹುಟ್ಟಿಕೊಳ್ಳುತ್ತದೆ. ಈ ಸ್ವಸಮರ್ಥನೆಯ ಕಾರಣದಿಂದಲೂ ಅದು ಹೆಚ್ಚು ಅಪಾಯಕಾರಿಯಾಗಿ ಬಿಡುವುದು. ಠಾಗೋರ್ ಹೇಳುವಂತೆ "ನಾನು ಯಾವುದೇ ಒಂದು ನಿರ್ದಿಷ್ಟ ರಾಷ್ಟ್ರದ ವಿರುದ್ಧ ಅಲ್ಲ, 'ರಾಷ್ಟ್ರ' ಎಂಬ ಪರಿಕಲ್ಪನೆಯ ವಿರುದ್ಧ. 'ರಾಷ್ಟ್ರ' ಎಂದರೇನು? ಅದು ಇಡೀ ಜನರೇ ಒಂದು ಸಂಘಟಿತ ಅಧಿಕಾರ ಕೇಂದ್ರವಾಗುವ ವಿಚಾರ. ಜನರು ಯಾವಾಗಲೂ ಬಲಶಾಲಿಗಳಾಗಿ ಇರುವಂತೆ ಈ ಸಂಘಟನೆ ಉತ್ತೇಜಿಸುತ್ತದೆ. ಆದರೆ ಇದು ವ್ಯಕ್ತಿಯ ಶಕ್ತಿಯ ಅಪವ್ಯಯ ಮತ್ತು ಇದರಿಂದ ಸ್ವಾರ್ಥ ತ್ಯಾಗ ಮತ್ತು ಸೃಜನಶೀಲತೆಯೆಂಬ ಉನ್ನತ ಗುಣಗಳನ್ನು ಹೊಂದಲು ಬಲ ಇಲ್ಲದಂತಾಗುತ್ತದೆ. ಇದರಿಂದಾಗಿ ವ್ಯಕ್ತಿಯ ತ್ಯಾಗದ ಶಕ್ತಿಯು ಪರಮೋದ್ದೇಶವಾದ ನೈತಿಕತೆಯನ್ನು ಇಟ್ಟುಕೊಳ್ಳುವುದಕ್ಕೆ ಬದಲಾಗಿ ಯಾಂತ್ರಿಕವಾದ ಈ ಸಂಘಟನೆಯನ್ನು ಉಳಿಸಿಕೊಳ್ಳಲು ಬಳಕೆಯಾಗುತ್ತದೆ. ಅಷ್ಟಾದರೂ ಇದರಲ್ಲಿಯೇ ಆತ ನೈತಿಕ ಪರಮಾನಂದವನ್ನು ಪಡೆಯುತ್ತಾನೆ ಮತ್ತು ಇದರಿಂದಾಗಿ ಮಾನವ ಕುಲಕ್ಕೆ ಅತೀ ಅಪಾಯಕಾರಿಯಾಗುತ್ತಾನೆ."[೧೨] ಆಧುನಿಕ ಸಂದರ್ಭದಲ್ಲಿ 'ರಾಷ್ಟ್ರ' ಪರಿಕಲ್ಪನೆಗೆ ಬಂದ ಕಟು ವಿಮರ್ಶೆಗಳಲ್ಲಿ ಇದೂ ಒಂದು.

ಇಲ್ಲಿ ಒಂದು ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಬೇಕು. ಭೌಗೋಳಿಕ ರಾಷ್ಟ್ರೀಯತೆಯು ಅಂದರೆ ಭೂಗೋಳ, ಅದನ್ನು ಒಂದು ಭೂಪಟದೊಳಗೆ ಕಲ್ಪಿಸಿಕೊಂಡು ಗಡಿರೇಖೆಗಳನ್ನೆಳೆದು ಇತರರಿಂದ ಪ್ರತ್ಯೇಕಿಸುವ ಮಾದರಿಯ ರಾಷ್ಟ್ರೀಯತೆಗಿಂತ ಭಾರತದಲ್ಲಿ ಸಾಂಸ್ಕೃತಿಕ ಸ್ವರೂಪದ ರಾಷ್ಟ್ರೀಯತೆ ಹೆಚ್ಚು ಪ್ರಚಲಿತದಲ್ಲಿತ್ತು. ಹಾಗೆ ನೋಡಿದರೆ ಭೌಗೋಳಿಕ ರಾಷ್ಟ್ರೀಯತೆ ಭಾರತೀಯರಿಗೆ ಹೊಸತು. ವಸಾಹತುಶಾಹಿಯ ಆಡಳಿತದ ಅನುಭವದಿಂದಲೇ ಇದು ದತ್ತವಾದುದು ಎಂದರೂ ತಪ್ಪಿಲ್ಲ. ಯಾಕೆಂದರೆ ಒಂದು ಚಕ್ರಾದಿಪತ್ಯ ಅಥವಾ ಪ್ರಭುತ್ವಕ್ಕೆ ಒಳಪಟ್ಟ ಅನುಭವ ಭಾರತಕ್ಕೆ ಈ ಹಿಂದೆ ಇರಲಿಲ್ಲ. ಈ ಹಿನ್ನೆಲೆಯಿಂದ ನೋಡಿದಾಗ ಭಾರತಕ್ಕೆ 'ರಾಷ್ಟ್ರಪ್ರಭುತ್ವ' ಹೊಸತು. ಇಲ್ಲಿ ರಾಷ್ಟ್ರಪ್ರಭುತ್ವವು ಯಾವುದನ್ನು ಭಾರತದ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟದ್ದು ಎಂದು ಗುರುತಿಸಿ ಒಂದು ಪ್ರಭುತ್ವದ ಒಳಗೆ ತರುವ ಪ್ರಯತ್ನವನ್ನು ಮಾಡಿತೋ ಅದೇ ಭೂಪ್ರದೇಶವನ್ನು ಅಥವಾ ಕೆಲವೊಮ್ಮೆ ಅದನ್ನು ಮೀರಿಯೂ ಸಾಂಸ್ಕೃತಿಕ ಸ್ವರೂಪದಲ್ಲಿ, ಒಂದು ಮನೋಮಯ ಸ್ವರೂಪದಲ್ಲಿ, ಬಿಂಬಿಸಲ್ಪಟ್ಟ ಚಿತ್ರಣ ಇಲ್ಲಿ ಈ ಹಿಂದೆಯೇ ಇತ್ತು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಇಲ್ಲಿ ವಿಶೇಷವಾಗಿ ಕಾವು ಪಡೆದದ್ದು ಇಲ್ಲಿನ ಭೌಗೋಳಿಕ ರಾಷ್ಟ್ರೀಯತೆಯೇ. ಅದಕ್ಕೆ ಪರಿಕರಗಳಾಗಿ ಮಂಡಿಸಲ್ಪಟ್ಟದ್ದು ಇಲ್ಲಿನ ಸಾಂಸ್ಕೃತಿಕ ವಿವರಗಳು. ಹಾಗಾಗಿ ಇಲ್ಲಿನ ಸಾಂಸ್ಕೃತಿಕ ಪಠ್ಯಗಳಿಂದ, ಸಾಂಸ್ಕೃತಿಕ ಪರಿಭಾಷೆಗಳಿಂದ ರಾಜಕೀಯ ಭಾರತವನ್ನು ಸಂಘಟಿಸಲಾಯಿತು. ಇದಕ್ಕೆ ಕನ್ನಡ ಕಾವ್ಯಗಳು ಬಳಸುವ ಪರಿಭಾಷೆಗಳೇ ನಿದರ್ಶನಗಳು. ರಾಷ್ಟ್ರ ಪ್ರಭುತ್ವದ ಮರು ಸಂಘಟನೆಯ ಪ್ರಕ್ರಿಯೆಯಲ್ಲಿ 'ಸಾಂಸ್ಕೃತಿಕ ಭಾರತ ರಾಷ್ಟ್ರ' ಸ್ವರೂಪವು ಹೆಚ್ಚು ವ್ಯಾಪಕವಾಗಿ ಚರ್ಚೆಗೆ ಒಳಪಡಲಿಲ್ಲ. ಈ ಸಂಗತಿಗೆ ಕಾರಣವಾದದ್ದು ಇಲ್ಲಿದ್ದ ಬಾಹ್ಯ ಒತ್ತಡ ಎನ್ನುವುದನ್ನು ಗಮನಿಸಬೇಕು.

ಆಧುನಿಕ ರಾಷ್ಟ್ರದ ಕುರಿತು ಬೆನಡಿಕ್ಟ್ ಆಂಡರ್ಸನ್ ಮಾಡಿದ ವ್ಯಾಖ್ಯಾನ ಬಹುಮುಖ್ಯವಾದುದು. ಆತನು ಹೇಳಿದ "ರಾಷ್ಟ್ರ ಒಂದು ಕಲ್ಪಿತ ಸಮುದಾಯ"[೧೩] ಎಂಬ ಮಾತು ರಾಷ್ಟ್ರದ ಸ್ವರೂಪವನ್ನು ಚರ್ಚಿಸುತ್ತದೆ. 'ಭೂ ನಕ್ಷೆ'ಯು ಒಂದು ರಾಷ್ಟ್ರದ ಭೌಗೋಳಿಕ ಸ್ವರೂಪವನ್ನು ಗುರುತಿಸಿ, ರಾಷ್ಟ್ರವೆನ್ನುವ ಕಲ್ಪನೆಗೆ ಒಂದು ಭೌತಿಕ ಆಕಾರವನ್ನು ಕೊಡುತ್ತದೆ. 'ಜನಗಣತಿ'ಯು ಒಂದು ರಾಷ್ಟ್ರದ ಪ್ರಜಾಸ್ವರೂಪವನ್ನು ಗುರುತಿಸುತ್ತದೆ. 'ಮ್ಯೂಸಿಯಂ' ಅಂದರೆ ಗತದ ಪರಂಪರೆಯ ನೆನಪಿನ ಮೂಲಕ ರಾಷ್ಟ್ರ ಮರು ಸಂಘಟಿತಗೊಳ್ಳುತ್ತದೆ' ಎಂದು ತನ್ನ ವಿಚಾರವನ್ನು ಪ್ರತಿಪಾದಿಸಿದ್ದ. ಅಂದರೆ

ಯಾವುದನ್ನು ಒಂದು 'ರಾಷ್ಟ್ರ' ಎಂದು ಹೇಳುತ್ತೇವೆಯೋ ಅದು ಸಂಪೂರ್ಣವಾಗಿ ಒಂದು ಕಲ್ಪಿತವಾದ ಸಮುದಾಯವಾಗಿದೆ. ಯಾಕೆಂದರೆ ಯಾವುದೇ ಒಂದು ಪುಟ್ಟ ರಾಷ್ಟ್ರದ ಸದಸ್ಯರೂ ಕೂಡ ಪರಸ್ಪರ ಎಲ್ಲರೂ ಪರಿಚಿತರಲ್ಲ.ಅವರು ಪರಸ್ಪರ ಬೇಟಿಯಾಗಿಯೂ ಇರುವುದಿಲ್ಲ. ಹೀಗಿದ್ದರೂ ಅಲ್ಲಿನ ಪ್ರತಿಯೊಬ್ಬರೂ ಕೂಡಾ ತಮ್ಮ ಮನಸ್ಸಿನಲ್ಲಿ ಆ ರಾಷ್ಟ್ರದ ಇನ್ನೊಬ್ಬರನ್ನು ತಮ್ಮವರೇ ಎಂಬ ಭಾವನೆಯನ್ನು ಹೊಂದಿರುತ್ತಾರೆ. ತಾವೆಲ್ಲ ಒಂದು ಸಂಸ್ಕೃತಿಯ ಮೂಲದಿಂದ ಬಂದವರು ಎನ್ನುವ ಭಾವನೆಯೊಂದಿಗೆ ತಾವು 'ರಾಷ್ಟ್ರ'ವಾಗಿ ಒಂದು ಅಂದುಕೊಳ್ಳುತ್ತಾರೆ. ಈ ಭಾವನಾತ್ಮಕ ಒಡನಾಟ ಉಂಟಾಗಿರುವುದು ಯಾವುದೋ ಒಂದು ನಿರ್ದಿಷ್ಟ ಕಾಲಘಟ್ಟದ ಕಾರಣದಿಂದ ಎಂದು ಭಾವಿಸುವುದಿಲ್ಲ. ಬದಲಾಗಿ ತಾವು ಯಾವತ್ತಿನಿಂದಲೂ ಇದೇ ರೀತಿ ಸಂಬಂಧ ಹೊಂದಿದವರೇ ಆಗಿದ್ದೇವೆ ಎಂದು ನಂಬುತ್ತಾರೆ. ಉದಾಹರಣೆಗೆ, ಭಾರತೀಯ ಸಂದರ್ಭದಲ್ಲಿ ವಸಾಹತುಶಾಹಿಯ ವಿರುದ್ಧದ ಹೋರಾಟದ ಸಂದರ್ಭದಲ್ಲಿ ಎಲ್ಲಾ ಪ್ರಾಂತದ ಜನರನ್ನೂ ಕೂಡ ಹೆಚ್ಚು ಹತ್ತಿರಕ್ಕೆ ತರಲು ಕಾರಣವಾಯಿತು. ಅಂದರೆ ಒಂದು ಜನ ಸಮೂಹದ ಮನಸ್ಸಿನಲ್ಲಿ ಈ ರಾಷ್ಟ್ರೀಯತೆಯ ಮನೋಭಾವ ಹುಟ್ಟುವುದಕ್ಕೆ ಚಾರಿತ್ರಿಕವಾದ ಕೆಲವು ಕಾರಣಗಳಿರುತ್ತದೆ. ಒಂದು ನಿರ್ದಿಷ್ಟ ಉದ್ದೇಶ ಮುಂದಿದ್ದಾಗ ತಾವೆಲ್ಲರೂ ಒಂದು ಎಂಬ ಭಾವನೆಯೂ ಬರಲು ಸಾಧ್ಯವಾಗುತ್ತದೆ. ಭಾರತದಲ್ಲಿ ಆಧುನಿಕ ಪೂರ್ವದ ಸಂದರ್ಭದಲ್ಲಿದ್ದ 'ರಾಷ್ಟ್ರ' ಮನೋಭಾವಕ್ಕಿಂತ ಹೆಚ್ಚು ಮೂರ್ತ ಸ್ವರೂಪದಲ್ಲಿ ವಸಾಹತುಶಾಹಿ ವಿರೋಧದ ಹೋರಾಟದ ಸಂದರ್ಭದಲ್ಲಿ 'ರಾಷ್ಟ್ರೀಯತೆ'ಯ ಮನೋಭಾವ ಪ್ರಕಟಗೊಂಡಿತು. ಹೀಗೆ ಪ್ರಕಟಗೊಳ್ಳುವುದರ ಹಿಂದೆ ಒಂದು ಆಧುನಿಕ ವಿದ್ಯಮಾನ ಕೆಲಸ ಮಾಡಿದೆ. ಹಾಗೆಂದು ಈ ಒಂದು ವಿದ್ಯಮಾನದಿಂದಲೆ ಭಾರತೀಯ ರಾಷ್ಟ್ರೀಯತೆ ಹುಟ್ಟಿಕೊಂಡಿತು ಎಂದರ್ಥವಲ್ಲ. ರಾಷ್ಟ್ರೀಯತೆಯ ಉದ್ದೇಶಾತ್ಮಕ ವ್ಯಾಪ್ತಿಯ ಹರಹು ತುಂಬಾ ವಿಸ್ತಾರವಾದುದು. ಅದನ್ನು ನಿರ್ದಿಷ್ಟ ಘಟನೆಯೊಂದಿಗೆ ಸಮೀಕರಿಸುವುದಕ್ಕೆ ಸಾಧ್ಯವಾಗದು. ಆ ಕಾರಣದಿಂದಲೆ ಅದು ಒಂದು ಉನ್ನತ ಆದರ್ಶವಾಗಿ, ಅಭಿಮಾನವಾಗಿ ಚರಿತ್ರೆಯಲ್ಲಿ ಮತ್ತೆ ಮತ್ತೆ ಪ್ರಕಟಗೊಳ್ಳುತ್ತದೆ. ಆಂಡರ್‌ಸನ್ ಮುಂದುವರಿದು ಭಾರತೀಯ ರಾಷ್ಟ್ರೀಯತೆಯನ್ನು 'ಪ್ರತಿಧ್ವನಿತ ರಾಷ್ಟ್ರೀಯತೆ' ಎಂದು ಕರೆಯುತ್ತಾರೆ. ಇದನ್ನು ಒಪ್ಪಿಕೊಂಡರೆ ಪಶ್ಚಿಮವು ಪೂರ್ವವನ್ನು ತನಗೆ ಬೇಕಾದಂತೆ ಗ್ರಹಿಸಿ ಕಟ್ಟಿದ ವಸಾಹತುವಾದಿ ಚರಿತ್ರೆಯ ತಾತ್ವಿಕತೆಯನ್ನು ಒಪ್ಪಿಕೊಂಡಂತೆ

ಆಗುತ್ತದೆ.ಭಾರತೀಯ ರಾಷ್ಟ್ರೀಯವಾದವು ತನ್ನ ಸಂರಚನೆಯಿಂದ,ಐಡಿಯೋಲಜಿಯಿಂದ ಮತ್ತು ತಾತ್ವಿಕವಾಗಿ ಪಶ್ಚಿಮದ ರಾಷ್ಟ್ರೀಯವಾದಕ್ಕಿಂತ ಭಿನ್ನವಾದುದು. ಈ ಕಾರಣಕ್ಕಾಗಿಯೇ ಪಾರ್ಥ ಚಟರ್ಜಿಯವರು ಆಂಡರ್‌ಸನ್‌ನ ಈ ವಾದವನ್ನು ವಿರೋಧಿಸಿ 'ಭಾರತ ಒಂದು ರಾಷ್ಟ್ರವಾಗಿ ತನ್ನನ್ನು ತಾನು ಬಹಳ ಭಿನ್ನವಾಗಿಯೇ ಕಲ್ಪಿಸಿಕೊಂಡಿದೆ' ಎನ್ನುತ್ತಾರೆ. ಅಂದರೆ 'ರಾಷ್ಟ್ರ'ದ ಐರೋಪ್ಯ ವ್ಯಾಖ್ಯಾನದ ಬಗ್ಗೆ ಒಂದು ಬಗೆಯ ಎಚ್ಚರ ಇಲ್ಲಿದೆ. ಐರೋಪ್ಯ ವ್ಯಾಖ್ಯಾನದ 'ರಾಷ್ಟ್ರ' ಪರಿಕಲ್ಪನೆಯನ್ನು ಭಾರತೀಯ ಸಂದರ್ಭಕ್ಕೆ ಸಾರಸಗಟಾಗಿ ಅನ್ವಯಿಸುವುದರ ಬಗ್ಗೆ ನಮ್ಮ ಅನೇಕ ವಿದ್ವಾಂಸರಲ್ಲಿ ಪ್ರಶ್ನೆಗಳಿವೆ. ಅದೊಂದು ತಪ್ಪು ಪ್ರಕ್ರಿಯೆಯಾಗಬಹುದು ಎಂದು ಭಾವಿಸುತ್ತಾರೆ. ವಿದ್ವಾಂಸರಾದ ಡಾ. ರಾಜಾರಾಮ ತೋಳ್ಪಾಡಿಯವರು 'ರಾಷ್ಟ್ರ'ದ ಐರೋಪ್ಯ ವ್ಯಾಖ್ಯಾನವನ್ನು ಮುಂದಿಡುತ್ತಲೇ "………ಆದರೆ ಭಾರತದಂತಹ ದೇಶಗಳಲ್ಲಿ ಐರೋಪ್ಯದ್ದಾದ ಸಮಾಜಕ್ಕಿಂತ ಭಿನ್ನವಾದ ಸಾಮಾಜಿಕ ಸಂರಚನೆ ಇರುವುದರಿಂದ ಇಂಥ ಸಮಾಜಗಳಲ್ಲಿ ರಾಷ್ಟ್ರೀಯತೆಯಂಥ ಐರೋಪ್ಯ ತತ್ವದ ನೇರ ಹಾಗೂ ಸರಳ ರೇಖಾತ್ಮಕ ಅನ್ವಯ ವಿಪರೀತ ಪರಿಣಾಮಗಳನ್ನುಂಟು ಮಾಡುವುದರಿಂದ ಇದನ್ನು ಬಹಳ ಎಚ್ಚರದಿಂದಲೇ ಭಾರತದಲ್ಲಿ ಅಳವಡಿಸಲಾಯಿತು ಎನ್ನುವುದೇ ಇಲ್ಲಿಯ ಮಹತ್ವದ ವಿದ್ಯಮಾನ"[೧೪] ಎನ್ನುತ್ತಾರೆ. ಈ ಎಚ್ಚರ ಬಹಳ ಮಹತ್ವದ ಸಂಗತಿಯಾಗಿದೆ ಎನ್ನುವುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಇಲ್ಲವಾದರೆ ರಾಷ್ಟ್ರ ಎನ್ನುವುದನ್ನು ಪಶ್ಚಿಮದ ತಾತ್ವಿಕತೆಯಿಂದಲೇ ನಿರಾಕರಿಸಿ ಬಿಡಬಹುದಾದ ಅಪಾಯವೂ ಇದೆ.

ಪಶ್ಚಿಮ ತನ್ನ ವಸಾಹತುವಿಗೆ ಒಳಪಟ್ಟ ದೇಶಗಳಲ್ಲಿ ಆಧುನಿಕ ರಾಷ್ಟ್ರಪ್ರಭುತ್ವವನ್ನು ಪರಿಚಯಿಸಿದ್ದರ ಹಿಂದೆ ಐತಿಹಾಸಿಕ ಕಾರಣಗಳಿವೆ. ಪೂರ್ವ ದೇಶಗಳನ್ನು ಚರಿತ್ರೆಹೀನ, ಬರ್ಬರ ಅನಾಗರಿಕ ದೇಶಗಳೆಂದು ವಿವರಿಸುತ್ತಲೇ, ಈ ದೇಶಗಳಿಗೆ ತಮ್ಮ ಇಂಥ ಬರ್ಬರತೆಯಿಂದ ಉದ್ಧಾರಗೊಂಡು ಹೊರಬರಲು ಇರುವ ಏಕೈಕ ಸಾಧ್ಯತೆ ವಸಾಹತುವಾಗಿ ರೂಪಾಂತರ ಹೊಂದಿ ತಮ್ಮ ಉತ್ಥಾನ ಹಾಗೂ ಉದ್ಧಾರ ಪಶ್ಚಿಮದ ಅನುಸರಣೆಯಲ್ಲಿದೆ ಎಂದು ನಂಬಿಸುವ ಕ್ರಿಯೆಯ ಭಾಗವಾಗಿಯೇ ಈ ವಿದ್ಯಮಾನವೂ ನಡೆಯಿತು.

"ರಾಷ್ಟ್ರ ಎನ್ನುವ ಪರಿಕಲ್ಪನೆ ಆಧುನಿಕತೆ ಮತ್ತು ಬಂಡವಾಳಶಾಹಿಯ ಉಗಮದೊಂದಿಗೆ ಯುರೋಪಿನಲ್ಲಿ ಆರಂಭವಾಯಿತು. ಯುರೋಪಿನಲ್ಲಿ

ಬಂಡವಾಳಶಾಹಿಯ ಹಿನ್ನೆಲೆಯಲ್ಲಿ ಮತ್ತು ಭಾಷೆಗಳು ಹರಳುಗಟ್ಟಿ 'Standardaise' ಆಗುವುದರ ಮೂಲಕ ಆ ಭಾಷೆ ಒಂದು, ಆ ಭಾಷೆಯನ್ನು ಆಡುವ ಜನರೆಲ್ಲಾ ಒಂದು ಮತ್ತು ಆ ಭಾಷೆಯನ್ನು ಆಡುವ ಜನರುಗಳು ವಾಸಿಸುವ ಪ್ರದೇಶ ತನ್ನದೇ ಆದ ಸ್ವಾಯತ್ತತೆಯನ್ನು ಹೊಂದಿರಬೇಕು, ಅದಕ್ಕೊಂದು ಗಡಿ ಇರಬೇಕು, ಆ ಗಡಿಗೊಂದು ತನ್ನದೇ ಆದ ಒಂದು ಪ್ರಭುತ್ವ ಇರಬೇಕು ಎನ್ನುವ ತಿಳುವಳಿಕೆಯೊಂದಿಗೆ ಕಾಣಿಸಿಕೊಂಡಿತು" [೧೫] ಎಂದು ವಿ.ಬಿ.ತಾರಕೇಶ್ವರ್ ಹೇಳುತ್ತಾರೆ. ಈ ಚರ್ಚೆ ಯುರೋಪಿನ ರಾಷ್ಟ್ರೀಯತೆಯ ಉಗಮವನ್ನು ಗುರುತಿಸುತ್ತದೆ. ಬಹುಭಾಷಿಕ ನಾಡಾದ ಭಾರತದಲ್ಲಿ ರಾಷ್ಟ್ರೀಯತೆಯ ಉಗಮವನ್ನು ಈ ಹಿನ್ನೆಲೆಯಿಂದ ನೋಡಲಾಗದು. ಇಲ್ಲಿನ ರಾಷ್ಟ್ರವಾದದ ಚರ್ಚೆಯ ಕೇಂದ್ರ ಸಂಗತಿ ಭಾಷೆಯಲ್ಲ. ಪಾರ್ಥ ಚಟರ್ಜಿ ಹೇಳುವಂತೆ 'ಭಾರತದಲ್ಲಿ ರಾಷ್ಟ್ರೀಯತೆ ಉಗಮಗೊಂಡಿದ್ದು ಭಾಷಾಧಾರಿತವಾಗಿ ಅಲ್ಲ. ಬದಲಿಗೆ ವಸಾಹತುಶಾಹಿಯನ್ನು ವಿರೋಧಿಸುವ ನೆಲೆಯಲ್ಲಿ ಹುಟ್ಟಿಕೊಂಡದ್ದು'. ಹಾಗಾಗಿ ಒಂದು ಭಾಷೆಯನ್ನು ಆಡುವ ಜನರು ಸ್ವಾಯತ್ತತೆಯನ್ನು ಬಯಸಿದಾಗ ಭಾರತದ ರಾಷ್ಟ್ರ ಪರಿಕಲ್ಪನೆ ಹುಟ್ಟಿದ್ದಲ್ಲ. ಆದರೆ ಕರ್ನಾಟಕದ ಏಕೀಕರಣ ಚಳವಳಿಯ ಮೂಲ ಇರುವುದು ಭಾಷೆಯ ಕುರಿತ ಈ ನಿಲುವಿನಲ್ಲಿ. ಒಂದು ಭಾಷೆಯನ್ನಾಡುವ ಜನ ಒಟ್ಟಾಗಿ ಜೀವಿಸಬೇಕು ಎಂಬ ಬಯಕೆಯೇ ನಾಡಿನ ರಚನೆಯ ಬಯಕೆಯಾಗಿ ಚಳವಳಿಯ ರೂಪವನ್ನು ಪಡೆಯಿತು. ಸ್ವಾತಂತ್ರ್ಯ ನಂತರದ ಭಾರತದ ರಾಜ್ಯ ಪುನರ್ ವಿಂಗಡನೆಯಲ್ಲಿ ಇದೇ ಸಂಗತಿಯನ್ನು ಸ್ಪಷ್ಟವಾಗಿ ನೋಡುತ್ತೇವೆ.

ಚಿಂತಕ ಮನು ಚಕ್ರವರ್ತಿಯವರು "ನಾವು ಯಾವುದನ್ನು ರಾಷ್ಟ್ರೀಯತೆ ಎಂದು ಕರೆಯುತ್ತಿದ್ದೇವೆಯೋ ಅದು ಒಂದು ರಚನೆಯೇ ಹೊರತು ಸಹಜ ಮತ್ತು ಸಾವಯವ ಗುಣವಿರುವ ಸ್ಥಿತಿಯಲ್ಲ. ರಾಜರಾಣಿಯರ, ದೊರೆಗಳ ಪ್ರಭುತ್ವ ಅಳಿಸಿ/ನಶಿಸಿ ಹೋದ ಸಂದರ್ಭದಲ್ಲಿ ಮತ್ತೊಂದು ಆಳುವ ವರ್ಗ ಸೃಷ್ಟಿಸಿದ ರಚನೆಯೇ ರಾಷ್ಟ್ರೀಯತೆ. ಅಂದರೆ ಇನ್ನೊಂದು ಕಲ್ಪಿತವಾದ ಪ್ರಭುತ್ವ ರಾಷ್ಟ್ರೀಯತೆ ಎಂದ ತಕ್ಷಣವೇ ಅಲ್ಲಿ ಆಳ್ವಿಕೆಯಿರುತ್ತದೆ. ಆಳಿಸಿಕೊಳ್ಳುವ ವರ್ಗವಿರುತ್ತದೆ. ಮತ್ತು ಒಂದು ರೀತಿಯಲ್ಲಿ ಆ ಜನಗಳ ಪ್ರಜ್ಞೆಯಲ್ಲಿ ರಾಷ್ಟ್ರವನ್ನು ಕಟ್ಟುವ ಆಲೋಚನಾ ಕ್ರಮವೂ ಇರುತ್ತದೆ" [೧೬] ಎನ್ನುತ್ತಾರೆ. ಈ ವಾದವು ರಾಷ್ಟ್ರೀಯತೆ ಎನ್ನುವುದು ಒಂದು ಸಾಮ್ರಾಜ್ಯಶಾಹಿ ಮನೋಭಾವ, ಅದು ಸಾಮ್ರಾಜ್ಯಶಾಹಿಯನ್ನು ಕಟ್ಟುವ ಕಲ್ಪನೆ ಎಂಬ ಮನೋಭಾವದ

ಮೇಲೆ ನಿಂತಿದೆ. ರಾಷ್ಟ್ರೀಯತೆಯನ್ನು ಪ್ರಭುತ್ವದೊಂದಿದೆ, ಸಾಮ್ರಾಜ್ಯಶಾಹಿಯೊಂದಿಗೆ ಸಮೀಕರಿಸುವುದು ಈ ವಾದದ ಮಿತಿಯಾಗುತ್ತದೆ. ಆಳುವ ವರ್ಗ ರಾಷ್ಟ್ರೀಯತೆಯನ್ನು ರಚಿಸಿತು ಎಂಬ ವಾದವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಇದನ್ನು ಸಮರ್ಥಿಸಬಲ್ಲ ಸಂಗತಿಗಳು ಸಿಗುವುದಿಲ್ಲ. ಐತಿಹಾಸಿಕವಾಗಿ ನೋಡಿದರೆ ಭಾರತ ಎನ್ನುವುದು ಹಲವು ಚಕ್ರಾಧಿಪತ್ಯದ ಆಳ್ವಿಕೆಗೆ ಒಳಪಟ್ಟಿತು. ಈ ಹಲವು ಸಾಮ್ರಾಜ್ಯಗಳ ನಡುವೆ ಕೆಲವೊಮ್ಮೆ ಸಹಕಾರ ಸಂಬಂಧ– ಮಿತ್ರತ್ವದ ಭಾವನೆಗಳಿದ್ದರೆ, ಕೆಲವೊಮ್ಮೆ ಶತ್ರುತ್ವದ ಭಾವನೆಗಳೂ ಇರುತಿತ್ತು. ಒಬ್ಬ ರಾಜನು ಆಡಳಿತಾತ್ಮಕವಾಗಿ ತೆಗೆದುಕೊಳ್ಳುವ ತೀರ್ಮಾನಗಳು ಇನ್ನುಳಿದ ಪ್ರದೇಶಗಳ ಮೇಲೆ, ಅಲ್ಲಿನ ಜನರ ಮೇಲೆ ಯಾವುದೇ ರೀತಿಯಲ್ಲೂ ನೇರವಾದ ಪರಿಣಾಮ ಬೀರುತ್ತಿರಲಿಲ್ಲ. ಮೊಗಲ್ ದೊರೆಗಳ ಭಾರತ ಅಕ್ರಮಣದ ನಂತರ ಉಂಟಾದ ಬದಲಾವಣೆಗಳು, ಆ ಬಳಿಕದ ಬ್ರಿಟಿಷ್ ಪ್ರಭುತ್ವದ ವಸಾಹತುವಾಗಿ ಭಾರತ ಒಳಪಟ್ಟ ಆಡಳಿತ ವ್ಯವಸ್ಥೆ, ಪ್ರಭುತ್ವದ ಕುರಿತ ಭಾರತದ ನಂಬಿಕೆಗಳನ್ನು ಬದಲಿಸಿತು. ಒಂದು ಪ್ರಭುತ್ವ ನಶಿಸಿ ಹೋದಾಗ ಮತ್ತೊಂದು ಆಳುವ ವರ್ಗ ಸೃಷ್ಟಿಸಿದ ರಚನೆಯೇ ರಾಷ್ಟ್ರೀಯತೆ ಎಂದು ಭಾವಿಸುವುದಾದರೆ, ಭಾರತದೊಳಗೆ ಕದಂಬರು, ಚೋಳರು, ರಜಪೂತರು, ಮೊಗಲರು, ಬ್ರಿಟಿಷರು ಒಂದೊಂದು ರಾಷ್ಟ್ರೀಯತೆಯನ್ನು ರಚಿಸಿದರು ಎಂದು ಭಾವಿಸಬೇಕಾಗುತ್ತದೆ ಮತ್ತು ಈ ಒಂದು ಪ್ರಭುತ್ವದ ರಾಷ್ಟ್ರೀಯತೆ ಇನ್ನೊಂದು ಪ್ರಭುತ್ವದ ರಾಷ್ಟ್ರೀಯತೆಗಿಂತ ಭಿನ್ನವೂ, ಪ್ರತ್ಯೇಕವೂ ಆದದ್ದು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಾದರೆ ನಮ್ಮ ರಾಷ್ಟ್ರೀಯತೆ ಕದಂಬರದ್ದೆ? ರಜಪೂತರದ್ದೆ? ಮೋಘಲರದ್ದೇ? ಬ್ರಿಟಿಷರದ್ದೇ? ಅಥವಾ ಸ್ವತಂತ್ರ ಭಾರತದ ಮೊದಲ ಸರಕಾರವನ್ನು ಕಟ್ಟಿದ ಕಾಂಗ್ರೇಸ್‌ನದ್ದೆ? ಎಂಬ ಪ್ರಶ್ನೆ ಎದುರಾಗುತ್ತದೆ. ಈ ಹಿನ್ನೆಲೆಯಿಂದ ನೋಡಿದರೆ ರಾಷ್ಟ್ರೀಯತೆಗೂ ಪ್ರಭುತ್ವಕ್ಕೂ ನೇರವಾದ ಸಂಬಂಧ ಇಲ್ಲವೆನಿಸುತ್ತದೆ. ಈ ಕಾರಣದಿಂದಲೇ " ರಾಷ್ಟ್ರೀಯತ್ವದ ಮೂಲ ರಾಜ್ಯವೆಂದು ಎಂದಿಗೂ ಹೇಳಲಾಗದು. ಮತ, ರೀತಿ, ಭಾಷೆ ಮತ್ತು ರಾಜ್ಯದ ಸಂಬಂಧಗಳ ಐಕ್ಯತೆಯನ್ನು ರಾಷ್ಟ್ರೀಯತ್ವದ ಆಧಾರವೆಂದು ಪರಿಗಣಿಸಿ ಮಾನ್ಯ ಮಾಡಲಾಗದು"[೧೭] ಎಂದಿರುವುದು.

ಹರ್ಡೇಕರ್ ಮಂಜಪ್ಪನವರು ವಸಾಹತುಶಾಹಿ ಕಾಲ ಘಟ್ಟದಲ್ಲೇ ರಾಷ್ಟ್ರೀಯತೆಯು ಪ್ರಕಟಗೊಳ್ಳಲು ಕಾರಣವಾದ ಸಂಗತಿಯನ್ನು ಹೀಗೆ ಹೇಳುತ್ತಾರೆ. "ದೇಶಭಕ್ತಿಯಿಲ್ಲದೆ 'ದೇಶ' ಮಾತ್ರ ಇದ್ದ ದೇಶಗಳಲ್ಲಿ 'ರಾಷ್ಟ್ರ'ವು ಉಗಮವಾಗುವ ಒಂದೇ ಮಾರ್ಗ ಬಾಹ್ಯ ಹಸ್ತಕ್ಷೇಪಗಳ ಮೂಲಕ ಮಾತ್ರವಾಗಿತ್ತು. ವಸಾಹತು

ಹಸ್ತಕ್ಷೇಪದ ಹಿಂಸೆಯ ಮೂಲಕ ದೇಶಭಕ್ತಿಯಿಲ್ಲದ ದೇಶ ರಾಷ್ಟ್ರೀಯತೆಯ ಒಂದು ಹೊಸ ಇತಿಹಾಸಕ್ಕೆ ದೂಡಲ್ಪಡುತ್ತದೆ".[೧೮] 'ಅನ್ಯ'ದ ಹಸ್ತಕ್ಷೇಪವು 'ಸ್ವ' ಜಾಗೃತಿ ಪ್ರಕಟೀಕರಣಕ್ಕೆ ಕಾರಣವಾಗುವ ಸಂಗತಿಯನ್ನು ಭಾರತೀಯ ಹಿನ್ನೆಲೆಯಿಂದಲೇ ಮಂಜಪ್ಪನವರು ಕಂಡು ಕೊಂಡಿದ್ದರು. ದೇಶಭಕ್ತಿ ಪ್ರಕಟಗೊಳ್ಳುವುದನ್ನು ರಾಷ್ಟ್ರೀಯತೆಯ ಅರಿವಿನ ಫಲ ಎಂದು ಭಾವಿಸುತ್ತಾರೆ.

ಅನೇಕ ಸಂಸ್ಥಾನಗಳಾಗಿ ಆಳಲ್ಪಡುವ ಮತ್ತು ಹಲವು ಭಾಷೆಗಳ ಬಳಕೆ ಇರುವ ಭಾರತದಲ್ಲಿ ಬ್ರಿಟಿಷರು ಒಂದು ಚಕ್ರಾದಿಪತ್ಯ ಹಾಗೂ ಒಂದು ಇಂಗ್ಲಿಷ್ ಭಾಷೆಯ ಮೂಲಕ ಭಾರತೀಯರಲ್ಲಿ ತಾವು 'ಏಕರಾಷ್ಟ್ರ'ವೆಂಬ ಕಲ್ಪನೆ ಉಂಟಾಗಲು ಕಾರಣರಾದರು ಎಂಬ ಅಭಿಪ್ರಾಯವನ್ನು ಹಲವು ವಿದ್ವಾಂಸರು ಪ್ರಕಟಿಸಿದ್ದಾರೆ. ಅಂದರೆ ಈ ಹಿಂದೆ ಏಕರಾಷ್ಟ್ರವೆಂಬ ಕಲ್ಪನೆ ಇಲ್ಲಿ ಇರಲಿಲ್ಲ ಎಂಬ ಅರ್ಥದಲ್ಲಿ ಈ ಮಾತುಗಳು ಪ್ರಚಲಿತದಲ್ಲಿದೆ. ಹಲವು ಭಾಷೆ, ಪಂಗಡ, ಆಳ್ವಿಕೆಗಳ ತವರಾದರೂ ಇವುಗಳು ಪರಸ್ಪರ ಸಂಬಂಧವಿಲ್ಲದಂತೆ ಪ್ರತ್ಯೇಕ ಪ್ರತ್ಯೇಕವಾಗಿ ಇರಲಿಲ್ಲ. ವಸಾಹತು ಸಂದರ್ಭದಲ್ಲಿ ಉಂಟಾದ 'ರಾಷ್ಟ್ರ' ಭಾವದ ಜಾಗೃತಿಗೆ ಕಾರಣಗಳು ಅನೇಕ ಇದೆ. ಹಾಗೆಂದು ಅದು ಬ್ರಿಟಿಷರ ಕೊಡುಗೆ ಎಂದು ಭಾವಿಸಲಾಗದು. ಬ್ರಿಟಿಷರು ಬಂದ ಬಳಿಕವೇ ನಾವು ಒಂದು ಎಂಬ ಭಾವನೆ ಬಂದಿತು ಎಂಬ ಮಾತು ಪ್ರಶ್ನಾರ್ಹ. ಯಾಕೆಂದರೆ ನಾವು ಒಂದು ರಾಷ್ಟ್ರವಾಗಿದ್ದುದರಿಂದಲೇ ಇಂಗ್ಲಿಷರಿಗೆ ಇಲ್ಲಿ ಒಂದು ರಾಜ್ಯವನ್ನು ಕಟ್ಟಲು ಸಾಧ್ಯವಾದುದು. ಬ್ರಿಟಿಷರು ಇಲ್ಲಿ ಯಾಕೆ ಹಲವು ರಾಜ್ಯಗಳನ್ನು ಅಥವಾ ಹಲವು ವಸಾಹತುಗಳನ್ನು ಸ್ಥಾಪಿಸಲಿಲ್ಲ? ಈ ಪ್ರಶ್ನೆಗೆ ಮುಖಾಮುಖಿಯಾದರೆ, ಇಲ್ಲಿ ಆಳ್ವಿಕೆ, ಭಾಷೆ ಅಸಂಖ್ಯಾತವಿದ್ದರೂ ಒಂದು ರಾಷ್ಟ್ರವೆಂಬ ಭಾವನೆ ಮೂಲದಲ್ಲೇ ಇದ್ದಿತ್ತು ಎಂಬುದರ ಸೂಚನೆಯಿದು. ಭಾರತೀಯರ ಭಾವ ಮೂಲದ ರಾಷ್ಟ್ರ ಕಲ್ಪನೆಯನ್ನು ವಸಾಹತುಶಾಹಿ ಆಡಳಿತವು ತಾನು ಜೋಡಿಸಿದ ಸಂಪರ್ಕ ಸಾಧನಗಳಿಂದಾಗಿ 'ಭಾರತ ರಾಷ್ಟ್ರೀಯತೆ'ಯ ಸಾಂದ್ರ ಅನುಭವಕ್ಕೆ ಕಾರಣವಾಯಿತು.

ರಾಷ್ಟ್ರೀಯವಾದ ಎಂಬುದು ಇತಿಹಾಸದ ಒಂದು ಹಂತದಲ್ಲಿ ಮೂಡಿ ಸಾಮಾಜಿಕ ಮತ್ತು ಬೌದ್ಧಿಕ ಸಂಗತಿಗಳ ಬೆಳವಣಿಗೆಗಳ ಉತ್ಪನ್ನವಾಗಿದೆ. ವ್ಯಕ್ತಿಯಲ್ಲಿ ಈ ಪರಿಕಲ್ಪನೆಯು ಬೆಳೆಯಬೇಕಾದರೆ ಅದರ ಹಿನ್ನೆಲೆಯಲ್ಲಿ ಒಂದು ನಿರ್ದಿಷ್ಟ ಭೂ ಪ್ರದೇಶದ ಕಲ್ಪನೆಯಿದ್ದು, ಅಲ್ಲಿ ಕೇಂದ್ರೀಕೃತ ರೂಪದ ಒಂದು ಆಡಳಿತದ ಕಲ್ಪನೆ

ಮೂಡಬೇಕು. ಈ ಕಲ್ಪನೆ ವಾಸ್ತವದಲ್ಲಿ ಇರದಿದ್ದರೂ ಆದರ್ಶದ ಸ್ಥಿತಿಯಲ್ಲಿಯೂ ಇರಬಹುದು ಎಂಬ ಭಾವನೆ ರಾಷ್ಟ್ರೀಯವಾದದ ಹಿಂದೆ ಇದೆ.

ರಾಷ್ಟ್ರೀಯತೆ ಎನ್ನುವುದು ಒಂದು ಐಡೆಂಟಿಟಿ. ಈ ಗುರುತು ಅಮೂರ್ತವಾದುದು. ಆದರೆ ಭಾಷೆಯ ಮೂಲಕ ಅದನ್ನು ಅನುಭವಕ್ಕೆ ತಂದುಕೊಳ್ಳಲು, ಪೂರಕವಾದ ವಸ್ತು-ಸಂಗತಿಗಳನ್ನು ಸಂಘಟಿಸಿಕೊಂಡು ಅದನ್ನು ಮೂರ್ತಗೊಳಿಸಿಕೊಳ್ಳಲಾಗುತ್ತದೆ. ರಾಷ್ಟ್ರಕ್ಕೆ ಒಂದು ಭಾವನಾತ್ಮಕ ತಳಹದಿ ಗಟ್ಟಿಯಾಗಿದ್ದು ಸಾಂಸ್ಕೃತಿಕ ಪರಿಭಾಷೆಯಲ್ಲಿ ಮಂಡಿಸಲ್ಪಟ್ಟಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಭಾರತೀಯ ರಾಷ್ಟ್ರೀಯವಾದಿ ಪ್ರಜ್ಞೆ ಬೆಳೆದು ಪ್ರತಿಕ್ರಿಯಾತ್ಮಕವಾಗಿ ಅಭಿವ್ಯಕ್ತಗೊಳ್ಳಲು ಮುಖ್ಯ ಕಾರಣ ವಸಾಹತುಶಾಹಿಯ ಕಾರಣದಿಂದ ಪಶ್ಚಿಮದ ಜೊತೆಗೆ ಸಾಧ್ಯವಾದ ಸಂಬಂಧದಿಂದ. ರಾಷ್ಟ್ರೀಯತೆಯ ಪರಿಕಲ್ಪನೆಯ ಅಂತರ್ಗತ ಅಂಶಗಳಲ್ಲಿ ಸಂಸ್ಕೃತಿಯ ಅಂತರ್ ಶೋಧವೂ ಒಂದಾಗಿದೆ. ಹೀಗಾಗಿ ರಾಷ್ಟ್ರವೊಂದು ತನ್ನನ್ನು ತಾನು ಬಲಗೊಳಿಸಿಕೊಳ್ಳುವುದು ತನ್ನಲ್ಲಿ ತಾನೇ ಶೋಧಿಸಿ ಕಟ್ಟಿಕೊಂಡ ಸಂಸ್ಕೃತಿಯ ಹಿರಿಮೆಯ ಚರಿತ್ರೆಯಿಂದ. ತನ್ನನ್ನು ತಾನು ಪ್ರಾಚೀನವೂ, ಉದಾತ್ತವೂ ಆದ ನೆಲೆಯಲ್ಲಿ ಭಾವಿಸಿಕೊಂಡು ಬಿಂಬಿಸಿಕೊಳ್ಳುತ್ತದೆ. ಹೀಗೆ ಬಿಂಬಿಸಿಕೊಳ್ಳುವ ಬಿಂಬವೇ ರಾಷ್ಟ್ರೀಯ ಗುರುತಾಗಿ, ಆ ರಾಷ್ಟ್ರದ ರಾಷ್ಟ್ರೀಯನ ಗುರುತಾಗಿ ಕಾಣಿಸಿಕೊಳ್ಳುತ್ತದೆ. ಅದರ ಜೊತೆಗೆ ರಾಷ್ಟ್ರೀಯತೆ ಒಂದು ಮೌಲ್ಯವಾಗಿ ಪ್ರತಿಪಾದಿಸಲ್ಪಡುತ್ತದೆ. ಇಂತಹ ಮೌಲ್ಯಕ್ಕೆ ಯಾವುದೇ ಮೂಲದಿಂದಾದರೂ ಅಪಾಯ ಎದುರಾದಾಗ ಅದನ್ನು 'ರಾಷ್ಟ್ರ'ಕ್ಕೆ ಎದುರಾದ ಆತಂಕ ಎಂದು ಭಾವಿಸಿ ಮೌಲ್ಯದ ಪುನರ್ ಸ್ಥಾಪನೆಗೆ ತನ್ನ 'ರಾಷ್ಟ್ರೀಯ'ನನ್ನು ಪ್ರಚೋದಿಸುತ್ತದೆ. ಈ ಸ್ಥಿತಿಯಿಂದ ತನ್ನ ರಾಷ್ಟ್ರವನ್ನು ಪಾರುಮಾಡುವುದೇ ರಾಷ್ಟ್ರೀಯನ ಜೀವನದ ಪ್ರಧಾನ ಉದ್ದೇಶವಾಗಿ ಬಿಂಬಿಸಲಾಗುತ್ತದೆ. ಈ ಕಾರ್ಯಕ್ಕೆ ತನ್ನನ್ನು ತಾನು ತೊಡಗಿಸಿಕೊಂಡವನು 'ವೀರ'ನಾಗಿಯೂ, 'ರಾಷ್ಟ್ರಭಕ್ತ'ನಾಗಿಯೂ, ತಾಯಿಗಾಗಿ ಬಲಿಯಾಗಲು ಹೊರಟ 'ವೀರಸಂತಾನ'ವಾಗಿಯೂ ಕಾಣಿಸಲ್ಪಟ್ಟರೆ, ಇದನ್ನು ಬಿಟ್ಟು ತನ್ನ ಲೌಕಿಕ ಬದುಕಿನಲ್ಲಿ ಮುಳುಗಿದವರು 'ಹೇಡಿ'ಯಾಗಿ, 'ಷಂಡ'ರಾಗಿ, 'ದ್ರೋಹಿ'ಗಳಾಗಿಯೂ ಚಿತ್ರಿಸಲ್ಪಡುತ್ತಾರೆ. ಈ ಅಧ್ಯಯನಕ್ಕೆ ಆಯ್ಕೆ ಮಾಡಿದ ಕವಿಗಳ ರಾಷ್ಟ್ರೀಯತೆಯ ಕುರಿತ ಕವನಗಳಲ್ಲಿ ಎದ್ದು ತೋರುವ ಸಂಗತಿಯು ಕೂಡ ಇದೇ ಆಗಿದೆ.

ಭಾರತೀಯ ರಾಷ್ಟ್ರೀಯತೆಯು ತನ್ನೊಳಗಿನ 'ಸ್ವ' ಅನನ್ಯತೆಯ ಸಂರಚನೆಗಳನ್ನು ನಿರಾಕರಿಸದೆ, ವಿಶ್ವಾತ್ಮಕತೆಯನ್ನೇ ಪ್ರತಿಪಾದಿಸುತ್ತಿದೆ. ಕನ್ನಡದ ಕವಿಗಳು ಕಟ್ಟಿದ ರಾಷ್ಟ್ರೀಯತೆಯ ಪರಿಕಲ್ಪನೆ ಪಶ್ಚಿಮದ ಮಾದರಿಯಂತೆ ಆಕ್ರಮಣಕಾರಿ ಸ್ವರೂಪದ್ದಾಗಿರದೆ, ಬಹುರೂಪಿ ನೆಲೆಯ ಸಂಸ್ಕೃತಿ, ಭಾಷೆಯನ್ನು ಒಳಗೊಳ್ಳುವ ಮಾದರಿಯದ್ದಾಗಿದೆ. ಆಕ್ರಮಣಕಾರಿತ್ವವಿರುವುದು ನೆಲಕ್ಕೆ ಬಂದಿರುವ ವಿದೇಶಿ ಗುಲಾಮಿತನದಿಂದ ನೆಲವನ್ನು ಬಿಡುಗಡೆಗೊಳಿಸುವ ಉದ್ದೇಶಕ್ಕಾಗಿಯೇ ಹೊರತು ನೆಲದೊಳಗಿನ ಸಮುದಾಯಗಳನ್ನು ಪ್ರತ್ಯೇಕಿಸುವ, 'ಅನ್ಯ'ರನ್ನಾಗಿಸುವ ಪ್ರವೃತ್ತಿಯದ್ದಲ್ಲ. 'ಬಹುತ್ವ'ವನ್ನು ಒಳಗೊಂಡೇ 'ರಾಷ್ಟ್ರ' ಮೈದಾಳುತ್ತದೆ. ಪಶ್ಚಿಮದ ರಾಷ್ಟ್ರೀಯತೆಯ ಪರಿಕಲ್ಪನೆ 'ಬಹುತ್ವ'ವನ್ನು ವಿರೋಧಿಸುವ ಮಾದರಿಯದ್ದು. ಹೀಗಾಗಿ ಅಲ್ಲಿ ಬಹುತ್ವವೇ ರಾಷ್ಟ್ರಕ್ಕೆ ಶತ್ರುವಾಗಿ ಕಾಣಿಸುತ್ತದೆ.

ಬಿಡುಗಡೆಯ ಬಯಕೆ ಭಾರತೀಯ ರಾಷ್ಟ್ರಿಯತೆಯ ಮುಖ್ಯ ಲಕ್ಷಣ ಹಾಗೂ ಗುರುತಾಗಿದೆ. ಈ ಬಿಡುಗಡೆಯ ಆಶಯವೇ ಭಾರತೀಯ ರಾಷ್ಟ್ರೀಯತೆಯ ಮುಖ್ಯ ಸಂವೇದನೆಯೂ ಆಗಿದೆ. ಭಾರತೀಯ ರಾಷ್ಟ್ರೀಯತೆಯ ಅನುಭವದ ಹಿಂದೆ ವಸಾಹತುಶಾಹಿಯ ಆಳ್ವಿಕೆಗೆ ಸಿಲುಕಿದ ಅನುಭವವಿದೆ. ಈ ಅನುಭವವೇ ಇಲ್ಲಿನ ರಾಷ್ಟ್ರೀಯತೆಯ ಸ್ವರೂಪವನ್ನು ನಿರ್ಧರಿಸಿ ಬಿಟ್ಟಿರುವುದರಿಂದ ಸಹಜವಾಗಿಯೇ ಇಲ್ಲಿನ ರಾಷ್ಟ್ರೀಯತೆಯು 'ಬಿಡುಗಡೆಯ ಹಂಬಲ', 'ಸ್ವಾತಂತ್ರ್ಯದ ಕನಸಿನೊಂದಿಗೆ' ಸಮೀಕರಿಸಲ್ಪಟ್ಟಿದೆ. ಈ ಹಿನ್ನೆಲೆಯಿಂದ ಪಾರತಂತ್ರ್ಯ ರಾಷ್ಟ್ರೀಯತೆಗೆ ಸವಾಲಾಗುತ್ತದೆ. ಈ ತೊಡಕನ್ನು ನಿವಾರಿಸಿಕೊಳ್ಳುವುದರಲ್ಲಿಯೆ ರಾಷ್ಟ್ರದ ಅಸ್ತಿತ್ವದ ಪ್ರಶ್ನೆಯಿತ್ತು. ಈ ಕಾರಣದಿಂದಲೇ ರಾಷ್ಟ್ರ ಪರಿಕಲ್ಪನೆ ಸೃಜನಶೀಲ ಸಾಹಿತ್ಯದಲ್ಲಿ ಪ್ರಕಟವಾಗುವಾಗ ಅದು ಸಂಗ್ರಾಮದ ಭಾಷೆಯಲ್ಲಿ ನಿರೂಪಿಸಲ್ಪಟ್ಟಿದೆ. ಅಲ್ಲಿ ಒಂದು ಬಗೆಯ ಆವೇಶ, ಹೋರಾಟದ ಸ್ಥಿತಿ, ವರ್ತಮಾನದ ದುಃಸ್ಥಿತಿಯ ವಿರುದ್ಧದ ವಿಷಾದ, ಗತದ ವೈಭವದ ವರ್ಣನೆ ಹೇರಳವಾಗಿ ಕಾಣುತ್ತದೆ. ಅಭಿವ್ಯಕ್ತಿಯ ಭಾಷೆಯಲ್ಲಿ ಯುದ್ಧೋತ್ಸಾಹವೇ ಇದೆ. ರಾಷ್ಟ್ರೀಯತೆಯ ಕುರಿತಾದ ನಮ್ಮೆಲ್ಲ ಬರವಣಿಗೆ, ಚಿಂತನೆಗಳೂ ಪರಕೀಯ ಆಳ್ವಿಕೆಯ ಅನುಭವದ ಹಿನ್ನೆಲೆಯಿಂದಲೇ ಬಂದಿರುವುದು ಸ್ಪಷ್ಟವಾಗಿದೆ. ದಾಸ್ಯದ ಸಂದರ್ಭದ ಮನೋಭಾವವೇ ಭಾರತೀಯ ರಾಷ್ಟ್ರೀಯತೆಯ ತಾತ್ವಿಕತೆಯನ್ನು ರೂಪಿಸಿದೆ. ಒಂದು ವೇಳೆ ಈ ಅನುಭವವೇ ಭಿನ್ನವಾಗಿದ್ದಿದ್ದರೆ ನಮ್ಮ ರಾಷ್ಟ್ರೀಯತೆಯ ಕಲ್ಪನೆಯ ಸ್ವರೂಪವೂ ಭಿನ್ನವಾಗಿರುತ್ತಿತ್ತು.

ಕನ್ನಡದ ಸಾಂಸ್ಕೃತಿಕ ಚಿಂತಕರು ತಾವು ಕಟ್ಟುತ್ತಿರುವ ರಾಷ್ಟ್ರಕ್ಕೆ ತಮ್ಮ ಹತ್ತಿರದ ಗತಕಾಲದ ಮಾದರಿಗಳನ್ನೇ ಶೋಧಿಸಿಕೊಳ್ಳುತ್ತಾರೆ. ಇದಕ್ಕಾಗಿ ಚರಿತ್ರೆಯಲ್ಲಿ ಮಿಂಚಿ ಮರೆಯಾಗಿದ್ದ ವಿಜಯನಗರ ಸಾಮ್ರಾಜ್ಯ, ಹಿಂದೊಮ್ಮೆ ವೈಭವವನ್ನು ಕಂಡು ಪ್ರಸ್ತುತ ಹಾಳು ಹಂಪೆಯಾಗಿರುವ ಹಂಪಿಯ ನೆನಪುಗಳಿಂದ ರಾಷ್ಟ್ರವನ್ನು ಪುನರ್ ರೂಪಿಸಿಕೊಳ್ಳುತ್ತಾರೆ. ರಾಷ್ಟ್ರವನ್ನು ಕಲ್ಪಿಸಿಕೊಳ್ಳುವ ಹಾಗೂ ಅದನ್ನು ಸ್ವತಂತ್ರಗೊಳಿಸುವ ಹೋರಾಟ ಜೊತೆಜೊತೆಯಾಗಿಯೇ ನಡೆಯುತ್ತಿತ್ತು. ಕನ್ನಡದ ಕವಿಗಳು ಮಂಡಿಸಿದ ರಾಷ್ಟ್ರೀಯತೆಯ ಸ್ವರೂಪದ ಹಿನ್ನೆಲೆಯಲ್ಲಿ ರಾಜಕೀಯ ಪ್ರಭುತ್ವ ರಾಷ್ಟ್ರದ ಹೊರಮೈಯಾಗಿ ಕಂಡರೆ, ಸಾಂಸ್ಕೃತಿಕ ಗುರುತುಗಳನ್ನು ಅದರ ಒಳಮೈಯಾಗಿ ಗುರುತಿಸುತ್ತಾರೆ. ರಾಷ್ಟ್ರವು ರಾಜಕೀಯವಾಗಿಯೂ ಸಾಂಸ್ಕೃತಿಕವಾಗಿಯೂ ಪರಸ್ಪರ ಆಂತರಿಕ ಸಂಬಂಧವನ್ನು ಹೊಂದಿದೆ ಎಂದು ಭಾವಿಸುತ್ತಾರೆ.

ಪರಕೀಯ ದಾಸ್ಯದಿಂದ ಪಾರಾಗಲು ವರ್ತಮಾನದಲ್ಲಿನ ರಾಷ್ಟ್ರ ನಿರೂಪಣೆಯು 'ಕ್ಷಾತ್ರ ತೇಜಸ್ಸನ್ನು', 'ವೀರತ್ವ'ವನ್ನು ತನ್ನ ಮಾದರಿಯನ್ನಾಗಿ ಮಾಡಿಕೊಳ್ಳುತ್ತದೆ. ಕನ್ನಡ ಕಾವ್ಯದಲ್ಲಿ ನಿರೂಪಣೆಗೊಳ್ಳುವ 'ರಾಷ್ಟ್ರ'ಮಾತೆಯ ಸ್ವರೂಪದಲ್ಲಿ ಅದರಲ್ಲೂ ತಾಯಿಯ ಸೌಮ್ಯತೆಯ ಚಿತ್ರಣಕ್ಕಿಂತಲೂ 'ಕ್ಷಾತ್ರ'ದ ಪ್ರತಿರೂಪವಾಗಿ ಚಂಡಿ, ಕ್ರಾಂತಿಕಾಳಿ, ಚಾಮುಂಡಿಯಾಗಿ ಕಾಣಿಸಿಕೊಳ್ಳುತ್ತದೆ. 'ರಾಷ್ಟ್ರ' ಶಕ್ತಿಮಾತೆಯಾಗಿಯೇ ಮೈ ಪಡೆಯುತ್ತದೆ. ಈ ನಿರೂಪಣೆಯ ಕ್ಷಾತ್ರ ತೇಜಸ್ಸಿಗೆ, ವೀರತ್ವಕ್ಕೆ ಬೇಕಾದ ನಿದರ್ಶನಗಳನ್ನು, ಪ್ರತೀಕಗಳನ್ನು ಈ ಹಿಂದಿನ ಪುರಾಣಗಳಿಂದ, ಚರಿತ್ರೆಯೊಳಗಿಂದ ಹೆಕ್ಕಿ ತೆಗೆದು ರಾಷ್ಟ್ರದ ತಾತ್ವಿಕತೆಗೆ ಸಂವಾದಿಯನ್ನಾಗಿಸಲಾಗುತ್ತದೆ.

"ಭಾರತದಲ್ಲಂತೂ ರಾಷ್ಟ್ರೀಯತೆಯ ಉಗಮದ ಹಿಂದಿನ ಪ್ರಧಾನ ಪ್ರೇರಣೆ ಪಾಶ್ಚಾತ್ಯ ಸಂಸ್ಕೃತಿಯ, ರಾಷ್ಟ್ರೀಯ ಪ್ರಭುತ್ವದ ಸಂಪರ್ಕ. ಹೀಗಾಗಿ ಶತ್ರುವಿನ ಜೊತೆಗೆ ಹೋರಾಡುವಾಗ ಕೂಡ ಅವರಿಂದಲೇ ಕಲಿತು ಅಂತರಂಗೀಕರಿಸಿಕೊಂಡ ಪರಿಕಲ್ಪನೆಗಳ, ಗ್ರಹಿಕೆಗಳ ಬಳಕೆಯಾಗುತ್ತದೆ. ರಾಷ್ಟ್ರೀಯತೆಯ ಕಲ್ಪನೆಯಲ್ಲಿ ೨ ಮಾದರಿಗಳಿವೆ. ಒಂದು ಗಾಂಧಿ ಮಾದರಿ. ಎರಡನೆಯದು, ತಿಲಕ/ ವಿವೇಕಾನಂದ ಮೊದಲಾದ ಹಿಂದೂ ರಾಷ್ಟ್ರೀಯವಾದಿ ಮಾದರಿ"[೧೯] ಎಂದು ಡಾ. ಡಿ.ಆರ್. ನಾಗರಾಜ್ ರಾಷ್ಟ್ರ ಪರಿಕಲ್ಪನೆಯನ್ನು ವಿವರಿಸುತ್ತಾರೆ. ಈ ಎರಡು ಮಾದರಿಯ ರಾಷ್ಟ್ರ ಪರಿಕಲ್ಪನೆಗಳು ಪರಸ್ಪರ ವಿರುದ್ಧ ಸ್ವಭಾವದ್ದು. ಗಾಂಧಿ ಮಾದರಿ ಕ್ಲೀಬತ್ವವನ್ನು ಒಪ್ಪಿಕೊಂಡದ್ದಾಗಿತ್ತು.

ಹೆಣ್ಣಿಗ ಮಾದರಿಯಾಗಿತ್ತು ಮತ್ತು ಅಹಿಂಸೆ ಆಧಾರಿತವಾದುದಾಗಿತ್ತು. ಈ ಮಾದರಿಯೇ ಭಾರತೀಯರ ನಿಜವಾದ ರಾಷ್ಟ್ರ ಮಾದರಿ ಎನ್ನುತ್ತಾರೆ ಡಿ.ಆರ್. ನಾಗರಾಜ್. ಎರಡನೆಯ ಮಾದರಿಯಾದ ತಿಲಕ/ ವಿವೇಕಾನಂದ ಪ್ರೇರಿತ ಹಿಂದೂ ರಾಷ್ಟ್ರವಾದಿ ಮಾದರಿ. ಈ ಮಾದರಿ 'ವೀರ್ಯವತ್ತಾದ' ಶೌರ್ಯಾಧಾರಿತವಾದ ರಾಷ್ಟ್ರ ಪರಿಭಾಷೆಯನ್ನು ಒಪ್ಪಿಕೊಂಡದ್ದು. ಇದು ಪಶ್ಚಿಮ ಪ್ರೇರಿತ ಮಾದರಿ ಎನ್ನುತ್ತಾರೆ. ಈ ಚರ್ಚೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಆಳದಲ್ಲಿ ರಾಷ್ಟ್ರೀಯತೆಯನ್ನು ಒಂದು 'ನಕಾರಾತ್ಮಕ ಶಕ್ತಿ' (negative force) ಎಂದೇ ಇಲ್ಲಿ ಭಾವಿಸಲಾಗಿದೆ. ಗಮನಾರ್ಹವಾದ ಅಂಶವೆಂದರೆ ಕನ್ನಡದಲ್ಲಿ ರಾಷ್ಟ್ರೀಯತೆಯ ಕುರಿತ ಎಲ್ಲಾ ಚರ್ಚೆಗಳು ಆರಂಭವಾಗುವುದೇ ಇದೇ ಬಗೆಯ 'ನಕಾರಾತ್ಮಕ ಶಕ್ತಿ' ಎಂಬ ಗ್ರಹಿಕೆಯೊಂದಿಗೆ. ಇಲ್ಲಿ ರಾಷ್ಟ್ರೀಯತೆಯನ್ನು ಅಪಾಯಕಾರಿ ಸಂಗತಿ ಎಂದೇ ಭಾವಿಸಲಾಗುತದೆ. ಅಂತರರಾಷ್ಟ್ರೀಯತೆಯನ್ನೇ ಮೌಲ್ಯವಾಗಿ ಭಾವಿಸಿದ ಈ ಚರ್ಚೆಗಳಿಗೆ ರಾಷ್ಟ್ರೀಯತೆ ಒಂದು ಮಿತಿಯಾಗುತ್ತದೆ. ಕನ್ನಡ ಕಾವ್ಯಕ್ಕೆ ರಾಷ್ಟ್ರೀಯತೆ ಮಿತಿ ಎಂಬ ಭಾವನೆ ಇಲ್ಲ. ವಿಶ್ವಮಾನವ ಸಂದೇಶವನ್ನು ಸಾರಿದ ಕುವೆಂಪು ಅವರಿಗೆ ತನ್ನನ್ನು "ರಾಜ್ಯ ದೃಷ್ಟಿಯಿಂದ ಕರ್ನಾಟಕದವನು, ಭಾಷಾ ದೃಷ್ಟಿಯಿಂದ ಕನ್ನಡಿಗನು, ಆದರೆ ಸಂಸ್ಕೃತಿಯ ದೃಷ್ಟಿಯಿಂದ ಮತ್ತು ರಾಷ್ಟ್ರ ದೃಷ್ಟಿಯಿಂದ ಭಾರತೀಯನು" ಎಂದು ಹೇಳಿಕೊಳ್ಳುವಾಗ ರಾಷ್ಟ್ರೀಯತೆ ಒಂದು ಮಿತಿ ಎಂಬ ಭಾವನೆ ಕಾಣುವುದಿಲ್ಲ. ಡಿ.ಆರ್.ನಾಗರಾಜ್ ಅವರ ವಾದದ ಮುಂದುವರಿಕೆಯ ಭಾಗದಂತಿರುವ ಡಾ.ರಾಜೇಂದ್ರ ಚೆನ್ನಿಯವರ ಮಾತು ಕೂಡ ಇಲ್ಲಿ ಗಮನಾರ್ಹ. "ರಾಷ್ಟ್ರೀಯತೆಯನ್ನು ನೇರವಾಗಿ ವಸ್ತುವನ್ನಾಗಿಸಿಕೊಂಡ ಗಟ್ಟಿಯಾದ ಕೃತಿಗಳು ಕನ್ನಡದಲ್ಲಿಲ್ಲ. ಸಾಹಿತ್ಯದ ಚರಿತ್ರೆಕಾರರು ಅನಿವಾರ್ಯವಾಗಿ ಗಮನಿಸಬೇಕಾದ ಸಾಮಾನ್ಯ ದರ್ಜೆಯ ಕೃತಿಗಳಲ್ಲಿ ರಾಷ್ಟ್ರೀಯತೆಯ ಆದರ್ಶ ವಸ್ತುವಾಗಿದೆ. ಅಂಥ ಕಲೆಗಳಿಗೆ ಬದುಕಿನ ಸ್ಪರ್ಶವಿಲ್ಲ. ಕಲೆಯ ವಿನ್ಯಾಸದ ಮೂಲಕ ನಮ್ಮ ತಿಳುವಳಿಕೆಯನ್ನು ಪ್ರಭಾವಿಸಬಲ್ಲ ಸತ್ವವಿಲ್ಲ" [೨೦] ಎನ್ನುತ್ತಾರೆ. ಕಥಾಸಾಹಿತ್ಯದ ವಿಮರ್ಶೆಯ ಸಂದರ್ಭದಲ್ಲಿ ಈ ಮಾತು ಹೇಳಲಾಗಿದೆಯಾದರೂ ಕವಿತೆಗಳನ್ನು ಪರಿಗಣಿಸಿದರೆ ಈ ವಾದವನ್ನು ಒಪ್ಪಲಾಗದು. ಕುವೆಂಪು ಅವರ 'ಪಾಂಚಜನ್ಯ', ದ.ರಾ.ಬೇಂದ್ರೆಯವರ 'ಗರಿ' ಸಂಕಲನಗಳು ರಾಷ್ಟ್ರೀಯತೆಯ ವಸ್ತುವನ್ನೆ ಹೊಂದಿರುವ ಮತ್ತು ಕಾವ್ಯದ ಸಂದರ್ಭದಲ್ಲಿ ಗಟ್ಟಿಯಾದ ಕೃತಿಗಳೇ ಆಗಿದೆ. ಈ ವಿದ್ವಾಂಸರಿಗಿಂತ ಭಿನ್ನವಾದ ವಾದಕ್ರಮವೊಂದಿದೆ. ವಿಮರ್ಶಕ ಡಾ. ಅಜಕ್ಕಳ ಗಿರೀಶ್ ಭಟ್ ಹೇಳುವಂತೆ " ಭಾರತದ ರಾಷ್ಟ್ರ ಕಲ್ಪನೆ

ಪಶ್ಚಿಮದ ರಾಷ್ಟ್ರ ಕಲ್ಪನೆಗಿಂತ ಭಿನ್ನವಾದುದು. ಈಗಲಾದರೂ ನಾವು ಕಲ್ಪಿಸಿಕೊಳ್ಳಬೇಕಾದುದು ಪಶ್ಚಿಮಕ್ಕಿಂತ ಭಿನ್ನವಾದ ಒಂದು 'ರಾಷ್ಟ್ರ'ವನ್ನೇ ಆಗಿದೆ. ಪಶ್ಚಿಮದ ಮಾದರಿಗಿಂತ ಭಿನ್ನವಾದ ಬಹುಸಂಸ್ಕೃತಿಗಳುಳ್ಳ ಹಾಗೂ ಬಹುಸ್ತರಗಳುಳ್ಳ ಒಂದು ಭಾರತಕ್ಕೆ ವಿಶಿಷ್ಟವಾದ 'ರಾಷ್ಟ್ರ'ವನ್ನು ಕಲ್ಪಿಸಿಕೊಳ್ಳಲಾಗದಿರುವುದೇ 'ರಾಷ್ಟ್ರಿಯವಾದ' ವನ್ನು ವಿರೋಧಿಸುವವರ ದೊಡ್ಡ ಮಿತಿಯಾಗಿದೆ."[೨೧] ಈ ವಾದ ಈ ಮೇಲಿನ ಎರಡು ವಾದಗಳ ಮಿತಿಯನ್ನು ಗುರುತಿಸುತ್ತದೆ. ಪಶ್ಚಿಮಕ್ಕಿಂತ ಭಿನ್ನವಾದ ಭಾರತಕ್ಕೆ ವಿಶಿಷ್ಟವಾದ ರಾಷ್ಟ್ರವಾದವೊಂದಿರಬಹುದಾದ ಕುರಿತು ನಮ್ಮ ಗಮನವನ್ನು ಸೆಳೆಯುತ್ತಿದೆ. ರಾಷ್ಟ್ರಪ್ರಭುತ್ವಕ್ಕಿಂತ ಭಿನ್ನವಾದ ರಾಷ್ಟ್ರ ಪರಿಕಲ್ಪನೆಯನ್ನು ಇಲ್ಲಿ ಮಂಡಿಸುತ್ತಿದ್ದಾರೆ. ಜನಾಂಗ ಅಥವಾ ಭಾಷೆಯನ್ನು ಆಧರಿಸಿರದ ರಾಷ್ಟ್ರ ಪರಿಕಲ್ಪನೆ ಭಾರತದ್ದು.

"ರಾಷ್ಟ್ರೀಯತೆ ಎಂದರೆ ಮೂಲಭೂತವಾಗಿ 'ಮಣ್ಣಿನ ಪವಿತ್ರೀಕರಣ'ದ ಒಂದು ಪ್ರಕ್ರಿಯೆಯೆಂದು ಹೇಳಬಹುದು. ಅಂದರೆ ಒಂದು ಸಾಂಸ್ಕೃತಿಕ ಪ್ರದೇಶ ಅಥವಾ ಭೌಗೋಳಿಕ ಪ್ರದೇಶ ತನ್ನನ್ನು ತಾನು ಸಂಘಟಿಸಿಕೊಳ್ಳುವ ಪ್ರಯತ್ನದಲ್ಲಿ ತಾನು ವಾಸಿಸುವ ನೆಲವನ್ನು 'ಪವಿತ್ರ'ವೆಂದು ಪರಿಕಲ್ಪಿಸಿಕೊಳ್ಳಲು ಪ್ರಾರಂಭಿಸುತ್ತಾರೆ. ಅದನ್ನು 'ರಾಷ್ಟ್ರ'ವೆಂದು ಅಮೂರ್ತೀಕರಿಸಿ ಹಾಗೆಯೇ ಮೂರ್ತೀಕರಿಸಿ ಆರಾಧಿಸತೊಡಗುತ್ತದೆ."[೨೨] ಎನ್ನುತ್ತಾರೆ ಡಿ.ಆರ್.ನಾಗರಾಜ್.



ರಾಷ್ಟ್ರೀಯತೆ ಅನ್ಯದೇಶಿಯ ಆಳ್ವಿಕೆಯ ವಿರುದ್ಧ ಜನರನ್ನು ಒಂದು ಗೂಡಿಸಲು ಬಳಸಿದ ಒಂದು ರಾಜಕೀಯ ಪರಿಕಲ್ಪನೆಯಷ್ಟೇ ಅಲ್ಲ. ಪರಕೀಯ ಆಳ್ವಿಕೆಯ ವಿರುದ್ಧದ ಹೋರಾಟದ ಸಂದರ್ಭದಲ್ಲಿ 'ರಾಷ್ಟ್ರೀಯ ಪ್ರಜ್ಞೆ' ಪ್ರತಿರೋಧದ ರೂಪದಲ್ಲಿ ಕಾಣಿಸಿಕೊಂಡಿತು ಅಷ್ಟೇ. ಹಾಗಾಗಿ ರಾಷ್ಟ್ರೀಯತೆ ಕೇವಲ ಹೋರಾಟದ ಪರಿಕಲ್ಪನೆಯೂ ಅಲ್ಲ. ಭಾರತದಲ್ಲಿನ ವಸಾಹತುಶಾಹಿ ಆಳ್ವಿಕೆ ಇಲ್ಲಿನ ರಾಷ್ಟ್ರೀಯತೆಯ ಭಾವನೆಯ ಅಭಿವ್ಯಕ್ತಿಗೆ ಒಂದು ಮಾರ್ಗವನ್ನು ತೋರಿಸಿದಂತಾಯಿತು. ದಮನಕಾರಿ ಪ್ರಭುತ್ವವೊಂದಿದ್ದಾಗ ಅದರ ವಿರುದ್ಧ ಜನ ಪ್ರತಿರೋಧವನ್ನು ತೋರಿಸುವುದು ಸಹಜವೂ ಕೂಡ. ಒಂದು ಭೂಪ್ರದೇಶದ ಒಳಗೆ ವಾಸ ಮಾಡುವ ಜನ ತಮ್ಮ ವಾಸಸ್ಥಾನವಾದ ನೆಲದ ಬಗೆಗೆ, ತಮ್ಮ ಸಂಸ್ಕೃತಿ, ಗತ ಪರಂಪರೆಯ ಬಗೆಗೆ ಅಭಿಮಾನ ಗೌರವ ತಾಳುವುದು ಅಪಾಯಕಾರಿ ಸಂಗತಿಯೇನೂ ಅಲ್ಲ. ಹಾಗೆಂದು ಇದನ್ನು ಪ್ರತಿಕ್ರಿಯಾತ್ಮಕ

ಸ್ವರೂಪದ ರಾಷ್ಟ್ರೀಯತೆ ಎಂದು ಭಾವಿಸಬೇಕಾಗಿಲ್ಲ. ಕನ್ನಡದ ಕವಿಗಳು ತಮ್ಮ ಕವಿತೆಗಳಿಗೆ ಬೇಕಾದ ಮೂಲ ಪರಿಕರಗಳನ್ನು ತಮ್ಮ ಪ್ರಾದೇಶಿಕ ಅನುಭವದಿಂದಲೇ ಪಡೆದುಕೊಂಡರು. ಪ್ರಾದೇಶಿಕ ಅನುಭವನ್ನು ಬಳಸಿಕೊಳ್ಳುವುದು ರಾಷ್ಟ್ರೀಯತೆಯ ವಿರುದ್ಧ ಬರಹಗಾರರು ಹೂಡಿದ ಒಳಬಂಡಾಯ ಎಂದು ಹೇಳಲಾಗದು. ದೇಶಕ್ಕೆ ಪ್ರದೇಶ, ರಾಷ್ಟ್ರೀಯ ಅನುಭವಕ್ಕೆ ಸ್ಥಳೀಯ ಅನುಭವ ವಿರುದ್ಧ ಎಂದು ಹೇಳುವುದು ಸಾಧ್ಯವಿಲ್ಲ. ಕನ್ನಡ ಕಾವ್ಯ ಕಟ್ಟುವ ರಾಷ್ಟ್ರೀಯತೆಯನ್ನು ತಾತ್ವೀಕರಿಸಿ ನೋಡುವುದಾದರೆ, ಅಲ್ಲಿ ಒಮ್ಮೆ ಭಾವುಕ ಆದರ್ಶಗಳನ್ನು ಚಿತ್ರಿಸುತ್ತಿರುವಾಗಲೇ, ಮತ್ತೊಂದೆಡೆ ವಾಸ್ತವದ ವಿಷಾದ ಪೂರ್ಣ ಚಿತ್ರಣಗಳನ್ನು ನೀಡುತ್ತಾರೆ. ಗತವನ್ನು ವೈಭವೀಕರಿಸುತ್ತಿರುವಾಗಲೇ ಕಣ್ಣೆದುರಿನ ಕಳೆಗುಂದಿದ, ಶಕ್ತಿಹೀನ ಸ್ಥಿತಿಯನ್ನೂ ಚಿತ್ರಿಸುತ್ತಾರೆ.

ಕನ್ನಡ ಕಾವ್ಯದಲ್ಲಿನ ರಾಷ್ಟ್ರ ನಿರ್ವಚನವು ಪ್ರಧಾನವಾಗಿ ಎರಡು ಮಾದರಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಜನಗಳ ಜಡತೆಯನ್ನು, ನಿಷ್ಕ್ರಿಯತೆಯನ್ನು ವ್ಯಂಗ್ಯ ಮಾಡುತ್ತಾ, ತಮ್ಮ ಸದ್ಯದ ಅಸಹನೀಯ ಸ್ಥಿತಿಯ ವಿರುದ್ಧ ಹೋರಾಡುವಂತೆ 'ಬಡಿದೆಬ್ಬಿಸುವ ಮಾದರಿ' ಒಂದೆಡೆ ಪ್ರಧಾನವಾಗಿ ಕಾಣಿಸಿಕೊಂಡರೆ, ಇನ್ನೊಂದು ರೀತಿಯಲ್ಲಿ ತಮ್ಮ ಆತ್ಮ ವಿಸ್ಮೃತಿಯ ಕಾರಣಗಳನ್ನು, ಪತನಕ್ಕೆ ಒಳಗಾದ ತಮ್ಮ ದೌರ್ಬಲ್ಯಗಳನ್ನು ಚಿಂತಿಸುವ 'ಆತ್ಮಶೋಧನ'ದ ಮಾದರಿಯಲ್ಲಿ ಕಾಣಿಸಿಕೊಳ್ಳುತ್ತದೆ.

" ನವೋದಯ ಕಾಲದಲ್ಲಿ ಭಾರತದ ಮೂಲೆ ಮೂಲೆಯಲ್ಲೂ ಇದು ರಾಷ್ಟ್ರ, ನಮ್ಮ ರಾಷ್ಟ್ರ, ನಮ್ಮ ದೇಶ, ನಮ್ಮ ಭಾರತ, 'ಏಳಿ ದೇಶ ಉಳಿಸಿಕೊಳ್ಳಿ' ಇದು ನಮ್ಮದು ಎಂದು ಒತ್ತಿ ಒತ್ತಿ ಹೇಳಿ ಭಾರತೀಯರಲ್ಲಿ ರಾಷ್ಟ್ರ ಭಾವನೆ ಮನದಟ್ಟಾಗುವಂತೆ ಮಾಡುವ ಅಗತ್ಯ ಬಹಳವಿತ್ತು. ನವೋದಯದ ಭಾರತೀಯ ಲೇಖಕ ಇಡೀ ಭಾರತವನ್ನು ಇಡಿಯಾಗಿ ಕಂಡು ರಾಷ್ಟ್ರದ ಕಲ್ಪನೆಯನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಿದ್ದಾನೆ. ಮೈಮರೆತು ಪರವಶನಾಗಿ ರಾಷ್ಟ್ರವನ್ನು ಹೊಗಳಿದ್ದಾನೆ. ಅದನ್ನು ಕುರಿತು ಹಾಡಿದ್ದಾನೆ"[೨೨] ಎಂದು ಕನ್ನಡದ ರಾಷ್ಟ್ರೀಯತೆಯ ಸ್ವರೂಪದ ಬಗೆಗೆ ಡಾ.ಯು.ಆರ್.ಅನಂತಮೂರ್ತಿಯವರು ಹೇಳುತ್ತಾರೆ. ರಾಷ್ಟ್ರೀಯತೆ ಎನ್ನುವುದು ನವೋದಯ ಕಾಲದ ಕಾವ್ಯದ ಮನೋಧರ್ಮವೇ ಆಗಿದೆ.

"ವಸಾಹತುಶಾಹಿಯ ವಿರುದ್ಧ ಹೋರಾಡುವುದೆಂದರೆ ರಾಷ್ಟ್ರೀಯತೆಯನ್ನು ಕಟ್ಟುವುದು. ವಸಾಹತುವಾದದ ವಿರೋಧವೆಂದರೆ ರಾಷ್ಟ್ರೀಯ

ಪ್ರಜ್ಞೆಯನ್ನು ಜಾಗೃತಗೊಳಿಸುವುದು ಎಂದು ರಾಷ್ಟ್ರೀಯವಾದಿಗಳು ಭಾವಿಸಿದ್ದರು. ಇದರಿಂದ ಸಾಂಸ್ಕೃತಿಕ ರಾಷ್ಟ್ರೀಯತೆ, ರಾಷ್ಟ್ರೀಯ ಅನನ್ಯತೆ ಮತ್ತು ರಾಷ್ಟ್ರೀಯ ಏಕತೆ ಎಂಬ ತಾತ್ವಿಕತೆಯು ಮುಂಚೂಣಿಗೆ ಬಂತು. ರಾಷ್ಟ್ರೀಯತೆಯ ಪ್ರಜ್ಞೆ ಎನ್ನುವುದು ಈ ದೃಷ್ಟಿಯಿಂದ ರಾಷ್ಟ್ರೀಯತೆಯ ಆಯಾಮವನ್ನು ಮಾತ್ರ ಹೊಂದಿರಲಿಲ್ಲ. ಭಾರತೀಯ ರಾಷ್ಟ್ರೀಯತಾವಾದಿ ಚಿಂತನೆಗೆ ಅಂತರಾಷ್ಟ್ರೀಯ ಆಯಾಮವೂ ಇತ್ತು. ಇದುವೆ ಸಾಂಸ್ಕೃತಿಕ ರಾಷ್ಟ್ರೀಯವಾದಕ್ಕೆ ಕಾರಣವಾಯಿತು"[೨೪] ಎನ್ನುವ ಡಾ.ಕೇಶವ ಶರ್ಮರ ಮಾತು ಭಾರತೀಯ ರಾಷ್ಟ್ರೀಯತೆಯನ್ನು ವಿಶಿಷ್ಟವಾಗಿ ಗ್ರಹಿಸುತ್ತದೆ. ರಾಷ್ಟ್ರೀಯತೆಯನ್ನೇ ಅಪಾಯಕಾರಿ ಎನ್ನುವ ಬದಲು ಭಾರತಿಯ ರಾಷ್ಟ್ರೀಯತೆಯ ವಿಶಿಷ್ಟ ಸ್ವರೂಪವನ್ನು ಗ್ರಹಿಸುವುದು ಒಳಿತು. ಹಲವು ಭಾಷೆಗಳನ್ನು, ಹಲವು ಧರ್ಮಗಳನ್ನು ಹೊಂದಿಯೂ ಆ ಕಾರಣದಿಂದಲೇ ವಿಭಜನಕಾರಿಯಾಗದೆ, ಒಟ್ಟಾಗಿ ಬದುಕುವುದು ಸಾಧ್ಯ ಎನ್ನುವುದನ್ನು ಭಾರತೀಯ ರಾಷ್ಟ್ರೀಯತೆಯ ಮುಖ್ಯ ಲಕ್ಷಣವಾಗಿ ನೋಡಬಹುದು. ಈ ರಾಷ್ಟ್ರೀಯತೆ 'ಸ್ವ' ಮತ್ತು 'ವಿಶ್ವ' ಗಳೆರಡನ್ನೂ ಸಂಘರ್ಷರಹಿತ ಸಾವಯವ ಸ್ವರೂಪದಲ್ಲೇ ಹೊಂದಿಸುವ ಬಗೆಯನ್ನು ನೋಡಬಹುದು. 'ಸ್ವ' ಅನನ್ಯತೆಯನ್ನು ಸ್ಥಾಪಿಸಿಕೊಳ್ಳುವುದು 'ವಿಶ್ವ'ಕ್ಕೆ ವಿರುದ್ಧವೂ ಅಲ್ಲ, ಅಪಾಯಕಾರಿಯೂ ಅಲ್ಲ. ವಸಾಹತುಶಾಹಿಯ ಸಂದರ್ಭದಲ್ಲಿ ಕಳೆದು ಹೋಗಿದ್ದ ಈ 'ಸ್ವ' ಅನನ್ಯತೆಯನ್ನು ಮರುಸ್ಥಾಪಿಸುವುದಕ್ಕಾಗಿ ನಡೆದ ಹೋರಾಟವೂ ಕೂಡ ಈ ಹಿನ್ನೆಲೆಯಿಂದ ವಿಶಿಷ್ಟವಾದುದು. "ರಾಷ್ಟ್ರೀಯ ಹೋರಾಟ ಎನ್ನುವುದು ಕೇವಲ ಅಧಿಕಾರಕ್ಕಾಗಿ ನಡೆದ ರಾಜಕೀಯ ಹೋರಾಟ ಅಲ್ಲ. ನಾಡಿನ ಸ್ವಾತಂತ್ರ್ಯದ ಪ್ರಶ್ನೆಯನ್ನು ಅದು ಜನತೆಯ ಭೌತಿಕ, ಅಧ್ಯಾತ್ಮಿಕ ಜೀವನದ ಪ್ರತಿಯೊಂದು ಆಯಾಮದೊಂದಿಗೂ ವಸ್ತುಶಃ ಜೋಡಿಸಿತ್ತು"[೨೫] ಎಂಬ ಪಾರ್ಥ ಚಟರ್ಜಿಯವರ ಮಾತು ರಾಷ್ಟ್ರೀಯ ಹೋರಾಟದ ಹಿಂದಿನ ವಿಸ್ತೃತವಾದ ಆಯಾಮವನ್ನು ಬಿಡಿಸಿಡುತ್ತಿದೆ. ವಸಾಹತುಶಾಹಿಯನ್ನು ತೀವ್ರವಾಗಿ ವಿರೋಧಿಸುತ್ತಲೇ, ವಸಾಹತುಶಾಹಿಗೆ ಒಳಗಾದ ಕಾರಣದಿಂದ ತಾವು ಕೆಳಮಟ್ಟದವರು ಎಂಬ ವಾದವನ್ನು ನಿರಾಕರಿಸಿತು. ಜೊತೆಗೆ ತನ್ನ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡೇ ವಸಾಹತುಶಾಹಿಯಿಂದ ಬಿಡುಗಡೆ ಹೊಂದುವ ಹಂಬಲವನ್ನು ಹೊಂದಿತ್ತು.

"ಭಾರತದಂಥ ಬಹುರೂಪೀ ಸಮಾಜವೊಂದರಲ್ಲಿ 'ರಾಷ್ಟ್ರೀಯತೆಯ ಅನಿವಾರ್ಯ ಅಂಶಗಳು' ಎಂದು ಗುರುತಿಸಲಾದ ಸಮಾನ ಸಂಸ್ಕೃತಿ. ಚರಿತ್ರೆ, ಪರಂಪರೆ, ಭಾಷೆ, ಜನಾಂಗೀಯತೆ ಮೊದಲಾದವುಗಳ ಗೈರು ಹಾಜರಿ ಎದ್ದು

ತೋರುತ್ತಿದ್ದು, ಆ ನೆಲೆಗಳಲ್ಲಿ ರಾಷ್ಟ್ರೀಯತೆಯನ್ನು ಭಾರತದಲ್ಲಿ ಗ್ರಹಿಸುವುದು ಮತ್ತು ಅನುಷ್ಠಾನಕ್ಕೆ ತರುವುದು ಕಷ್ಟಸಾಧ್ಯ ಮಾತ್ರವಲ್ಲ ಅಂತಹ ಪ್ರಯತ್ನಗಳು ಅತ್ಯಂತ ಅಪಾಯಕಾರಿ ಎನ್ನಿಸಿಕೊಳ್ಳಬಹುದು. ಹೀಗಾಗಿ ಭಾರತದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಯುರೋಪಿನ ರಾಷ್ಟ್ರೀಯತೆಯ ಪರಿಕಲ್ಪನೆಗಿಂತ ಮೂಲಭೂತವಾಗಿ ಬೇರೆಯದ್ದೇ ಆಗಬೇಕಾಗುತ್ತದೆ. ಭಾರತದಲ್ಲಿ ರಾಷ್ಟ್ರೀಯ ಕಾಂಗ್ರೇಸ್ಸಿನ ನಾಯಕತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ 'ವಿವಿಧತೆಯಲ್ಲಿ ಏಕತೆ' ಎನ್ನುವ ನಿಲುವು ರಾಷ್ಟ್ರೀಯತೆಯನ್ನು ಐರೋಪ್ಯೇತರ ಸಂದರ್ಭದಲ್ಲಿ ಮರುವ್ಯಾಖ್ಯಾನಿಸುವ ದಿಸೆಯಲ್ಲಿ ಒಂದು ಪುಟ್ಟ ಹೆಜ್ಜೆಯೇ ಹೌದು"[೨೬] ಎನ್ನುವ ಡಾ. ನಿತ್ಯಾನಂದ ಬಿ.ಶೆಟ್ಟಿಯವರ ಅಭಿಪ್ರಾಯ ಭಾರತೀಯ ರಾಷ್ಟ್ರೀಯತೆಯ ಪರಿಕಲ್ಪನೆಯ ವಿಶಿಷ್ಟತೆಯನ್ನು ಗುರುತಿಸುತ್ತದೆ. ಭಾರತೀಯ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಐರೋಪ್ಯ ಪರಿಕಲ್ಪನೆಯೊಂದಿಗೆ ಮುಖಾಮುಖಿಯಾಗಿಸಿದಾಗ ಕಾಣುವ ಅನನ್ಯತೆಯನ್ನೂ ಇದು ಗುರುತಿಸುತ್ತದೆ. ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಪ್ರಕಟಿಸಿದ 'ವಿವಿಧತೆಯಲ್ಲಿ ಏಕತೆ'ಯ ನಿಲುವೇ ಭಾರತೀಯ ಸಂದರ್ಭದ ರಾಷ್ಟ್ರೀಯ ಪರಿಕಲ್ಪನೆಯ ವಿಶಿಷ್ಟ ಅಂಶವಾಗಿತ್ತು. ಈ ನಿಲುವು 'ರಾಷ್ಟ್ರ'ದ ಐರೋಪ್ಯ ವ್ಯಾಖ್ಯಾನದ ಮುಂದೆ ಭಾರತೀಯ ಗ್ರಹಿಕೆಯ ಮರುವ್ಯಾಖ್ಯಾನವೆಂದೇ ಭಾವಿಸಬೇಕು. ಪಶ್ಚಿಮ ಎಲ್ಲೆಲ್ಲಾ ತನ್ನ ವಸಾಹತುಗಳನ್ನು ಸ್ಥಾಪಿಸಿತೋ ಅಲ್ಲೆಲ್ಲಾ, ಮುಖ್ಯವಾಗಿ ಅಫ್ರಿಕಾ ಮತ್ತು ಏಷ್ಯಾದ ದೇಶಗಳಲ್ಲಿ ತಾನು ನಡೆಸಿದ ಆಳ್ವಿಕೆ ಕೇವಲ ರಾಜಕೀಯ ಆಳ್ವಿಕೆ ಮಾತ್ರ ಆಗಿರದೆ, ಅದೊಂದು ಬಗೆಯ ಬೌದ್ಧಿಕ, ಸಾಂಸ್ಕೃತಿಕ ಯಜಮಾನಿಕೆಯೂ ಆಗಿತ್ತು. ಹೀಗಾಗಿ ಪಶ್ಚಿಮ ತನ್ನ ವಸಾಹತುವನ್ನು ತಾನೇ ವಿವರಿಸುತ್ತಾ, ವಿವೇಚಿಸುತ್ತಾ, ವ್ಯಾಖ್ಯಾನಿಸುತ್ತಾ ತನ್ನ ಕಲ್ಪನೆಯಲ್ಲಿ ಪೂರ್ವದ ಬಿಂಬವನ್ನು ಕಟ್ಟತೊಡಗಿತು. ಹೀಗೆ ಕಟ್ಟಲ್ಪಟ್ಟ ಚರಿತ್ರೆಯಲ್ಲಿ ಪೂರ್ವವನ್ನು ತನ್ನ ಇರುವಿಕೆಯಿಂದ ಉದ್ಧಾರಗೊಳ್ಳಬಹುದಾದ ಅನಾಗರಿಕರ ಭಾಗ್ಯ ಎಂಬಂತೆ ಚಿತ್ರಿಸಿತು. ಹೀಗಾಗಿ ತನ್ನಲ್ಲಿ ಇರುವ ಸಂಗತಿಗಳು ಹೇಗೆ ಪೂರ್ವದಲ್ಲಿ ಕೊರತೆಯಿದೆ ಎನ್ನುವುದನ್ನು ತೋರಿಸುವ ಪ್ರಯತ್ನವನ್ನು ಮಾಡುತ್ತದೆ. ಇಂತಹ ಪ್ರಯತ್ನದ ಭಾಗವಾಗಿಯೇ ಭಾರತದಲ್ಲಿ ರಾಷ್ಟ್ರೀಯತೆಯ ಕಲ್ಪನೆ ರೂಪುಗೊಂಡದ್ದೇ ತಮ್ಮ ಇರುವಿಕೆಯ ಕಾರಣದಿಂದ ಎಂಬ ಚಿತ್ರಣವನ್ನು ನೀಡತೊಡಗಿತು.

ಪಶ್ಚಿಮದಂತೆ ಭಾರತೀಯ ರಾಷ್ಟ್ರೀಯತೆಯ ಪರಿಕಲ್ಪನೆ ಅನೇಕವನ್ನು ಕರಗಿಸಿ ಏಕಗೊಳಿಸುವ ಮಾದರಿಯದ್ದಲ್ಲ. ಇಲ್ಲಿ ಒಂದು ರಾಷ್ಟ್ರ ಎಂದಾಗಲೂ ಅದರೊಳಗೆ

'ಅನೇಕ' ಜೀವಂತವಾಗಿಯೇ ಇದೆ. ಪಾರತಂತ್ರ್ಯದ ಕಾರಣದಿಂದ ಭಾರತೀಯರು ಕಳೆದುಕೊಂಡಿದ್ದ ಆತ್ಮವಿಶ್ವಾಸವನ್ನು ಮರುಸ್ಥಾಪಿಸುವ ಮೂಲಕ ಭಾರತೀಯ ಜನರಲ್ಲಿ ತುಂಬಿದ್ದ ಕೀಳರಿಮೆಯನ್ನು ಕಳೆಯುವ ಪ್ರಯತ್ನವನ್ನು ಇಲ್ಲಿನ ರಾಷ್ಟ್ರೀಯತೆಯು ಸೂಕ್ಷ್ಮವಾಗಿ ಮಾಡುತ್ತದೆ. ಜೊತೆಗೆ ತನ್ನನ್ನು ತಾನು ಸಾಂಸ್ಕೃತಿಕವಾಗಿ ಸನ್ನದ್ಧಗೊಳಿಸಿಕೊಳ್ಳುವ ಪ್ರಕ್ರಿಯೆಗೆ ಒಳಪಡಿಸಿಕೊಳ್ಳುತ್ತದೆ. ಅದಕ್ಕಾಗಿ ತನ್ನದೇ ಗತದಿಂದ ಸಾಂಸ್ಕೃತಿಕ ತುಣುಕುಗಳನ್ನು ಹೆಕ್ಕಿಕೊಳ್ಳುತ್ತಾ, ಅದನ್ನು ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಪುನರ್ ರೂಪಿಸಿಕೊಳ್ಳುತ್ತದೆ. ಒಂದೆಡೆ ಪಶ್ಚಿಮ ತನ್ನ ಮೇಲೆ ಸಾಧಿಸುತ್ತಿರುವ ಯಾಜಮಾನ್ಯವನ್ನು ನಿರಾಕರಿಸುತ್ತದೆ. ಮತ್ತೊಂದೆಡೆ ಒಂದು ರಾಷ್ಟ್ರವಾಗಿ ಪುನರ್ ರೂಪಿಸಿಕೊಳ್ಳುವುದಕ್ಕೆ ಅಡ್ಡಿಯಾಗಿ ನಿಂತಿರುವ ತನ್ನ ಪರಂಪರೆಯೊಳಗಿನ ಅನೇಕ ಭಿನ್ನತೆಗಳನ್ನು ಜಡತೆಯನ್ನು ನಿರಾಕರಿಸುತ್ತದೆ. ಇದರ ಪರಿಣಾಮವಾಗಿಯೇ ರಾಷ್ಟ್ರೀಯ ಹೋರಾಟದ ಜೊತೆ ಜೊತೆಯಲ್ಲಿಯೇ ದೊಡ್ಡ ಮಟ್ಟದಲ್ಲಿ ಒಂದು ಸುಧಾರಣಾವಾದಿ ಆಂದೋಲನ ರೂಪುತಾಳುತ್ತದೆ.

ಭಾರತೀಯ ರಾಷ್ಟ್ರೀಯತೆಯ ಪ್ರಧಾನ ಸ್ವರೂಪಗಳಲ್ಲಿ ಅದು ನಿರೂಪಣೆಗೊಳ್ಳುತ್ತಿದ್ದ ಸ್ತ್ರೀ ರೂಪವೂ ಒಂದು. ರಾಷ್ಟ್ರ ನಿರ್ವಚನದ ಅವಯವಗಳಂತಿರುವ ನೆಲವನ್ನು, ಸಂಸ್ಕೃತಿಯನ್ನು, ಭಾಷೆಯನ್ನು 'ತಾಯಿ' ರೂಪಕದಲ್ಲಿ ಮಂಡಿಸಿದ್ದು ಇಲ್ಲಿನ ವಿಶಿಷ್ಟ ಸಂಗತಿ. 'ಸ್ತ್ರಿ' ಅಥವಾ 'ತಾಯಿ' ಪೋಷಣೆಯ, ಕರುಣೆಯ, ಕ್ಷಮೆಯ ಪ್ರತೀಕ. 'ಭಾರತಮಾತೆ' ಯೂ ಕೂಡ ಇದೆ ಸ್ವಭಾವದವಳು. ಇಂಥ ತಾಯಿಯನ್ನು ಶೋಷಿಸುವ, ಹಿಂಸಿಸುವ ವಸಾಹತುಶಾಹಿಯ ನೀಚ ಪ್ರವೃತ್ತಿಯನ್ನು ಖಂಡಿಸಲು, ಆ ಮೂಲಕ ತಾಯಿಯ ಬಿಡುಗಡೆಗಾಗಿ ವಸಾಹತುಶಾಹಿಯನ್ನು ಹಿಮ್ಮೆಟ್ಟಿಸಲು ಬೇಕಾದ ಜಾಗೃತಿ, ಎಚ್ಚರವನ್ನು ಮೂಡಿಸುವುದಕ್ಕೆ ಈ 'ತಾಯಿ' ರೂಪಕವೇ ಮಾಧ್ಯಮವಾಗುತ್ತದೆ. ರಾಷ್ಟ್ರವನ್ನು ತಾಯಿ ಎಂದು ಕಂಡಾಗಲೇ ಇಲ್ಲಿನ ಪ್ರಜೆಗಳು ಆ ತಾಯಿಯ ಮಕ್ಕಳು ಎಂಬ ಭಾವನೆಯು ಕೂಡ ಉಂಟಾಗುತ್ತದೆ. ಹಾಗಾಗಿ ಭಾರತದ ಮೇಲಿನ ಪರಕೀಯರ ದಾಳಿ ತಾಯಿಯ ಮೇಲಿನ ದಾಳಿ ಎಂದು ಪರಿಗಣಿಸಲ್ಪಟ್ಟು, ಆಕೆಯ ಮಕ್ಕಳು ಒಟ್ಟಾಗಿ ಇದನ್ನು ಎದುರಿಸಬೇಕು ಎಂಬ ಭಾವನೆ ಇಲ್ಲಿ ರೂಪುಗೊಳ್ಳುತ್ತದೆ. ಇದು ಕನ್ನಡದ ಕವಿಗಳ ಕವಿತೆಗಳಲ್ಲಿ ನಾವು ಕಾಣಬಹುದಾದ ಮುಖ್ಯ ರೂಪಕವೂ ಹೌದು. ಭಾರತವು ಕಾವ್ಯದೊಳಗೆ 'ಭಾರತಿ' 'ಭಾರತಮಾತೆ' 'ಮಾತೃಭೂಮಿ' 'ಭಾರತಲಕ್ಷ್ಮಿ', 'ಭಾರತಿದೇವಿ' 'ಭಾರತಾಂಬೆ' 'ಭಾರತ

ಜನನಿ'ಯ ರೂಪಗಳಲ್ಲಿ 'ರಾಷ್ಟ್ರ' ಸಂಕೇತಗೊಳ್ಳುತ್ತದೆ. ಮುಂದೆ ಇದೇ ಸ್ತ್ರೀರೂಪಕ ನಾಡಿನ ಪರಿಕಲ್ಪನೆಗೂ ವಿಸ್ತರಿಸುತ್ತದೆ. ಕನ್ನಡ ಭಾಷೆಗೂ, ಕನ್ನಡ ನೆಲಕ್ಕೂ ವಿಸ್ತರಿಸುತ್ತದೆ. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ.ಯವರಲ್ಲಿ 'ರಾಷ್ಟ್ರ' ಹಾಗೂ 'ನಾಡು' 'ಸ್ತ್ರಿ ಸಂಕಥತನ'ವಾಗಿಯೆ ಮೂಡಿಬರುತ್ತದೆ. 'ರಾಷ್ಟ್ರ' ಪಡೆಯುವ ಈ ಸ್ತ್ರೀ ಸ್ವರೂಪಕ್ಕೆ ಹೆಚ್ಚಿನ ಅರ್ಥವಿದೆ. ಪಶ್ಚಿಮ ರಾಷ್ಟ್ರವನ್ನು ಸ್ತ್ರೀ ರೂಪದಲ್ಲಿ ಕಂಡಿಲ್ಲ. ಅದರ ವಿಸ್ತರಣಾವಾದಿ ಪ್ರವೃತ್ತಿ, ಆಕ್ರಮಣಕಾರಿ ಸ್ವಭಾವ ಪುರುಷ ರೂಪದ್ದು. ಆದರೆ ಭಾರತೀಯ ರಾಷ್ಟ್ರ ಪರಿಕಲ್ಪನೆ 'ಸ್ತ್ರೀ' ರೂಪವನ್ನು ಪಡೆದುದರಲ್ಲೇ, ಒಂದು ಅರ್ಥವಂತಿಕೆ ಇದೆ. 'ಸ್ತ್ರೀ' ಸ್ವಭಾವ ಮೂಲತಃ ಆಕ್ರಮಣಕಾರಿಯಲ್ಲ. ಅದು ಪೋಷಣೆಯ ನೆಲೆಯದ್ದು. ತಾಳಿಕೆಯ ಪ್ರತೀಕ. ಭಾರತೀಯ ರಾಷ್ಟ್ರ ಪರಿಕಲ್ಪನೆ ಸ್ತ್ರಿ ರೂಪವನ್ನು ಹೊಂದುವುದರಲ್ಲೇ ಅದು ಆಕ್ರಮಣಕಾರಿಯಲ್ಲ ಎನ್ನುವುದನ್ನು ತೋರಿಸುತ್ತಿದೆ. ಆದರೆ ಪರಕೀಯ ದಬ್ಬಾಳಿಕೆಯಿಂದ ಬೇಸತ್ತ ಈ ತಾಯಿ ತನ್ನ ಬಿಡುಗಡೆಗಾಗಿ ಸ್ವಭಾವ ಸಹಜ ಸೌಮ್ಯತೆಯನ್ನು ಮೀರಿ 'ಶಕ್ತಿಮಾತೆ'ಯಾಗುವ ಕಡೆಗಿನ ನಡಿಗೆಯನ್ನು ಕಾಣುತ್ತೇವೆ. ಹಾಗಾಗಿ ಇದೇ ತಾಯಿ ತಾನು 'ಚಂಡಿ-ಚಾಮುಂಡಿ'ಯಾಗಿ, ಶೂರರ ರಾಣಿಯಾಗಿ, 'ಕ್ರಾಂತಿ ಕಾಳಿ'ಯಾಗಿ ಹೊಸ ಅವತಾರವನ್ನು ತಾಳುವುದನ್ನೂ ಕಾಣಬಹುದು.

ಭಾಷೆ ಪಶ್ಚಿಮದ ರಾಷ್ಟ್ರ ನಿರ್ವಚನದ ಪ್ರಧಾನ ಭೂಮಿಕೆಯಾಗಿದ್ದು, ಅದು ಒಂದು ರಾಷ್ಟ್ರದ ಆಧಾರಭೂತ ಸಂಗತಿಯಾಗಿದೆ. ಭಾರತದ ಬಹುಭಾಷಿಕ ಸನ್ನಿವೇಶದಲ್ಲಿ ಭಾಷೆ ರಾಷ್ಟ್ರದ ಮುಖ್ಯ ಸಂಗತಿ ಆಗಲಿಲ್ಲ. ಆದರೆ ವಸಾಹತುಶಾಹಿ ಆಡಳಿತಗಾರರು ಇಲ್ಲಿ ತಮ್ಮ ಭಾಷೆಯಾದ ಇಂಗ್ಲಿಷನ್ನು ಹೇರಿದಾಗ ಅದನ್ನು ಸ್ಥಳೀಯ ಭಾಷೆಗಳು ಎದುರಿಸಿದ ಬಗೆ ಆಧುನಿಕ ಭಾರತದ 'ರಾಷ್ಟ್ರ'ದ ಕುರಿತ ಚರ್ಚೆಯಲ್ಲಿ ಕುತೂಹಲಕಾರಿಯಾದ ಸಂಗತಿಯಾಗಿದೆ. ಇಂಗ್ಲಿಷ್ ಹೇರಿಕೆಯ ಕುರಿತು ಸ್ಥಳೀಯ ಭಾಷೆಗಳು ತೋರಿದ ಪ್ರತಿಕ್ರಿಯೆಯು ಭಾಷಿಕ ನೆಲೆಯ ಚಳವಳಿಗೆ ಜೀವ ತುಂಬಿತು. ಹೊಸ ಶಿಕ್ಷಣ ವ್ಯವಸ್ಥೆಯ ಅನುಕೂಲಕ್ಕಾಗಿ ಪಠ್ಯಗಳನ್ನು ಸಿದ್ಧಪಡಿಸಲು, ಮುದ್ರಣದ ಅನುಕೂಲಕ್ಕಾಗಿ ಒಂದು ಭಾಷೆಯ ಒಳಗಿನ ಹಲವು ಬಳಕೆಯ ಕ್ರಮವನ್ನು ಬದಿಗೆಸರಿಸಿ 'ಉನ್ನತೀಕರಿಸಲ್ಪಟ್ಟು' ಮುಂದೆ ಅದೇ ಅಧಿಕೃತ ರೂಪವೆಂಬ ಮಾನ್ಯತೆಯನ್ನು ಪಡೆಯುವಂತಾಯಿತು. ಅಮೂರ್ತವಾದ ರಾಷ್ಟ್ರ ಭಾಷಿಕ ಚಟುವಟಿಕೆಗಳ ಮೂಲಕವೆ ಮೂರ್ತ ರೂಪವನ್ನು ಪಡೆಯುತ್ತಿತ್ತು.

ಪಶ್ಚಿಮದ ಆಧುನಿಕ ರಾಷ್ಟ್ರ ಸಿದ್ಧಾಂತ ವಸಾಹತುಶಾಹಿ ಕಾಲಘಟ್ಟದ ಭಾರತೀಯ ರಾಷ್ಟ್ರವಾದವನ್ನು ಪ್ರಭಾವಿಸಿತು. ವೈವಿಧ್ಯರಹಿತವಾದ ಪಶ್ಚಿಮದ ಬಲಿಷ್ಠ ಏಕರಾಷ್ಟ್ರ ಮಾದರಿಗಳು ಭಾರತೀಯ ರಾಷ್ಟ್ರವಾದವನ್ನು ಹೊಸದಾಗಿ ನಿರೂಪಿಸುವ ಒತ್ತಡವನ್ನು ಉಂಟುಮಾಡಿದ್ದರೆ ಅಚ್ಚರಿಯೇನೂ ಇಲ್ಲ. ಪರಾಕ್ರಮ ಮತ್ತು ಬಲಿಷ್ಠತನ ರಾಷ್ಟ್ರೀಯತೆಯ ಮೌಲ್ಯವೆಂದು ಭಾವಿಸಲಾಗಿತ್ತು. ಆದರೆ ಭಾಷೆ, ಸಂಸ್ಕೃತಿ, ಚರಿತ್ರೆ, ಪರಂಪರೆಯ ನೆಲೆಯಲ್ಲಿ ಬಹುತ್ವವನ್ನು, ವೈವಿಧ್ಯತೆಯನ್ನು ಹೊಂದಿರುವ ಭಾರತದಲ್ಲಿ ಆ ಮಾದರಿಯ ರಾಷ್ಟ್ರೀಯತೆಯ ಪ್ರತಿಪಾದನೆ ಒಂದು ಬಗೆಯಿಂದ ಸಮಸ್ಯಾತ್ಮಕ ಪರಿಕಲ್ಪನೆಯಾಗಿತ್ತು. ಆಗ ಇವೆಲ್ಲದಕ್ಕೂ ತಮ್ಮ ಗತದೊಳಗಿಂದ ಪರಿಹಾರಗಳನ್ನೂ, ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನ ನಡೆಯಿತು. ಸಂಸ್ಕೃತಿ, ಪರಂಪರೆ, ಚರಿತ್ರೆ, ಭಾಷೆಗಳಲ್ಲಿ ಕಾಣುವ ವೈವಿಧ್ಯತೆ ಇದ್ದರೂ ಇವೆಲ್ಲದರ ಆಳದಲ್ಲಿ ಇವೆಲ್ಲವನ್ನೂ ಬೆಸೆದ ಒಂದು ಸಾಮಾನ್ಯ ಸಂಗತಿ ಇದೆ. ಈ ವೈವಿಧ್ಯಮಯ ರೂಪಗಳು ಮೂಲದಲ್ಲಿ ಒಂದೇ ಆಗಿದ್ದವು. ಮುಂದೆ ಒಂದು ಮೂಲದಿಂದ ಕವಲೊಡೆದು ಹಲವಾಯಿತು. ಹಾಗಾಗಿ ಈ ವೈವಿಧ್ಯತೆ ಒಂದು ಮೂಲದ ಹಲವು ಕವಲುಗಳೇ ಹೊರತು 'ಏಕತೆ'ಗೆ ವಿರುದ್ಧವಾದುದಲ್ಲ ಎಂದು ಪ್ರಜ್ಞಾಪೂರ್ವಕವಾಗಿ ಪ್ರತಿಪಾದಿಸಲಾಯಿತು. ಗತಕಾಲವು ಸುವರ್ಣಯುಗವಾಗಿತ್ತು. ಆ ಸುವರ್ಣ ಯುಗದಲ್ಲೊಮ್ಮೆ ಇಡೀ ರಾಷ್ಟ್ರವನ್ನು ಪರಂಪರೆ, ಭಾಷೆ, ಚರಿತ್ರೆ, ಸಂಸ್ಕೃತಿಗಳು ಬೆಸೆದಿತ್ತು ಎನ್ನುತ್ತಾ, ವೈದಿಕ ಪರಂಪರೆ, ಸಂಸ್ಕೃತಿಯನ್ನು ಒಂದು ಕಾಲಾನುಕ್ರಮದಲ್ಲಿ ಕಟ್ಟಲಾದ ಭವ್ಯ ಇತಿಹಾಸವನ್ನು, ಸಂಸ್ಕೃತ ಭಾಷೆಯನ್ನು ಎಲ್ಲಾ ಭಾಷೆಗಳ ತಾಯಿ ಭಾಷೆ ಎಂಬ ವಾದವನ್ನು ಮಂಡಿಸಿ ಇವನ್ನೇ ತನ್ನ ರಾಷ್ಟ್ರೀಯತೆಯ ಪ್ರತಿಪಾದನೆಗೆ ಮೂಲ ಪರಿಕರವಾಗಿಸಿತು. ಅದರ ಜೊತೆಗೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿವರಗಳಲ್ಲಿ ದೇಶವನ್ನು ಬೆಸೆದಿದ್ದ ಪುಣ್ಯಕ್ಷೇತ್ರಗಳು, ನದಿ-ಪರ್ವತಗಳು ಭಾವನಾತ್ಮಕ ವಿವರಗಳ ಮೂಲಕ ರಾಷ್ಟ್ರವನ್ನು ಪುನರ್ ಉತ್ಪಾದಿಸಲಾಯಿತು. ಈ ಹಿನ್ನಲೆಯಿಂದ ಆಧುನಿಕ ಸಂದರ್ಭದಲ್ಲಿ ಬಳಕೆಗೆ ಬಂದ 'ರಾಷ್ಟ್ರ' ಒಂದು ತತ್ವವಾಗಿ ಪಶ್ಚಿಮದ ವಿಚಾರಧಾರೆಗೆ ಹೆಚ್ಚು ಹತ್ತಿರವಾಯಿತು. ವಸಾಹತುಶಾಹಿ ವಿರೋಧಿ ಹೋರಾಟದ ಸನ್ನಿವೇಶದಲ್ಲಿ ಕನ್ನಡ ಕವಿತೆಗಳು ರಾಷ್ಟ್ರವನ್ನು ಒಂದು ರಾಜಕೀಯ ಅರ್ಥದ ಪರಿಭಾಷೆಯಾಗಿ ಗ್ರಹಿಸಿದ್ದಕ್ಕಿಂತ ಅದನ್ನು ಸಾಂಸ್ಕೃತಿಕ ಸ್ವರೂಪದಲ್ಲೇ ಗ್ರಹಿಸಲು ಯತ್ನಿಸಿದ್ದರು. ಆಧುನಿಕ ಕಾಲದ 'ರಾಷ್ಟ್ರ ಪ್ರಭುತ್ವ' (Nation-State) ಕ್ಕಿಂತ ಆಧುನಿಕ ಪೂರ್ವದ 'ರಾಷ್ಟ್ರ' (Nation) ಪರಿಕಲ್ಪನೆಯ ತಾತ್ವಿಕತೆಗೆ

ಹೆಚ್ಚು ಹತ್ತಿರವಾದ ಸಾಂಸ್ಕೃತಿಕ ರಾಷ್ಟ್ರೀಯತೆಯ ತತ್ವವನ್ನೇ ಕನ್ನಡ ಕವಿತೆಗಳು ಮುಂದಿಡುತ್ತವೆ.

ವಸಾಹತುಶಾಹಿಗೆ ಒಳಪಟ್ಟ ರಾಷ್ಟ್ರಗಳ ಪ್ರಜ್ಞೆಯ ಮೇಲೆ ವಸಾಹತು ಪ್ರಭುತ್ವ ಹುಟ್ಟುಹಾಕಿದ ಪ್ರಭಾವ ತೀವ್ರವಾಗಿರುತ್ತದೆ. ತನ್ನನ್ನು ತಾನು ಕಂಡುಕೊಳ್ಳಲು ಅಸಮರ್ಥವಾಗುವ ಜೊತೆಗೆ ತನ್ನನ್ನು ಪ್ರಭುತ್ವ ಕಟ್ಟಿದ ನಿರೂಪಣೆಯ ಕ್ರಮದಲ್ಲಿ ನೋಡಿಕೊಳ್ಳುವ ಮೂಲಕ ತನ್ನನ್ನು ಕುಬ್ಜಗೊಳಿಸಿಕೊಳ್ಳುತ್ತದೆ. "ವಸಾಹತುಶಾಹಿಯು ನಾವು ಲೋಕವನ್ನು ನೋಡುವ / ಗ್ರಹಿಸುವ ದೃಷ್ಟಿಕೋನವನ್ನೇ ಬದಲಿಸುತ್ತದೆ. ಮತ್ತು ಇದು ಮೂಲ ನಿವಾಸಿಗಳ ಲೋಕಗ್ರಹಿಕೆಯನ್ನು ಕೇವಲ ಹಿಂಸೆಯ ಮೂಲಕ ಬದಲಿಸುತ್ತದೆ. ವಸಾಹತುಶಾಹಿಯು ಯಾವಾಗಲೂ ತನ್ನ ಆಳ್ವಿಕೆಗೆ ಒಳಗಾದವರ ಲೋಕವನ್ನು ಬದಲಿಸುತ್ತಿರುತ್ತದೆ." [೨೭] ಎಂಬ ಡಾ. ಎಸ್.ಎನ್. ಬಾಲಗಂಗಾಧರ ಅವರ ಮಾತು ವಸಾಹತು ಪ್ರಭುತ್ವ ಹುಟ್ಟುಹಾಕುವ ಬೌದ್ಧಿಕ ಕ್ರೌರ್ಯವನ್ನು ಹೇಳುತ್ತದೆ. ವಸಾಹತುಶಾಹಿಯ ಸ್ವಭಾವವನ್ನು ಗ್ರಹಿಸುವಲ್ಲಿ ಎಡ್ವರ್ಡ್ ಸೈದ್‌ನ ಆಲೋಚನೆ ಉಪಯುಕ್ತವಾಗಿದೆ. ಸೈದ್ ಹೇಳುವಂತೆ "ವಸಾಹತುಶಾಹಿಯು 'ರಾಷ್ಟ್ರೀಯ ಪ್ರಜ್ಞೆ 'ಯನ್ನು ಮತ್ತು 'ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿ'ಗಳನ್ನು ತನ್ನದೇ ಕೊಡುಗೆಯೆಂದು ವಾದಿಸುತ್ತದೆ. ಎಂದರೆ ವಸಾಹತುಶಾಹಿಯು ಅಧೀನ ರಾಷ್ಟ್ರಗಳಿಗೆ ಆಧುನಿಕ ಶಿಕ್ಷಣದ ಮೂಲಕ ಆಧುನಿಕ ವೈಚಾರಿಕತೆಯನ್ನು ಮತ್ತು ಅದರ ಪರಿಣಾಮವಾದ ರಾಷ್ಟ್ರೀಯ ಪ್ರಜ್ಞೆಯನ್ನು ನೀಡಿತು. ಮತ್ತು ಈ ಪ್ರಜ್ಞೆಯೇ ಬೆಳೆದು ಮುಂದೆ ರಾಷ್ಟ್ರೀಯ ಹೋರಾಟಕ್ಕೆ ಕಾರಣವಾಯಿತು ಎಂದು ವಸಾಹತುಶಾಹಿಯು ಮಂಡಿಸುತ್ತದೆ. ಅರ್ಥಾತ್, ಈ ಚರಿತ್ರೆಯ ಪ್ರಕಾರ ವಸಾಹತುಶಾಹಿಯ ವಿರುದ್ಧ ಮೂಡಿಬಂದ ಪ್ರತಿರೋಧವೂ ವಸಾಹತುಶಾಹಿಯ ಕೊಡುಗೆಯೆ ಎಂದು ಹೇಳಿಕೊಳ್ಳುತ್ತದೆ." [೨೮] ಸೈದ್‌ನ ಈ ವಾದ ವಸಾಹತುಶಾಹಿ ಹುಟ್ಟುಹಾಕಿದ ವಾದಗಳು ಹೇಗೆ ವಸಾಹತುಶಾಹಿಗೆ ಒಳಪಟ್ಟ ರಾಷ್ಟ್ರಗಳ ಚಿಂತನೆಯನ್ನು ನಿರಾಕರಿಸುತ್ತಿತ್ತು ಹಾಗೂ ತನ್ನ ಅಧೀನ ರಾಷ್ಟ್ರದ ಪ್ರಜ್ಞಾಪೂರ್ವಕ ನಿಲುವುಗಳೂ ಕೂಡ ತನ್ನ ತಿಳುವಳಿಕೆಯ ಒಂದು ಭಾಗವೇ ಆಗಿರುತ್ತದೆ ಎಂಬ ದ್ವಂದ್ವ ನಿಲುವೊಂದನ್ನು ಪ್ರತಿಪಾದಿಸುತ್ತದೆ ಎನ್ನುವುದರ ಕುರಿತು ಬೆಳಕು ಚೆಲ್ಲುತ್ತದೆ. ತಾನು ರಾಷ್ಟ್ರವೆಂಬ ಭಾರತದ ಪ್ರತಿಪಾದನೆಗೆ ಸಮ್ಮತಿ ಸೂಚಿಸದ ವಸಾಹತುಶಾಹಿ ಆಡಳಿತ ಕ್ರಮವನ್ನು ಎದುರಿಸುವ ಸಂದರ್ಭದಲ್ಲಿ ಭಾರತೀಯ ರಾಷ್ಟ್ರ ಪರಿಕಲ್ಪನೆಯು ಹೆಚ್ಚಾಗಿ ಪಾಶ್ಚಾತ್ಯ ರಾಷ್ಟ್ರ ಮೀಮಾಂಸೆಗೆ

ಸಂವಾದಿಯಾಗಿ ಕಾಣಿಸಿದ್ದು. ವಾಸ್ತವದಲ್ಲಿ ರಾಷ್ಟ್ರವಾಗಿ ಭಾರತ ತಾನೇ ಒಂದು ಸ್ವಯಂಪ್ರಭುತ್ವವಾಗುವ ತನ್ನ ಸಾಮರ್ಥ್ಯವನ್ನು ತನ್ನ ಹಕ್ಕಾಗಿ ಪ್ರತಿಪಾದಿಸುತ್ತಿತ್ತು. ವಸಾಹತುಶಾಹಿಯಿಂದ ಅನುಭವಿಸಿದ ಸಂಕಟ ಭಾರತದ ಸುಪ್ತ ರಾಷ್ಟ್ರಪ್ರಜ್ಞೆಯನ್ನು ಹೊಸ ಬಗೆಯಲ್ಲಿ ಪ್ರತಿರೋಧದ ನೆಲೆಯಲ್ಲಿ ಪ್ರಕಟಗೊಳಿಸಿತು. ಭಾರತದ ವಸಾಹತು ಅವಸ್ಥೆಗೆ ಪೂರ್ವದಲ್ಲಿ ತನ್ನದೇ ರಾಷ್ಟ್ರೀಯ ನಂಬಿಕೆಯೊಂದಿತ್ತು. ಒಂದು ಪ್ರಭುತ್ವದ ರೂಪದಲ್ಲಿ ಅದು ಇರಲಿಲ್ಲವಾದರೂ ಅದರ ಆಂತರಿಕ ಸ್ವರೂಪದಲ್ಲಿ ಅದು ಒಂದು ರಾಷ್ಟ್ರವೇ ಆಗಿತ್ತು. ಪಶ್ಚಿಮದ ಆಧುನಿಕತೆಗೆ ಸಂಬಂಧವಿಲ್ಲದೇ ಇದ್ದ ಒಂದು ಸ್ಥಿತಿಯದು. ಪಶ್ಚಿಮ ಪೂರ್ವವನ್ನು ಆಳಲು ಹೊರಟ ಪೂರ್ವದಲ್ಲಿ ಭಾರತಕ್ಕೆ ತನ್ನದೇ ಆದ ಒಂದು ರಾಷ್ಟ್ರೀಯ ಪ್ರಜ್ಞೆ ಇತ್ತು. ಆ ರಾಷ್ಟ್ರೀಯ ಪ್ರಜ್ಞೆಯ ಅರಿವಿಗೆ ಇದ್ದ ಮೊದಲ ಅಡ್ಡಿಯೇ ವಸಾಹತುಶಾಹಿ ಅನುಭವ. ಅದು ನಮ್ಮ ಲೋಕಗ್ರಹಿಕೆಯನ್ನೇ ಬದಲಿಸಿ ತನಗೆ ಬೇಕಾದಂತೆ ರೂಪಿಸಿತು. ಒಂದು ವೇಳೆ ವಸಾಹತುಶಾಹಿಯ ಹಿಡಿತಕ್ಕೆ ಈ ದೇಶ ಸಿಕ್ಕಿಹಾಕಿಕೊಳ್ಳದಿದ್ದರೆ ಇಲ್ಲಿನ ರಾಷ್ಟ್ರೀಯತೆಯ ಕುರಿತ ಚಿಂತನೆಯೇ ಬದಲಾಗಿರುತಿತ್ತು. ವಸಾಹತುಶಾಹಿಯು ಹುಟ್ಟುಹಾಕಿದ ಆ ಸ್ಮೃತಿಯಿಂದ ಬಿಡುಗಡೆಗೊಳ್ಳದ ಹೊರತು ಈ ಕುರಿತ ನಮ್ಮ ಗ್ರಹಿಕೆ ಸೂಕ್ಷ್ಮಗೊಳ್ಳದು. ವಸಾಹತೋತ್ತರ ಚಿಂತಕ ಫ್ರಾಂಜ್ ಫ್ಯಾನನ್ ಈ ಕುರಿತು ಹೀಗೆನ್ನುತ್ತಾನೆ. "ಅಧೀನ ರಾಷ್ಟ್ರಗಳ 'ಸಾಂಸ್ಕೃತಿಕ ವಿನಾಶ'ವನ್ನು ವ್ಯವಸ್ಥಿತವಾಗಿ ಕಾರ್ಯಗತಗೊಳಿಸುವ ಒಂದು ಘಟ್ಟದಲ್ಲಿ ವಸಾಹತುಶಾಹಿಯು ಅಧೀನ ರಾಷ್ಟ್ರದ ಜನತೆ ತಮ್ಮ ರಾಷ್ಟ್ರತ್ವದ ಗ್ರಹಿಕೆ ಪೊಳ್ಳೆಂದು, ತಾವು ಸಂಸ್ಕೃತಿ ಎಂದು ನಂಬಿದ್ದುದು ಕೇವಲ – ಪ್ರಾಣಿ ಸಹಜ ಪ್ರವೃತ್ತಿಯೆಂದು ಮತ್ತು ಜೀವ ವಿಜ್ಞಾನದ ನೆಲೆಯಲ್ಲಿಯೂ ತಮ್ಮ ದೈಹಿಕ ಮತ್ತು ಮಾನಸಿಕ ಸ್ವರೂಪವು ತುಂಬಾ ಕೆಳ ಮಟ್ಟದ್ದೆಂದೂ ನಂಬುವಂತೆ ಶ್ರಮಿಸುತ್ತದೆ. ಅನಂತರ ಅದನ್ನು ಸಂಪೂರ್ಣವಾಗಿ ನಾಶಗೊಳಿಸುತ್ತದೆ."[೨೯] ತನ್ನ ಅಧೀನ ರಾಷ್ಟ್ರದ ನಂಬಿಕೆಯನ್ನು ಪೊಳ್ಳು ಮಾಡುವುದರಲ್ಲೇ ವಸಾಹತು ಪ್ರಭುತ್ವದ ಗೆಲುವು ಇರುವುದು ಎನ್ನುವುದನ್ನು ಫ್ಯಾನನ್ ಮನಗಾಣುತ್ತಾನೆ. ಗತದ ನೆನಪುಗಳ ಮೂಲಕ ವಸಾಹತುಶಾಹಿಯಿಂದ ಉಂಟಾದ ವಿಸ್ಮೃತಿಯಿಂದ ಹೊರಬರಲು ನಿರಂತರವಾಗಿ ಯತ್ನಿಸುತ್ತಿರುತ್ತದೆ. ಆ ಮೂಲಕ ತನ್ನ ಸ್ವಪ್ರಜ್ಞೆಯ ಅರಿವನ್ನು ಪಡೆಯುತ್ತದೆ. ಹೀಗೆ ಕಂಡುಕೊಳ್ಳುವ ಸ್ವಪ್ರಜ್ಞೆಗೆ ತನ್ನ ಭಾಷೆಯೋ, ಜನಾಂಗೀಯತೆಯೋ ಕಾರಣವಾಗಬೇಕಾಗಿಲ್ಲ. ಏಕೆಂದರೆ ಹೀಗೆ ಕಂಡುಕೊಂಡ ರಾಷ್ಟ್ರೀಯತೆಯನ್ನು ನಾವು ಸತತವಾಗಿ ಪುನರ್ ಉತ್ಪಾದಿಸುತ್ತಾ, ನಿರೂಪಿಸುತ್ತಾ ಇರಬೇಕಾಗುತ್ತವೆ. ವರ್ತಮಾನದ

ಸನ್ನಿವೇಶಕ್ಕೆ ಸಾಮೂಹಿಕ ಪ್ರತಿಕ್ರಿಯೆಯ ರೂಪದಲ್ಲಿ ಕಾಣಿಸುತ್ತದೆ. ಒಂದು ಕಾಲದ ಸಾಂಸ್ಕೃತಿಕ, ರಾಜಕೀಯ ಒತ್ತಡಗಳಿಗೆ ಅನುಗುಣವಾಗಿ ಕಟ್ಟಿಕೊಂಡ ನಿರೂಪಣೆಗಳಿಂದ ಬಿಡುಗಡೆ ಪಡೆಯುತ್ತಲೇ ಮತ್ತೆ ಈ ಕಾಲಕ್ಕೆ ಪ್ರಸ್ತುತವಾಗುವಂತೆ ನಿರೂಪಿಸುತ್ತೇವೆ.

ರಾಷ್ಟ್ರ ಪರಿಕಲ್ಪನೆಯ ತಾತ್ವಿಕ ಸ್ವರೂಪವನ್ನು ಕನ್ನಡ ಕವಿತೆಗಳ ವಿಶ್ಲೇಷಣೆಯ ಮೂಲಕ ವಿವರಿಸುವ ಪ್ರಯತ್ನ ಮುಂದಿನ ಅಧ್ಯಾಯಗಳಲ್ಲಿ ನಡೆದಿದೆ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿದ 'ರಾಷ್ಟ್ರಪಿತ' ಎಂದೇ ಕರೆಸಿಕೊಂಡ ಮಹಾತ್ಮ ಗಾಂಧೀಜಿಯವರು ಭಾರತೀಯ ರಾಷ್ಟ್ರೀಯತೆಯನ್ನು ಅದರ ಸೂಕ್ಷ್ಮವನ್ನು ಅರಿತು ವಿವರಿಸುತ್ತಾರೆ. ಈ ಮಾತು ಭಾರತೀಯ ರಾಷ್ಟ್ರೀಯತೆಯನ್ನು ಅರ್ಥೈಸುವಲ್ಲಿ ಹೆಚ್ಚು ಸಮರ್ಥವಾಗಿದೆ. "ನನ್ನ ಪಾಲಿಗೆ ರಾಷ್ಟ್ರಭಕ್ತಿ ಎಂದರೆ ಮಾನವೀಯತೆಯೇ. ಅದು ಪ್ರತ್ಯೇಕವಾದುದಲ್ಲ. ನಾನು ಮನುಷ್ಯ, ಮಾನವೀಯ ವ್ಯಕ್ತಿ. ಆದ್ದರಿಂದಲೇ ರಾಷ್ಟ್ರಪ್ರೇಮಿ. ಭಾರತದ ಸೇವೆ ಮಾಡಲು ನಾನೇನೂ ಇಂಗ್ಲೆಂಡನ್ನೊ, ಜರ್ಮನಿಯನ್ನೊ ಘಾಸಿ ಮಾಡುವುದಿಲ್ಲ. ನನ್ನ ರಾಷ್ಟ್ರೀಯತೆ ಯಾವುದೇ ಪಂಥ ಭೇದವಿಲ್ಲದೆ ಭೂಮಂಡಲದ ಎಲ್ಲ ರಾಷ್ಟ್ರಗಳನ್ನು ಒಳಗೊಂಡಿದೆ...... ಅದು ಕೇಡಿನ ರಾಷ್ಟ್ರೀಯತೆ ಅಲ್ಲ. ಕೆಡುಕೇ ಆಗಿರುವ ಆಧುನಿಕ ರಾಷ್ಟ್ರಗಳ ಕೇಡು ಎಂದರೆ ಸಂಕುಚಿತತೆ, ಸ್ವಾರ್ಥ ಮತ್ತು ಪ್ರತ್ಯೇಕತೆ. ಪ್ರತಿಯೊಂದು ರಾಷ್ಟ್ರವೂ ಇನ್ನೊಂದನ್ನು ತುಳಿದೇ ಮುಂದೆ ಬರಲು ಬಯಸುತ್ತದೆ. ನಾನು ಆಶಿಸುತ್ತೇನೆ. ಭಾರತದ ರಾಷ್ಟ್ರೀಯತೆ ಬೇರೆ ದಾರಿ ತುಳಿದಿದೆ. ಎಲ್ಲಾ ಮನುಕುಲದ ಲಾಭ ಮತ್ತು ಸೇವೆಗಾಗಿ ಸಂಪೂರ್ಣ ವಿಕಸನಗೊಳ್ಳುವ ಹಾದಿಯನ್ನು ತುಳಿದಿದೆ"[೩೦] ಎನ್ನುತ್ತಾರೆ. ಗಾಂಧೀ ವ್ಯಕ್ತಪಡಿಸಿದ ಈ ಅಭಿಪ್ರಾಯದಂತೆ ಭಾರತೀಯ ರಾಷ್ಟ್ರೀಯತೆಯು ಯಾರನ್ನೂ ತುಳಿಯದೆ ಎಲ್ಲರನ್ನೂ ಒಳಗೊಳ್ಳುವ ಸ್ವರೂಪದಲ್ಲಿದೆ. ಇದು ಗಾಂಧಿ ಕಂಡ ಭಾರತೀಯ ರಾಷ್ಟ್ರೀಯತೆಯ ಸ್ವರೂಪವೂ ಹೌದು.

'ಭಾರತೀಯ ರಾಷ್ಟ್ರೀಯತೆಯು ಸಮುದಾಯಧಾರಿತವಾದುದಲ್ಲ. ಭಾರತೀಯ ರಾಷ್ಟ್ರೀಯತೆ ಬಹುತ್ವವನ್ನು ನಿರಾಕರಿಸುವ, ಇತರರನ್ನು ಅಸಹನೆಯಿಂದ ನೋಡುವ ನೆಲೆಗಟ್ಟಿನದ್ದು. ಕುಲೀನ ವರ್ಗಗಳ ಹಿತಾಸಕ್ತಿಗಳು ಕ್ರಿಯಾಶೀಲವಾಗಿರುವ, ಭಿನ್ನಮತ–ವೈವಿಧ್ಯತೆಯನ್ನು ಸಹಿಸದ ಹಲವುತನವನ್ನು ಒಳಗೊಳ್ಳದ ಏಕರೂಪಿ ಆಗ್ರಹವಾಗಿದೆ' ಎಂಬ ಟೀಕೆಗಳಿಗೆ ಗಾಂಧೀಜಿಯ ಈ ಮೇಲಿನ ಮಾತು ಉತ್ತರವಾಗುತ್ತದೆ. ನಮ್ಮ

ರಾಜ್ಯಗಳ ಮೇಲಿನ ಕೇಂದ್ರದ ನಿಯಂತ್ರಣವನ್ನೇ, ತಪ್ಪಾಗಿ ಊಹಿಸಿ ಅದನ್ನು ಬಹುತ್ವವನ್ನು ನಿರಾಕರಿಸುವ ಅಥವಾ ಅಸಹನೆಯಿಂದ ನೋಡುವ ಚಿಂತನಾ ನೆಲೆಗಟ್ಟಿದು ಎಂದು ವ್ಯಾಖ್ಯಾನಿಸುವುದು ಸರಿಯಲ್ಲ. ಒಟ್ಟಿನಲ್ಲಿ ಭಾರತೀಯ ರಾಷ್ಟ್ರ ಪರಿಕಲ್ಪನೆ ವಿಶಿಷ್ಟವೂ, ಅನನ್ಯವೂ ಹೌದು. ಆಧುನಿಕ ಸಂದರ್ಭದಲ್ಲಿ ಪಶ್ಚಿಮದ ಪ್ರಭುತ್ವ ಮಾದರಿಯ ರಾಷ್ಟ್ರ ವ್ಯವಸ್ಥೆಗೆ ಭಿನ್ನವಾಗಿ ತನ್ನ ನೆಲೆಯನ್ನು ಉಳಿಸಿಕೊಂಡಿದೆ. ಈ ಗ್ರಹಿಕೆಯನ್ನು ಪ್ರಸ್ತುತ ಅಧ್ಯಯನಕ್ಕೆ ಒಂದು ಮಾರ್ಗ ಸೂಚಕ ತಾತ್ವಿಕತೆಯಾಗಿ ಬಳಸಿಕೊಳ್ಳಲಾಗಿದೆ.

## ಕೊನೆ ಟಿಪ್ಪಣಿಗಳು

೧. ಡಾ. ನಿತ್ಯಾನಂದ ಶೆಟ್ಟಿ, ೨೦೦೬, ಕನ್ನಡ ಸಂಸ್ಕೃತಿ ವಾಙ್ಮಯ, ಪಿಎಚ್.ಡಿ ಮಹಾಪ್ರಬಂಧ, ಮಂಗಳೂರು ವಿ.ವಿ. (ಅಪ್ರಕಟಿತ), ಪುಟ ೯೫

೨. ಡಾ.ತಾರಕೇಶ್ವರ ವಿ.ಬಿ. ೨೦೦೫, ಕುವೆಂಪು ಒಂದು ಪುನರ್‌ನ್ವೇಷಣೆ (ಸಂ) ಡಿ. ಎಸ್. ನಾಗಭೂಷಣ ಪುಟ -೨೨೧

೩. ಡಾ. ಗೋವಿಂದ ರಾಜು ಸಿ.ಆರ್. ೧೯೯೮, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ ಪುಟ- ೧೪೭

೪. ಮಂಗಳವೇಡು ಶ್ರೀನಿವಾಸ ರಾವ್,ಉದ್ಧೃತ: ಡಾ. ಗೋವಿಂದ ರಾಜು ಸಿ.ಆರ್. ೧೯೯೮, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ ಪುಟ-೨೨

೫. ಡಾ. ನಾರಾಯಣ ಕೆ.ವಿ ೨೦೧೦, ತೊಂಡುಮೇವು - ಕಂತೆ ಏಳು ಪುಟ -೨೮೩

೬. ಕುವೆಂಪು:೧೯೫೭ ಸಂಸ್ಕೃತಿ ಕರ್ನಾಟಕ,ಕುವೆಂಪು ಸಮಗ್ರ ಗದ್ಯ ಸಂ- ೨,(ಸಂ)ಡಾ.ಕೆ.ಸಿ.ಶಿವಾರೆಡ್ಡಿ,ಪುಟ-೧೪೩

೭. ಡಾ. ನಾರಾಯಣ ಕೆ.ವಿ ೨೦೧೦, ತೊಂಡುಮೇವು - ಕಂತೆ ಏಳು ಪುಟ - ೨೪೦

೮. ರಾಘವೇಂದ್ರ ರಾವ್ ಕೆ.೨೦೦೫,ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು(ಅನು)ಆರ್ಯ ಪುಟ-೦೯

೯. ಡಾ. ನಾರಾಯಣ ಕೆ.ವಿ ೨೦೧೦, ತೊಂಡುಮೇವು - ಕಂತೆ ಏಳು ಪುಟ ೨೪೪

೧೦. ಡಾ. ಶಿವರಾಮ ಶೆಟ್ಟಿ ಬಿ. ೨೦೦೪, 'ಮಲೆಗಳಲ್ಲಿ ಮದುಮಗಳು ಪ್ರದೇಶ - ದೇಶ', ರಾಷ್ಟ್ರ ನಿರ್ವಚನ - ಕುವೆಂಪು ವಾಙ್ಮಯ, (ಸಂ) ನಿತ್ಯಾನಂದ ಶೆಟ್ಟಿ ಪುಟ - ೧೦೦

೧೧. ಡಾ.ನಾಗರಾಜ್ ಡಿ.ಆರ್. ೨೦೦೨, ಸಂಸ್ಕೃತಿ ಕಥನ, ಪುಟ -೨೭೯

೧೨. ರವೀಂದ್ರನಾಥ ಠಾಗೋರ್ ೧೯೧೭, ನ್ಯಾಷನಲಿಸಂ, ಪುಟ-೮೨

೧೩. ಆ್ಯಂಡರ್‌ಸನ್ ಬೆನೆಡಿಕ್ಟ್, ೧೯೮೩, ಇಮ್ಯಾಜಿನ್ಡ್ ಕಮ್ಯುನಿಟೀಸ್, ಪುಟ -೦೫

೧೪. ಡಾ. ರಾಜಾರಾಮ ತೋಳ್ಪಾಡಿ, ೧೯೯೮, ಸ್ವತಂತ್ರ ಭಾರತದ ರಾಷ್ಟ್ರೀಯ ಪರಿಕಲ್ಪನೆ, ಉದಯವಾಣಿ ದಿನಪತ್ರಿಕೆ, ಪುಟ-೦೬

೧೫. ಡಾ. ತಾರಕೇಶ್ವರ ವಿ.ಬಿ ೨೦೦೪ 'ವಿಚಾರ ಕ್ರಾಂತಿಗೆ ಆಹ್ವಾನ: ರಾಷ್ಟ್ರ , ಭಾಷೆ ಮತ್ತು ಪರಧಿಯ ಗುರುತುಗಳು', ರಾಷ್ಟ್ರ ನಿರ್ವಚನ ಕುವೆಂಪು ವಾಙ್ಮಯ, (ಸಂ) ನಿತ್ಯಾನಂದ ಶೆಟ್ಟಿ ಪುಟ- ೨೧

೧೬. ಮನು ಚಕ್ರವರ್ತಿ ಎನ್. ೨೦೧೦, ಮಾಧ್ಯಮ ಮಾರ್ಗ, ಪುಟ - ૩೭

೧೭. ಬದ್ರೀ ಶಾಹಾ ಟುಲಫರಿಯಾ ೨೦೦೮ , ದೈಶಿಕಶಾಸ್ತ್ರ (ಅನು) ಸುರೇಶ್ ಕುಮಾರ್. ಪುಟ -೧೯

೧೮. ಹರ್ಡೇಕರ್ ಮಂಜಪ್ಪ,೧೯೬೬,'ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ್ ಮಂಜಪ್ಪ' (ಸಂ)ಗ.ಸ.ಹಾಲಪ್ಪ ಪುಟ-೧೪೮

೧೯. ಡಾ.ನಾಗರಾಜ್ ಡಿ.ಆರ್. ೧೯೯೮, ರಾಷ್ಟ್ರೀಯತೆ ಪರಿಕಲ್ಪನೆ; ಕೆಲವು ಟಿಪ್ಪಣಿಗಳು , ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ (ಸಂ) ಜಿ.ಎಸ್.ಶಿವರುದ್ರಪ್ಪ ಪುಟ - ೦೫

೨೦. ಡಾ.ರಾಜೇಂದ್ರ ಚೆನ್ನಿ, ೧೯೯೮, ' ಕಥಾ ಸಾಹಿತ್ಯದಲ್ಲಿ ರಾಷ್ಟ್ರೀಯತೆಯ ಆದರ್ಶ ಮತ್ತು ಸಮಕಾಲೀನ ವಾಸ್ತವ, ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ (ಸಂ) ಜಿ.ಎಸ್. ಶಿವರುದ್ರಪ್ಪ

೨೧. ಡಾ.ಗಿರೀಶ್ ಭಟ್ ಅಜಕ್ಕಳ, ೨೦೧೨, ಭಾರತೀಯ ರಾಷ್ಟ್ರೀಯವಾದ ಅಪಾಯಕಾರಿಯೆ? , ಚಿಂತನ ಬಯಲು (ಸಂ) ರೇಷ್ಮಾ ಜಿ.ಭಟ್ ಪುಟ –೭೫

೨೨. ಡಾ.ನಾಗರಾಜ್ ಡಿ.ಆರ್. ೨೦೦೨, ಸಂಸ್ಕೃತಿ ಕಥನ, ಪುಟ – ೨೭೮

೨೩. ಡಾ.ಅನಂತಮೂರ್ತಿ ಯು.ಆರ್.,೧೯೮೮,ನಮ್ಮ ರಾಷ್ಟ್ರೀಯತೆಯ ಸ್ವರೂಪ ಕುರಿತು,ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ(ಸಂ)ಜಿ.ಎಸ್.ಶಿವರುದ್ರಪ್ಪ, ಪುಟ–೧೫೬

೨೪. ಡಾ.ಕೇಶವ ಶರ್ಮ ಕೆ. ೨೦೦೮, 'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ', ಪುಟ – ೧೬೧

೨೫. ಪಾರ್ಥ ಚಟರ್ಜಿ, ಮಹಿಳಾ ಪ್ರಶ್ನೆ ಮತ್ತು ಅದರ ರಾಷ್ಟ್ರಿಯವಾದಿ ಪರಿಹಾರ, (ಅನು) ಶಿವರಾಮ ಪಡಿಕ್ಕಲ್ , ಅನಿಕೇತನ ,ಪುಟ – ೧೮

೨೬. ಡಾ.ನಿತ್ಯಾನಂದ ಬಿ.ಶೆಟ್ಟಿ, ೨೦೦೬, ಕನ್ನಡ ಸಂಸ್ಕೃತಿ ವಾಙ್ಮಯ, ಪಿಎಚ್.ಡಿ ಮಹಾಪ್ರಬಂಧ, ಮಂಗಳೂರು ವಿ.ವಿ. (ಅಪ್ರಕಟಿತ ) ಪುಟ ೮೮

೨೭. ಡಾ.ಬಾಲಗಂಗಾಧರ ಎಸ್.ಎನ್, ೨೦೧೦, ಪೂರ್ವಾವಲೋಕನ (ಅನು) ರಾಜರಾಮ ಹೆಗಡೆ, ಸದಾನಂದ ಜೆ.ಎಸ್, ಪುಟ– ೭೪

೨೮. ಎಡ್ವರ್ಡ್ ಸೈಡ್, ಉದ್ಧೃತ; ಡಾಸಿ.ಎನ್. ರಾಮಚಂದ್ರನ್, ೨೦೦೦ ವಸಾಹತೋತ್ತರ ಚಿಂತನೆ, ಪುಟ– ೫೩

೨೯. ಪ್ರಾಂಜ್ ಫ್ಯಾನನ್, ಉದ್ಧೃತ; ಡಾಸಿ.ಎನ್. ರಾಮಚಂದ್ರನ್, ೨೦೦೦ ವಸಾಹತೋತ್ತರ ಚಿಂತನೆ. ಪುಟ–೩೮

೩೦. ಪಾಸ್ಕಲ್ ಆಲೆನ್ ನಜರತ್, ೨೦೦೭, ಅಮೋಘ ನಾಯಕ ಗಾಂಧೀ (ಅನು) ನೀಲತ್ತಹಳ್ಳಿ ಕಸ್ತೂರಿ ಪುಟ – ೩೭

# ೩.ಕನ್ನಡ ಕವಿತೆಗಳು ಕಟ್ಟುವ 'ನಾಡು'ಪರಿಕಲ್ಪನೆ

# ಅಧ್ಯಾಯ-೩

# ಕನ್ನಡ ಕವಿತೆ ಕಟ್ಟುವ 'ನಾಡು' ಪರಿಕಲ್ಪನೆ

## ೩.೧ ಪ್ರಸ್ತಾವನೆ:

ಕನ್ನಡದ ಸಂದರ್ಭದಲ್ಲಿ 'ನಾಡು' ಎನ್ನುವುದು ಕನ್ನಡ ಭಾಷಿಕರಲ್ಲಿ ಉಂಟಾದ ಕನ್ನಡ ಭಾಷೆಯ ಕುರಿತ ಸ್ವ-ಜಾಗೃತಿಯ ಮೂರ್ತರೂಪ ಎಂದು ಭಾವಿಸಬಹುದು. ಏಕೆಂದರೆ ವಸಾಹತುಶಾಹಿಯ ಪ್ರವೇಶದಿಂದಾಗಿ ಭಾರತೀಯರ ರಾಜಕೀಯ-ಸಾಂಸ್ಕೃತಿಕ ಬದುಕಿನಲ್ಲಿ ಬಹಳ ದೊಡ್ಡ ಪಲ್ಲಟ ಉಂಟಾಗಿತ್ತು. ವ್ಯಾಪಾರದ ಉದ್ದೇಶದಿಂದ ಒಳಪ್ರವೇಶಿಸಿದ ಬ್ರಿಟಿಷರು ಕ್ರಮೇಣ ಇಡೀ ದೇಶವನ್ನೇ ತಮ್ಮ ಆಡಳಿತದ ಹಿಡಿತಕ್ಕೆ ತೆಗೆದುಕೊಂಡಿದ್ದರು. ಆಡಳಿತಾತ್ಮಕವಾಗಿ ಬ್ರಿಟಿಷರು ಮಾಡಿದ ಈ ಮಧ್ಯಪ್ರವೇಶವು ಭಾರತೀಯ ಸಂದರ್ಭದಲ್ಲಿ ಗೊಂದಲದ ವಾತಾವರಣವನ್ನು ಸೃಷ್ಟಿಸಿತ್ತು. ಈ ಮೊದಲು ಹಲವು ರಾಜಮನೆತನಗಳಿಂದ ಆಳಿಸಿಕೊಳ್ಳುತ್ತಿದ್ದ ಭಾರತೀಯರಿಗೆ ಹೀಗೆ ದೇಶವೆಲ್ಲಾ ವ್ಯಾಪಿಸಿದ ಒಂದು ಆಡಳಿತದ ವ್ಯವಸ್ಥೆಯು ಕೆಲವೊಂದು ಅನುಕೂಲವನ್ನು ಮಾಡಿಕೊಟ್ಟಿದ್ದರೂ ಕ್ರಮೇಣ ಅನ್ಯರ ಆಳ್ವಿಕೆ ಎಂಬ ಭಾವನೆಯ ಕಾರಣದಿಂದ ಬ್ರಿಟಿಷ್ ವಿರೋಧಿ ಹೋರಾಟಕ್ಕೆ ಕಾವು ತುಂಬಿತ್ತು.

ಇದೇ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ಆಳುವ ಉದ್ದೇಶಕ್ಕಾಗಿ ಒಡೆದು ಆಳುವ ನೀತಿಯನ್ನು (Devide and rule- policy) ಅಳವಡಿಸಿಕೊಂಡರು. ತಮ್ಮ ಹಿಡಿತಕ್ಕೆ ಸಿಕ್ಕಿದ ಭೂಭಾಗವನ್ನೆಲ್ಲ ತಮ್ಮ ಅನುಕೂಲಕ್ಕೆ ತಕ್ಕಂತೆ ಆಡಳಿತ ಘಟಕಗಳಾಗಿ ವಿಂಗಡಿಸುತ್ತಿದ್ದರು. ಈ ರೀತಿ ವಿಂಗಡನೆ ಮಾಡಿದ ಸಂದರ್ಭದಲ್ಲಿ ಕನ್ನಡವನ್ನು ಮಾತನಾಡುತ್ತಿದ್ದ ಪ್ರದೇಶಗಳನ್ನು ಐದು ಪ್ರಮುಖ ಘಟಕಗಳಲ್ಲಿ ಸೇರಿಸಿದ್ದರು. ಭಾರತದಿಂದ ಬ್ರಿಟಿಷರನ್ನು ಓಡಿಸಿ ರಾಜಕೀಯ ಸ್ವಾತಂತ್ರ್ಯವನ್ನು ಪಡೆಯುವುದಕ್ಕಾಗಿ ನಡೆಯುತ್ತಿದ್ದ ಹೋರಾಟ ಪ್ರಾದೇಶಿಕವಾಗಿ ಇನ್ನೂ ಒಂದು ರೀತಿಯ ಹೊಸ ಅರಿವನ್ನು ಮೂಡಿಸಿತು. ಕನ್ನಡವನ್ನು ಮಾತನಾಡುವ ಭೂಪ್ರದೇಶ ಛಿದ್ರವಾಗಿದೆ ಎಂಬ ಅರಿವು ಆಗ ಮೂಡಿತು. ಹೀಗಾಗಿ ರಾಷ್ಟ್ರೀಯ ಮಟ್ಟದಲ್ಲಿ ಭಾರತವನ್ನು ಬ್ರಿಟಿಷರ ಕೈಯಿಂದ ಬಿಡಿಸಿಕೊಳ್ಳಲು ನಡೆಯುತ್ತಿದ್ದ ಹೋರಾಟದ ಜೊತೆ ಜೊತೆಯಲ್ಲೇ ವಿವಿಧ ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದ ಕನ್ನಡ ಮಾತನಾಡುವ ಪ್ರದೇಶಗಳನ್ನು ಮುಕ್ತಗೊಳಿಸಿ ಏಕ ಘಟಕವಾಗಿಸಬೇಕು ಎಂಬ ಚಿಂತನೆ ಮತ್ತು ಹೋರಾಟವು

ಆರಂಭವಾಗಿತ್ತು. ಈ ಹೋರಾಟವನ್ನು ಕರ್ನಾಟಕ ಏಕೀಕರಣ ಹೋರಾಟ ಎಂದು ಇತಿಹಾಸ ಗುರುತಿಸಿದೆ. ಛಿದ್ರವಾಗಿರುವ ನಾಡಿನ ಬೇರೆ ಬೇರೆ ಭೂಭಾಗಗಳನ್ನು ರಾಜಕೀಯವಾಗಿ ಒಂದುಗೂಡಿಸುವುದೇ ಇಲ್ಲಿನ ಮುಖ್ಯ ಉದ್ದೇಶವಾಗಿತ್ತು. ಈ ಉದ್ದೇಶವನ್ನು ಸಾಧಿಸುವುದಕ್ಕಾಗಿ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ವೂ ಸೇರಿದಂತೆ ಹಲವು ಸಂಘಗಳು, 'ಪ್ರಬುದ್ಧ ಕರ್ನಾಟಕ'ದಂತಹ ಪತ್ರಿಕೆಗಳು ಹಲವು ರೀತಿಯಿಂದ ಕಾರ್ಯ ಪ್ರವೃತ್ತವಾಗಿದ್ದವು. ಇದೆಲ್ಲದರ ಪರಿಣಾಮವಾಗಿ ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡಿತು.

ಪ್ರಸ್ತುತ ನನ್ನ ಅಧ್ಯಯನದ ಈ ಅಧ್ಯಾಯದಲ್ಲಿ ಏಕೀಕರಣ ಚಳುವಳಿಯ ಒಂದು ಭಾಗವಾಗಿ ಜೊತೆ ಜೊತೆಯಲ್ಲೇ ನಡೆದ ಕನ್ನಡನಾಡು-ನುಡಿಯ ಕುರಿತ ಚಿಂತನೆಗಳನ್ನು ಪರಿಶೀಲಿಸಿ, ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ. ಈ ಮೂವರು ಕವಿಗಳ ಕವಿತೆಗಳಲ್ಲಿ ನಾಡು-ನುಡಿಯ ಕುರಿತು ಅಭಿವ್ಯಕ್ತವಾದ ವಿಚಾರಗಳನ್ನು ಅಧ್ಯಯನ ನಡೆಸುವುದಾಗಿದೆ. ಇದಕ್ಕಾಗಿ ಈ ಮೂರು ಕವಿಗಳ ಕವಿತೆಗಳಲ್ಲಿ ಕನ್ನಡ ನಾಡಿನ ಕುರಿತು, ಇಲ್ಲಿ ನಡೆಯುತ್ತಿದ್ದ ಏಕೀಕರಣ ಚಳವಳಿಯ ಕುರಿತು ಹಾಗೂ ಭಾರತದ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದೊಂದಿಗೆ ಮುನ್ನಡೆದು ಒಂದು ಸ್ವತಂತ್ರ ನಾಡಾಗಿ ರೂಪುತಾಳಬೇಕಾದ ವಿಷಯದಲ್ಲಿ ನಡೆಸಲಾದ ಚಿಂತನೆಗಳನ್ನು ಈ ಅಧ್ಯಾಯದಲ್ಲಿ ದಾಖಲಿಸಲಾಗುವುದು.

ಕರ್ನಾಟಕ ಏಕೀಕರಣದ ಹಿಂದಿನ ಚಿಂತನೆಯನ್ನು ಡಾ. ಕೆ.ವಿ.ನಾರಾಯಣ ಅವರು "ಏಕೀಕರಣದ ತಾತ್ವಿಕತೆಯಲ್ಲಿ ಕನ್ನಡಿಗರ ಒಗ್ಗೂಡುವಿಕೆಯ ಜೊತೆಗೆ ಭೂಪ್ರದೇಶದ ಕಲ್ಪನೆಯೂ ಸೇರಿಕೊಂಡಿತ್ತು. ಹಳೆಯ ಕಾವ್ಯಗಳನ್ನು ಚಾರಿತ್ರಿಕ ದಾಖಲೆಗಳನ್ನು ಉಲ್ಲೇಖಿಸಿ ಕನ್ನಡ ನಾಡಿನ ವ್ಯಾಪ್ತಿ ಎಷ್ಟಿತ್ತು ಎಂಬುದನ್ನು ಮೇಲಿಂದ ಮೇಲೆ ಜನರ ಗಮನಕ್ಕೆ ತರುವ ಯತ್ನಗಳು ನಡೆದಿವೆ. ಈ ಭೂಪ್ರದೇಶ ಮತ್ತು ಚಾರಿತ್ರಿಕವಾಗಿ ಕನ್ನಡದ ವ್ಯಾಪ್ತಿಯ ಪ್ರದೇಶ ಎಂದು ಹೇಳಿದರೂ, ವಾಸ್ತವವಾಗಿ ಅದು ಕನ್ನಡದ ಅರಸರ ಆಳ್ವಿಕೆಯ ಪ್ರದೇಶಗಳಾಗಿದ್ದವು. ಅಂದರೆ ಅಲ್ಲಿ ಕನ್ನಡ ಮತ್ತು ಇತರ ಭಾಷೆಗಳನ್ನಾಡುವ ಜನರು ವಾಸಿಸುತ್ತಿದ್ದರು. ಕೇವಲ ಕನ್ನಡವನ್ನಷ್ಟೇ ಮಾತನಾಡುವ ಸಮಾಜಗಳನ್ನಾಗಲೀ ಅವುಗಳು ನೆಲೆಸಿರುವ ನಿರ್ದಿಷ್ಟ ಭೂಪ್ರದೇಶಗಳನ್ನಾಗಲೀ ಕಲ್ಪಿಸುವುದು ಕಷ್ಟ. ೨೦ನೇ ಶತಮಾನದ ನಡುಭಾಗದಲ್ಲಂತೂ ಇದು ಇನ್ನಷ್ಟು

ಇಕ್ಕಟ್ಟುಗಳನ್ನು ರೂಪಿಸುವಂತಿತ್ತು. ಹೀಗಾಗಿ ಒಂದು ಹೊಸ ರಾಜ್ಯದ ನಿರ್ಮಿತಿಯಲ್ಲಿ ಕನ್ನಡ ಮಾತನಾಡುವವರು ನಿರ್ಮಿತವಾಗಿ, ಅವರ ಚಾರಿತ್ರಿಕ ವಿಸ್ತಾರಗಳು ಭೌಗೋಳಿಕವಾಗಿ ನೆಲೆಗೊಂಡ ಪ್ರದೇಶಗಳನ್ನು ಒಗ್ಗೂಡಿಸಬೇಕೆಂಬ ಆಸೆಯೇ ಏಕೀಕರಣದ ಹಿಂದಿನ ಒತ್ತಡವಾಗಿತ್ತು"[7] ಎನ್ನುತ್ತಾರೆ.

ಈ ಅಪೇಕ್ಷೆಯನ್ನು ರಾಜಕೀಯವಾಗಿ ಏಕೀಕರಣ ಚಳವಳಿಯು ಸಾಧಿಸುವ ಪ್ರಯತ್ನ ಮಾಡಿದರೆ ಸಾಂಸ್ಕೃತಿಕವಾಗಿ ಇಡೀ ಹೋರಾಟಕ್ಕೆ ಜೀವ ತುಂಬುವ ಕೆಲಸವನ್ನು ಕನ್ನಡದ ಕವಿಗಳು ಮಾಡಿದ್ದಾರೆ. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ.ಯವರು ಕನ್ನಡ ನುಡಿ, ಕನ್ನಡ ನಾಡನ್ನೂ ಕುರಿತು ಉತ್ಕಟವಾಗಿ ಹಾಡುತ್ತಾರೆ. ನುಡಿಯ ಮೂಲಕ ನಾಡನ್ನು ಕಟ್ಟುತ್ತಾರೆ. ನಾಡನ್ನು ಕೇವಲ ಅದರ ಭೌಗೋಳಿಕತೆಯ ಸ್ತರದಲ್ಲಿ ಮಾತ್ರ ಕಲ್ಪಿಸಿಕೊಳ್ಳದೆ, ಅದನ್ನು ಒಂದು ಸಾಂಸ್ಕೃತಿಕ ನೆಲೆಯ ಸ್ವರೂಪಕ್ಕೆ ವಿಸ್ತರಿಸಿ ಅಣಿಗೊಳಿಸಿದವರು ಕವಿಗಳು. ನಾಡನ್ನು ಸಾಂಸ್ಕೃತಿಕ ಅವಯವಗಳೊಂದಿಗೆ ಬಲಿಷ್ಠಗೊಳಿಸಿದರು. ಹಾಗಾಗಿ ಕನ್ನಡ ಕವಿತೆಗಳು ಕಟ್ಟುವ ನಾಡಿನ ಚಿಂತನೆಗಳನ್ನು ನೋಡಿದಾಗ ಅದು ಕೇವಲ ನಾಡಿನ, ಬರಿಯ ಒಂದು ಭಾಷೆಯ, ಅದರ ಕಲೆ – ವಾಸ್ತುಶಿಲ್ಪಗಳ ಅದರ ಇತಿಹಾಸದ ಚಿಂತನೆಗಳಷ್ಟೇ ಆಗದೆ ಅದು ವಿಸ್ತಾರವಾದ ಆಯಾಮವನ್ನು ಪಡೆದಿರುವುದನ್ನು ನೋಡಬಹುದಾಗಿದೆ.

'ವಂಗಭಂಗ'(ಬಂಗಾಳ ವಿಭಜನೆ)ದಿಂದಾಗಿ ಬಂಗಾಳದಲ್ಲಿ ಆರಂಭವಾದ ಭಾಷಾಧಾರಿತವಾದ ಆಂದೋಲನ ಭಾರತೀಯ ಇತಿಹಾಸದಲ್ಲೇ ಸ್ಮರಣೀಯ ಘಟನೆ. ಬ್ರಿಟಿಷರು ತಮ್ಮ ಒಡೆದು ಆಳುವ ನೀತಿಯಂತೆ ಲಾರ್ಡ್ ಕರ್ಜನ್ ಬಂಗಾಳವನ್ನು ವಿಭಜಿಸಿ ಆದೇಶ ಹೊರಡಿಸಿದ. ಈ ಆದೇಶಕ್ಕೆ ಬಂಗಾಳದಲ್ಲಿ ತೀವ್ರವಾದ ವಿರೋಧ ಕಂಡು ಬಂದಿತು. ಈ ವಿರೋಧ ಕಂಡು ಬರಲು ಕಾರಣವಾದ ಮುಖ್ಯಾಂಶ ಇಡೀ ಬಂಗಾಳವನ್ನು ಒಂದಾಗಿ ಬೆಸೆದಿದ್ದ 'ಬಂಗಾಳಿ' ಭಾಷಾ ಸಂಬಂಧ. ಇದರಿಂದಾಗಿ ಅತಿದೊಡ್ಡ ಆಂದೋಲನ ಇಲ್ಲಿ ನಡೆಯಿತು. ಈ ರೀತಿಯ 'ಭಾಷೆಯಾಧಾರಿತ' ಚಳವಳಿಯ ಪ್ರಭಾವ ಕನ್ನಡಿಗರ ಮೇಲೂ ಆಗಿದೆ. ಕನ್ನಡ ಮಾತನಾಡುವ ಪ್ರದೇಶವನ್ನು ಬೇರೆ ಬೇರೆ ಪ್ರಾಂತಗಳಲ್ಲಿ ವಿಭಜಿಸಿ ಸೇರಿಸಿದ್ದರಿಂದ ಕನ್ನಡಿಗರಿಗೂ ಕೂಡ ಇದೇ ಮಾದರಿಯ 'ಪ್ರತ್ಯೇಕತೆ'ಯ ಅನುಭವ ಆಗಿತ್ತು. ಬಂಗಾಳದಲ್ಲಿ ಉಂಟಾದ ಚಳವಳಿಯ ತೀವ್ರತೆಯಿಂದ ಬ್ರಿಟನ್ ಸರ್ಕಾರ ತನ್ನ ಆಜ್ಞೆಯನ್ನು ರದ್ದು ಪಡಿಸಿತು. ಆ ಮೂಲಕ

ಬಂಗಾಳ ರಾಜ್ಯ ಮತ್ತೆ ಅಸ್ತಿತ್ವಕ್ಕೆ ಬಂದಿತು. ಹೀಗೆ ಬಂಗಾಳ ಭಾಷಾಧಾರಿತವಾಗಿಯೇ ರೂಪುಗೊಂಡ ಮೊದಲ ರಾಜ್ಯವಾಯಿತು. ಇದರ ಪ್ರಭಾವ ಕನ್ನಡದ ಚಿಂತಕರ,ಚಳವಳಿಗಾರರ ಮೇಲೂ ಆಯಿತು ಎನ್ನಬಹುದು.

"ಕುವೆಂಪು, ಬೇಂದ್ರೆ ವಿಭಜಿತ ಕನ್ನಡ ಭೂಪ್ರದೇಶಗಳ ಭಿನ್ನ ನೆಲೆಗಳಿಂದ ಪ್ರಭಾವ ಪರಿಸರಗಳಿಂದ ಗುರುತಿಸಿಕೊಂಡವರು. ನಾಡು-ನುಡಿ ಚಿಂತನೆಗಳ ಬಗ್ಗೆ ಇವರಿಬ್ಬರಿಗೂ ಬೇರೆಯದೇ ಆದ ಚಾರಿತ್ರಿಕ ಹಿನ್ನೆಲೆ, ಭಾಷಿಕ ಒತ್ತಡಗಳು ಇದ್ದವು. ತಮ್ಮ ತಮ್ಮ ಸ್ಥಳೀಯ ವಿಶೇಷತೆಗಳನ್ನೇ ಕನ್ನಡಿಗರಿಗೆ ಮನವರಿಕೆ ಮಾಡಿಕೊಡುವುದರ ಮೂಲಕ ಕ್ರಮೇಣ 'ಅಖಂಡ ಕರ್ನಾಟಕ'ದ ದೃಷ್ಟಿ ಬೆಳೆಸಿದ ಈ ಇಬ್ಬರು ನವೋದಯ ಕಾವ್ಯ ಪರಂಪರೆಯಲ್ಲಿ ತಮ್ಮದೇ ನೆಲೆಗಳನ್ನು ಗುರುತಿಸಿಕೊಳ್ಳುತ್ತಾರೆ" [೨] ಎಂದು ಡಾ. ಸಿ.ಆರ್. ಗೋವಿಂದರಾಜು ಅವರು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಕನ್ನಡದ ಕವಿಗಳ ಪಾಲಿಗೆ ಕನ್ನಡ, ಕರ್ನಾಟಕ ಎನ್ನುವುದು ಬರಿಯ ನಾಡಲ್ಲ, ಬರಿಯ ಮಣ್ಣಲ್ಲ. ಅದು ಭೌತಿಕ ಸ್ವರೂಪಕ್ಕಷ್ಟೇ ಸೀಮಿತವಲ್ಲ. ನಾಡಿಗೆ ಹಲವು ಮುಖಗಳ ವ್ಯಕ್ತಿತ್ವ ಇದೆ ಎಂಬ ಕವಿಗಳ ಚಿಂತನೆಯ ಹಿನ್ನೆಲೆಯಿಂದ ಈ ಮೂರೂ ಕವಿಗಳ ನಾಡಿನ ಕುರಿತ ಚಿಂತನೆಯನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

**೩.೨ ಕುವೆಂಪು ಕವಿತೆಗಳಲ್ಲಿ ನಾಡಿನ ಚಿಂತನೆ:**

ಕುವೆಂಪು ಅವರ ಕರ್ನಾಟಕ ಪ್ರಜ್ಞೆ ಭಾರತಪ್ರಜ್ಞೆಯೊಳಗೆ ಸೇರಿಕೊಂಡದ್ದೇ ಆಗಿದೆ. ಅಲ್ಲಿನ ವೈರುಧ್ಯಗಳು ಹೆಚ್ಚಲ್ಲ. ಸಾಮ್ಯತೆಗಳ ಕಡೆಗೇ ಕವಿಯ ಒಲವು. " ಈ ಕರ್ನಾಟಕ ಭೌಗೋಳಿಕವಾಗಿ ಭಾರತದ ಇತರ ಪ್ರದೇಶಗಳಿಂದ ಭಿನ್ನವಾಗಿ ಕಂಡರೂ ಸಾಂಸ್ಕೃತಿಕವಾಗಿ ಅಷ್ಟೇನೂ ಭಿನ್ನವಲ್ಲ. ಅಧ್ಯಾತ್ಮಿಕವಾಗಿ ನೋಡಿದರಂತೂ ಸಂಪೂರ್ಣವಾಗಿ ಅಭಿನ್ನ. ಉಡುಗೆ-ತೊಡುಗೆ, ಉಣಿಸು, ನಡೆ-ನುಡಿಗಳಲ್ಲಿ ಪ್ರಾಂತದಿಂದ ಪ್ರಾಂತಕ್ಕೆ ಸ್ವಲ್ಪ ವ್ಯತ್ಯಾಸ ತೋರಿದರೂ ನಮ್ಮೆಲ್ಲರ ಕನಸು ಒಂದೇ, ನಮ್ಮೆಲ್ಲರ ಮನಸ್ಸು ಒಂದೇ, ನಮ್ಮೆಲ್ಲರ ಗುರಿಯೂ ಒಂದೇ. ನಾವೆಲ್ಲ ಭಾರತೀಯರು" [೩] ಎನ್ನುತ್ತಾರೆ. ಇಲ್ಲಿ ಒಡಕಿಲ್ಲ. ಕರ್ನಾಟಕ ಆಂಧ್ರಾದಿ ಪ್ರದೇಶಗಳೆಲ್ಲ ಆ ಭಾರತಿಯ ಅಂಗರೂಪಗಳು, ಅಂಶರೂಪಗಳೆಂದೇ ಗುರುತಿಸುತ್ತಾರೆ. ಯಾವ ಸ್ವರೂಪದಲ್ಲೂ ಒಡಕಿಲ್ಲದ ಐಕ್ಯ ಭಾವ ಕವಿಯಲ್ಲಿತ್ತು. ಬದುಕಿನ ವಿವಿಧ ನೆಲೆಗಳಲ್ಲಿ ಕಾಣುವ ಸಂಗತಿಗಳು ಕೂಡ ಹೇಗೆ ಐಕ್ಯ ಕಾರಣವೆಂದು ಅವರು ಹೇಳುತ್ತಾರೆ.

ಪ್ರಾದೇಶಿಕ ವೈಶಿಷ್ಟ್ಯದ ರಕ್ಷಣೆಯಿಂದ ಅಖಿಲ ಭಾರತದ ಸಮಗ್ರತೆಗಾಗಲಿ, ಐಕ್ಯತೆಗಾಗಲೀ ಯಾವುದೇ ಬಗೆಯಿಂದಲೂ ಹಾನಿಯಿಲ್ಲ ಎಂದು ಕುವೆಂಪು ಹೇಳುತ್ತಾರೆ. "...... ಈ ಪ್ರಾದೇಶಿಕ ವೈಶಿಷ್ಟ್ಯದ ರಕ್ಷಣೆಯಿಂದ ಅಖಿಲ ಭಾರತೀಯ ಐಕ್ಯತೆಗೆ ಒಂದಿನಿತೂ ವ್ಯಾಘಾತ ಒದಗುವುದಿಲ್ಲ ಎಂಬುದು ವಿಧಿತವಾಗುತ್ತದೆ. ಏಕೆಂದರೆ ಭಾಷೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿದ್ದರೂ ಬೇರೆ ಬೇರೆಯ ಪ್ರದೇಶ ಮತ್ತು ರಾಜ್ಯಗಳ ಕಲಾ ಮತ್ತು ಸಾಹಿತ್ಯಾದಿಗಳ ವಸ್ತು ಮತ್ತು ದೃಷ್ಟಿಗಳಲ್ಲಿ ಅಖಿಲ ಭಾರತೀಯವಾದ ಏಕೈಕ ಮೂಲ ಸಂಸ್ಕೃತಿಯೇ ಶೇಕಡಾ ತೊಂಬತ್ತೈದಕ್ಕಿಂತಲೂ ಹೆಚ್ಚಾಗಿ ಸರ್ವಸಾಧಾರಣವಾಗಿದೆ. ಆ ಮೂಲ ಸಂಸ್ಕೃತಿಯ ವಜ್ರ ಬೆಸುಗೆ ನಮ್ಮ ಒಗ್ಗಟ್ಟನ್ನು ಎಂದೆಂದಿಗೂ ಒಡೆಯಲು ಬಿಡುವುದಿಲ್ಲ. ಅಷ್ಟೇ ಅಲ್ಲ, ನಮಗೀಗ ಒದಗಿರುವ ರಾಜಕೀಯ ಅಖಂಡತೆಗೂ ಐಕ್ಯತೆಗೂ ಮೂಲ ಕಾರಣವೂ ಆ ಅಖಿಲ ಭಾರತೀಯವಾಗಿರುವ ಸಂಸ್ಕೃತಿಯ ಮೂಲದಲ್ಲಿಯೇ ಇದೆ"[೬] ಎನ್ನುತ್ತಾರೆ. ಕನ್ನಡ ಭಾಷೆ, ಸಂಸ್ಕೃತಿಯನ್ನು ಕುರಿತು ಚಿಂತಿಸುವುದೆಂದರೆ ಅದು ವಿಶಾಲ ನೆಲೆಯಲ್ಲಿ ಭಾರತೀಯವಾದುದರ ಚಿಂತನೆಯೇ ಆಗಿರುತ್ತದೆ. ಹಾಗಾಗಿ ಕನ್ನಡ ಪ್ರಜ್ಞೆ ಭಾರತ ಪ್ರಜ್ಞೆಯ ಪ್ರತೀಕವೇ. ವಿರುದ್ಧ ಅಲ್ಲ. ಕರ್ನಾಟಕತ್ವ, ಮಹಾರಾಷ್ಟ್ರತ್ವ, ಆಂಧ್ರತ್ವಗಳನ್ನು ಭಾರತೀಯತ್ವ ಬೆಸೆದಿರುವುದರಿಂದ ಬೇರೆ ಬೇರೆಯಾಗಿ ಒಡೆಯಲು ಬಿಡುವುದಿಲ್ಲ ಎನ್ನುತ್ತಾರೆ.

ಅವರು ಭಾವಿಸಿದ ಕರ್ನಾಟಕ ಅದು ಸಂಸ್ಕೃತಿ ಕರ್ನಾಟಕವೇ ಹೊರತು ಭೌಗೋಳಿಕ ಕರ್ನಾಟಕವಲ್ಲ. "ನಾನು ಪರಿಭಾವಿಸುವ ಆರಾಧಿಸುವ ಕರ್ನಾಟಕ ಯಾವಾಗಲೂ ಸಂಸ್ಕೃತಿ ಕರ್ನಾಟಕವೇ ಆಗಿದೆ. 'ಎಲ್ಲಾದರೂ ಇರು, ಎಂತಾದರು ಇರು, ಎಂದೆಂದಿಗೂ ನೀ ಕನ್ನಡವಾಗಿರು' ಎಂಬುದೇ ಅದರ ಅಧಿಷ್ಠಾನ ಸೂತ್ರ'. 'ಬರಿಯ ಗೆರೆ ಹಾಕಿದ ಭೂಮಿ ಕರ್ನಾಟಕವೆ? ಬರಿಯ ನೆಲ ಭರತಖಂಡವೆ? ಅದು ಅಹುದಾದರೆ ಅರೇಬಿಯಾ ನೆಲಕ್ಕೂ ಭರತ ಖಂಡದ ನೆಲಕ್ಕೂ ಏನೂ ವ್ಯತ್ಯಾಸವಿಲ್ಲ. ಮಂಗಳ ಗ್ರಹಕ್ಕೂ ಭೂಮಂಡಲಕ್ಕೂ ಏನೂ ವ್ಯತ್ಯಾಸವಿಲ್ಲ. ..... ಆದ್ದರಿಂದ ಭೌಗೋಳಿಕ ವಿಸ್ತೀರ್ಣಕ್ಕಿಂತ ಮನೋಮಯ ವಿಸ್ತೀರ್ಣ ಗಮನಾರ್ಹವಾದುದು. ಮನೋಮಯ ಕ್ಷೇತ್ರವೇ ನಿಜವಾದ ಕರ್ನಾಟಕ".[೭] ಕರ್ನಾಟಕ ಭೌಗೋಳಿಕವಾಗಿ ರಚನೆಯಾಗದಿದ್ದರೂ ಸಾಂಸ್ಕೃತಿಕವಾದ ಕರ್ನಾಟಕ ಯಾವತ್ತೂ ಅವಿನಾಶಿಯಾಗಿ ಇರುತ್ತದೆ ಎಂಬ ಭಾವನೆ ಕುವೆಂಪು ಅವರಲ್ಲಿತ್ತು. " ರಾಜಕೀಯ ದೃಷ್ಟಿಯಿಂದ ಭೌಗೋಳಿಕ ಕರ್ನಾಟಕವು ಹರಿ ಹಂಚಿ ಹೋಗಿದ್ದರೂ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ,

ಇವುಗಳ ದೃಷ್ಟಿಯಿಂದ ಕನ್ನಡನಾಡಿನ ನಿಜ ಬೆಸುಗೆ ಇನ್ನೂ ಬಿಚ್ಚಿ ಬಿರಿದಿಲ್ಲ. ಕನ್ನಡ ನೆಲವು ನಾಲ್ಕಾರು ಸರಕಾರಗಳ ಬೇರೆ ಬೇರೆ ಅಧಿಪತ್ಯಕ್ಕೆ ಈಡಾಗಿ ಬಿರಿದಿದ್ದರೂ ಕನ್ನಡಿಗರ ಒಲವು ಏಕಚ್ಛತ್ರಾಶ್ರಯದಲ್ಲಿದೆ. ಕರ್ನಾಟಕಕ್ಕೆ ಅಖಂಡವಾದ ಭೂಸಾಮ್ರಾಜ್ಯವಿನ್ನೂ ಸಿದ್ಧವಾಗದಿದ್ದರೂ ಸಾಹಿತ್ಯ ಸಾಮ್ರಾಜ್ಯವೇನೊ ಸಿದ್ಧವಾಗಿದೆ. ಎಲ್ಲಿಯವರೆಗೆ ಕನ್ನಡಿಗರೆಲ್ಲರೂ, ಅವರು ಎಲ್ಲಿಯೇ ಇರಲಿ ಪಂಪ, ರನ್ನ ನಾಗವರ್ಮ, ರಾಘವಾಂಕ, ನಾರಣಪ್ಪ, ಲಕ್ಷ್ಮೀಶ ಮೊದಲಾದ ಕವಿವರ್ಯರ ಸಾಹಿತ್ಯ ಸಿಂಹಾಸನಕ್ಕೆ ತಲೆ ಬಾಗುತ್ತಾರೋ ಅಲ್ಲಿಯವರೆಗೆ ಕನ್ನಡ ಸಾಮ್ರಾಜ್ಯಕ್ಕೆ ಚ್ಯುತಿಯಿಲ್ಲ... ಕೃತಕವಾದ ರಾಜಕೀಯ ವಿಭಜನೆ ನೈಜವಾದ ಸಂಸ್ಕೃತಿಯ ಏಕತೆಯನ್ನು ಎಂದಿಗೂ ಶಾಶ್ವತವಾಗಿ ನಾಶಮಾಡಲಾರದು"[೬] ಎನ್ನುವ ಮಾತುಗಳು ಕವಿಯ ನಾಡಪ್ರಜ್ಞೆಯ ತಾತ್ವಿಕತೆಯನ್ನು ಹೇಳುತ್ತಿದೆ. ಇಲ್ಲಿ ರಾಜ್ಯವಾಗಿ ಕರ್ನಾಟಕ ರೂಪುಗೊಳ್ಳುವುದಕ್ಕಿಂತಲೂ ಅದರ ಸಾಹಿತ್ಯ, ಕಲೆ, ಸಂಸ್ಕೃತಿಯ ಕಾರಣದಿಂದ ಅದೆಂದಿಗೂ ಬೇರೆಯಾಗಲು ಸಾಧ್ಯವಿಲ್ಲ ಎಂಬ ನಂಬಿಕೆ ಕವಿಗೆ ಬಲವಾಗಿದೆ. ಕೃತಕವಾದ ವಿಭಜನೆ ಇದರ ಎದುರು ಉಳಿಯಲಾರದು. ಸಧ್ಯ ನಡೆಯಬೇಕಾಗಿರುವ ಹೋರಾಟ ಇಂಥ ಕೃತಕ ವಿಭಜನೆಯ ವಿರುದ್ಧ ಮಾತ್ರ. ಆದರೆ ಕನ್ನಡಿಗರ ಜವಾಬ್ದಾರಿ ಇನ್ನೂ ದೊಡ್ಡದಿದೆ. ಅದೆಂದರೆ ತಾವು ಸಾಂಸ್ಕೃತಿಕವಾಗಿ ಕನ್ನಡಿಗತನ ಗಟ್ಟಿಮಾಡಿಕೊಳ್ಳುವುದರ ಕಡೆಗೆ ಗಮನ ಹರಿಸದೆ ಹೋದರೆ ಭೌಗೋಳಿಕ ಕರ್ನಾಟಕಕ್ಕಾಗಿ ನಡೆಯುವ ಹೋರಾಟ ಅರ್ಥಹೀನ ಎಂಬ ಧ್ವನಿ ಇಲ್ಲಿದೆ.

ಕುವೆಂಪು ಅವರು ಕನ್ನಡದ ಶ್ರೇಯಸ್ಸನ್ನು ಭಾರತದ ಸ್ವಾತಂತ್ರ್ಯದ ಜೊತೆ ಜೊತೆಗೆ ಸಾಕಾರ ಮಾಡಿಕೊಳ್ಳಬೇಕು ಎಂದು ಬಯಸಿದವರು. ಭಾರತ ವಸಾಹತುಶಾಹಿಯಿಂದ ಬಿಡುಗಡೆಗೊಳ್ಳುವುದೂ, ಕರ್ನಾಟಕ ಸ್ವಾಭಿಮಾನದಿಂದ ತಲೆ ಎತ್ತಿ ನಿಲ್ಲುವುದನ್ನೂ ಏಕಕಾಲದಲ್ಲೇ ಬಯಸಿದ್ದರು. ಅವರಿಗೆ ಭಾರತ-ಕರ್ನಾಟಕ ದ್ವಂದ್ವ ಸಂಬಂಧವಾಗಿ ಕಾಣಲಿಲ್ಲ. ಅವರು ಭಾರತದ ಮೂಲಕವೇ ಕನ್ನಡ ನಾಡಿನ ಅಭಿಮಾನವನ್ನು ಮೂಡಿಸುತ್ತಾರೆ. 'ಜೈ ಭಾರತ ಜನನಿಯ ತನುಜಾತೆ' ಎನ್ನುವ ಮೂಲಕ ಭಾರತ-ಕರ್ನಾಟಕಗಳ ನಡುವಿನ ಬಾಂಧವ್ಯವನ್ನು 'ತಾಯಿ-ಮಗಳು' ಆಗಿ ಪರಿಭಾವಿಸುತ್ತಾರೆ. ಕನ್ನಡದ ಕುರಿತ ಅವರ ಚಿಂತನೆಗಳು ಭಾರತ ಎನ್ನುವ ಒಂದು ಬೃಹತ್ ಒಕ್ಕೂಟಕ್ಕೆ ವಿರೋಧದ ನೆಲೆಯಲ್ಲಿ ರೂಪು ತಾಳುವುದಿಲ್ಲ. ಒಂದು ಇನ್ನೊಂದಕ್ಕೆ ಪೂರಕವಾದ ನೆಲೆಯಲ್ಲಿ ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತವೆ. ಭಾರತ ರಾಷ್ಟ್ರದ

ಕಲ್ಪನೆಯೊಳಗೆ ಕರ್ನಾಟಕದ ಅಖಂಡತೆಯನ್ನು ಪ್ರತಿಪಾದಿಸುತ್ತಾರೆ. ಅವರೇ ಹೇಳುವಂತೆ "ನಾನು ರಾಜ್ಯ ದೃಷ್ಟಿಯಿಂದ ಕರ್ನಾಟಕದವನು, ಭಾಷಾ ದೃಷ್ಟಿಯಿಂದ ಕನ್ನಡಿಗನು, ಆದರೆ ಸಂಸ್ಕೃತಿಯ ದೃಷ್ಟಿಯಿಂದ ಮತ್ತು ರಾಷ್ಟ್ರ ದೃಷ್ಟಿಯಿಂದ ಭಾರತೀಯನು. ನನ್ನ ಕರ್ನಾಟಕತ್ವ ಭಾರತೀಯತ್ವಕ್ಕೆ ಎಂದಿಗೂ ಎದುರು ನಿಲ್ಲುವುದಿಲ್ಲ. ಕರ್ನಾಟಕತ್ವ ಭಾರತೀಯತ್ವಕ್ಕೆ ಎಂದೆಂದಿಗೂ ಅವಿರೋಧಿಯಾಗಿ ಸೇವೆ ಸಲ್ಲಿಸುವುದರಿಂದಲೇ ತನ್ನ ಅಸ್ತಿತ್ವವನ್ನು ರಕ್ಷಿಸಿಕೊಳ್ಳುತ್ತದೆ. ಭಾರತಿ ತಾಯಿ, ಕರ್ನಾಟಕ ಮಗಳು" [೭] ಎನ್ನುತ್ತಾರೆ. ಈ ಮಾತುಗಳು ಅವರ ನಾಡು-ರಾಷ್ಟ್ರಗಳ ನಡುವಿನ ದ್ವಂದ್ವರಹಿತ ಸಂಬಂಧಕ್ಕೆ ಹಿಡಿದ ಕನ್ನಡಿಯಂತಿದೆ. ನೆಲದ ಭಾಷೆ, ಸಂಸ್ಕೃತಿ, ಇತಿಹಾಸದ ವೈಭವಗಳನ್ನು ಕಾವ್ಯದಲ್ಲಿ ಮೈದುಂಬಿಸಿ ಕನ್ನಡಿಗರ ಮುಂದಿಟ್ಟಿದ್ದಾರೆ.

ಕನ್ನಡದ ಜನಗಳಲ್ಲಿ ಅವರ ನುಡಿಯ ಅರಿವನ್ನು ಉಂಟುಮಾಡಬೇಕಾದ ಅನಿವಾರ್ಯತೆಯನ್ನು ಕುವೆಂಪು ಕಂಡುಕೊಂಡಿದ್ದರು. ನುಡಿಯ ಕುರಿತ ಎಚ್ಚರವೇ ನಾಡನ್ನು ಜೀವಂತವಾಗಿ ಉಳಿಸುವುದು ಎಂಬ ತಿಳುವಳಿಕೆಯಿಂದಲೇ ಅವರ 'ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ' ಕವಿತೆ ರಚನೆಯಾಗಿದೆ.

" ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ,
ಹೊರನುಡಿಯ ಹೊರೆಯಿಂದ, ಕುಸಿದು ಕುಗ್ಗಿ !
ರಾಜನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು,
ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ
ಕೂಗಿಕೊಳ್ಳಲು ಕೂಡ ಬಲವಿಲ್ಲ; ಮಕ್ಕಳೇ
ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ!"[೮]

(ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ! )

ಪ್ರಸ್ತುತ ಕವನದಲ್ಲಿ ಕುವೆಂಪು ಕನ್ನಡ ಮತ್ತು ಕನ್ನಡ ನಾಡನ್ನು ವರ್ತಮಾನದ ಅಸ್ತಿತ್ವದ ಸಮಸ್ಯೆಯ ಹಿನ್ನೆಲೆಯಲ್ಲಿ ಗ್ರಹಿಸಿಕೊಳ್ಳುತ್ತಾರೆ. ಕನ್ನಡ ಸಾಯುವುದು ಎಂದರೆ ಅದು ಕನ್ನಡಿಗರು ಮೂಕಗೊಳ್ಳುವುದು ಎಂದು ಭಾವಿಸುತ್ತಾರೆ. ನುಡಿ ನಾಡಜನಗಳ ಸಂಸ್ಕೃತಿಯ ಮತ್ತು ಅಭಿವ್ಯಕ್ತಿಯ ಮಾಧ್ಯಮ. ತಾಯಿ ನುಡಿಯನ್ನು ಕಳೆದು ಕೊಳ್ಳುವುದು

ಎಂದರೆ ತಾಯನ್ನೇ ಕೊಲ್ಲಿಸಿದಂತೆ ಎನ್ನುತ್ತಾರೆ. ಪರಭಾಷೆಯ ಮೋಹ ಒಂದೆಡೆಯಾದರೆ, ಇನ್ನೊಂದೆಡೆ ಪ್ರಭುತ್ವಗಳು ಅಧಿಕಾರಕ್ಕಾಗಿ ಅನ್ಯ ಭಾಷೆಗಳನ್ನು ಒತ್ತಾಯದಿಂದ ಜಾರಿಗೊಳಿಸುತ್ತಿದೆ. ಕನ್ನಡದ ಕಂದರು ಹೊರನುಡಿಯ ಹೊರೆಯಿಂದ ಕುಗ್ಗಿಹೋಗುತ್ತಿದ್ದಾರೆ. ರಾಜನುಡಿಯಾಗಿ, ರಾಷ್ಟ್ರನುಡಿಯಾಗಿ, ದೇವನುಡಿಯಾಗಿ-ಇಂಗ್ಲಿಷ್, ಹಿಂದಿ, ಸಂಸ್ಕೃತವನ್ನು ರಾಜ್ಯದ ಜನತೆಯ ಮೇಲೆ ಹೇರುವ ಕಾರಣದಿಂದ ಕನ್ನಡಮ್ಮನ ಬೆನ್ನು ಮೂಳೆ ಮುರಿಯುತ್ತಿದೆ ಎನ್ನುವಾಗ ಕನ್ನಡದ ಅಸ್ತಿತ್ವಕ್ಕೆ ಯಾವ ಯಾವ ಸವಾಲುಗಳು ಎದುರಾಗುತ್ತಿದೆ ಎಂಬುದರ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ.

ಈ ಕವಿತೆಯಲ್ಲಿ ಕನ್ನಡ ನುಡಿಗೆ ವರ್ತಮಾನದಲ್ಲಿ ಬಂದಿರುವ ಸಮಸ್ಯೆಯನ್ನು ಪ್ರಸ್ತಾಪಿಸುತ್ತಲೇ ಕನ್ನಡ ನುಡಿಯನ್ನು ಈ ಸಂಕಟದಿಂದ ಪಾರು ಮಾಡುವ ಜವಾಬ್ದಾರಿಯು ಕನ್ನಡದ ಜನರದ್ದು ಎಂದು ಸ್ಪಷ್ಟವಾಗಿ ಸಾರುತ್ತಾರೆ. ಹೊರಗಿನ ಭಾಷೆಯನ್ನು ಒತ್ತಾಯದಿಂದ ಹೇರುತ್ತಿರುವ ಪರಿಣಾಮ ಒಂದೆಡೆಯಾದರೆ, ಇನ್ನೊಂದೆಡೆ ಜನ ತಾವಾಗಿಯೇ ಪರಭಾಷಾ ಮೋಹಕ್ಕೆ ಸಿಲುಕುತ್ತಿದ್ದಾರೆ. ಇವೆರಡರಿಂದಲೂ ಕನ್ನಡ ನುಡಿ ಸಾಯುತ್ತಿದೆ ಎನ್ನುತ್ತಾರೆ. ಕನ್ನಡಿಗರು ತಮ್ಮ 'ಕುರಿ'ತನವನ್ನು ಬಿಟ್ಟು 'ಸಿಂಹ'ವಾಗಿ ಗರ್ಜಿಸುವುದನ್ನು ಕಲಿಯಬೇಕು. ಆಗಲೇ ನುಡಿಗೆ ಬಂದೊದಗಿದ ಸಂಕಟದಿಂದ ಪಾರಾಗಲು ಸಾಧ್ಯ ಎಂಬ ಮಾತನ್ನು ಹೇಳುತ್ತಾರೆ.

ಇಲ್ಲಿನ ಭಾಷೆಯನ್ನು ಗಮನಿಸಿದರೆ, ಸಂಪೂರ್ಣ ಶಕ್ತಿ-ವರ್ಚಸ್ಸು ಕಳೆದುಕೊಂಡು ಸ್ವಾಭಿಮಾನ ಶೂನ್ಯರಾಗಿರುವ ಕನ್ನಡದ ಜನರನ್ನು ಎಚ್ಚರಿಸುವ ಬಗೆಯ, ಅನ್ಯರ ಹೇರಿಕೆಯ ವಿರುದ್ಧ ತೀವ್ರ ಸ್ವರೂಪದ ಪ್ರತಿರೋಧವನ್ನು ತಿಳಿಸುವ ಬಗೆಯ ಭಾಷೆಯಾಗಿದೆ. 'ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿಸಾಕ್ಷಿ', 'ಗರ್ಜಿಸುವುದನು ಕಲಿತು ಸಿಂಹವಾಗಿ' ಎಂಬ ಸಾಲುಗಳು ಶೌರ್ಯದ ಪರಿಭಾಷೆಯಾಗಿ ಹೊರಹೊಮ್ಮಿದೆ. ಆ ಮೂಲಕ ಭಾಷೆಯೊಂದರ ಉಳಿವಿಗಾಗಿ ಶೌರ್ಯದ ಹಾದಿಯನ್ನು ಕ್ರಮಿಸಬೇಕಾಗುತ್ತವೆ ಎಂಬುದನ್ನು ಕವಿ ಎಚ್ಚರಿಸುತ್ತಿದ್ದಾರೆ.

ಕನ್ನಡ – ಕರ್ನಾಟಕವನ್ನು ಒಂದು ನಿರ್ದಿಷ್ಟ ಭೌಗೋಳಿಕ ಪರಿಕಲ್ಪನೆಯಾಗಿ ಭಾವಿಸಿದರೆ ಅದಕ್ಕೆ ಒಂದು ಭೂಗೋಳ, ಸೀಮಿತ ಗಡಿ, ವಾಸಮಾಡುವ ಜನಾಂಗಗಳಿಗಷ್ಟೇ ಇದು ಒಂದು ಹೆಸರಾಗುತ್ತದೆ. ಆದರೆ ಕುವೆಂಪು ಕರ್ನಾಟಕವನ್ನು ಕೇವಲ

ಒಂದು ಭೌಗೋಳಿಕ ರಚನೆ ಮತ್ತು ಅದು ಅದರ ಹೆಸರು ಎಂದು ಭಾವಿಸದೆ ಕನ್ನಡ-ಕರ್ನಾಟಕವನ್ನು ತಮ್ಮ ಕವಿತೆಗಳಲ್ಲಿ ಹೊಸ ರೀತಿಯಿಂದ ಪುನರ್ ಸೃಷ್ಟಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಅವರ "ಮೆಟ್ಟುವ ನೆಲ ಕರ್ನಾಟಕ" ಕವಿತೆ ಇಂತಹ ಪ್ರಯತ್ನದ ಫಲ.

"ಎಲ್ಲಾದರೂ ಇರು, ಎಂತಾದರು ಇರು
ಎಂದೆಂದಿಗು ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು!
ನೀ ಮೆಟ್ಟುವ ನೆಲ-ಅದೆ ಕರ್ನಾಟಕ
ನೀನೇರುವ ಮಲೆ ಸಹ್ಯಾದ್ರಿ
ನೀ ಮುಟ್ಟುವ ಮರ ಶ್ರೀ ಗಂಧದ ಮರ
ನೀ ಕುಡಿಯುವ ನೀರ್ ಕಾವೇರಿ." (ಮೆಟ್ಟುವ ನೆಲ ಕರ್ನಾಟಕ)

ಕರ್ನಾಟಕ ಏಕೀಕರಣ ಚಳವಳಿ ಒಂದು ಕರ್ನಾಟಕದ ಬೇಡಿಕೆಯನ್ನು ಮುಂದಿಟ್ಟುಕೊಂಡು ತೀವ್ರವಾದ ಹೋರಾಟವನ್ನು ನಡೆಸುತ್ತಿದ್ದ ಕಾಲಘಟ್ಟದಲ್ಲೇ ಈ ಕವಿತೆ ರಚನೆಯಾಗಿತ್ತು. ಕರ್ನಾಟಕ ಎಂಬ ಕಲ್ಪಿತ ಭೌಗೋಳಿಕ ರಚನೆಯೊಂದರ ಸ್ವರೂಪ, ಗಡಿಗಳ ಕುರಿತು ತೀವ್ರ ಚರ್ಚೆ ನಡೆಯುತ್ತಿದ್ದ ಸಂದರ್ಭವದು. ಕನ್ನಡ – ಕನ್ನಡಿಗ – ಕರ್ನಾಟಕ ಎಂಬುದು 'ತ್ರಿವಳಿ' ರಚನೆ. ಭಾಷೆ, ಭಾಷೆಯನ್ನಾಡುವ ಭಾಷಿಕ ಮತ್ತು ಭಾಷಾ ಬಳಕೆಯ ಪ್ರದೇಶ ಎನ್ನುವುದು ಮುಖ್ಯ ಸಂಗತಿಯೇ ಆಗಿತ್ತು. ಕರ್ನಾಟಕ ಎನ್ನುವುದು ಮೂರ್ತಗೊಳ್ಳುವುದು ಒಂದು ಸೀಮಿತ ಭೌಗೋಳಿಕ ನೆಲೆಗಟ್ಟಿನಲ್ಲಿ. ಅದಕ್ಕೆ ಒಂದು ಬಗೆಯ ಕಲ್ಪಿತ ಭೂಪ್ರದೇಶ ಇದೆ. ಅದು ಕನ್ನಡಿಗರು ವಾಸವಾಗಿರುವ, ಕನ್ನಡ ಮಾತು ಬಳಕೆ ಇರುವ ಸಾಮಾನ್ಯ ಪ್ರದೇಶ. ಇದು ಒಂದಾಗಬೇಕು ಎಂಬುದೇ ಏಕೀಕರಣ ಚಳವಳಿಯ ಮುಖ್ಯ ಬೇಡಿಕೆಯಾಗಿತ್ತು. ಒಂದು ನಿರ್ದಿಷ್ಟ ಭೂಪ್ರದೇಶ ಎನ್ನುವುದೇ ಏಕೀಕರಣದ ಮುಖ್ಯ ವಿಷಯವಾಗಿತ್ತು. ಇಂತಹ ಸಂದರ್ಭದಲ್ಲಿ ಕುವೆಂಪು ಮಾತ್ರ ಬಹಳ ವಿಶಿಷ್ಟವಾದ ರೀತಿಯಲ್ಲಿ ಕರ್ನಾಟಕವನ್ನು ಮುಂದಿಡುತ್ತಾರೆ. ಎಲ್ಲೇ ಇದ್ದರೂ, ಹೇಗೆ ಇದ್ದರೂ ನೀನು ಕನ್ನಡಿಗನಾಗಿರು ಎಂಬ ಕರೆಯನ್ನು ಕೊಡುತ್ತಾರೆ. ಕರ್ನಾಟಕ ಎಂಬ ಒಂದು ಸೀಮಿತ ಭೂ ವ್ಯಾಪ್ತಿಯ ಒಳಗೆ

ಇರಲು ಸಾಧ್ಯವಾಗದೆ ಇದ್ದರೂ ಕನ್ನಡಿಗರು ಕನ್ನಡಿಗರಾಗಿಯೇ ಇರಬಹುದು ಎಂಬ ವಿಚಾರವನ್ನು ಕವಿ ಇಲ್ಲಿ ಮನಗಾಣಿಸುತ್ತಾರೆ.

'ನೀ ಮೆಟ್ಟುವ ನೆಲ - ಅದೆ ಕರ್ನಾಟಕ' ಎಂದು ಹೇಳುತ್ತಾ, ಕನ್ನಡಿಗನು ಜಗತ್ತಿನ ಎಲ್ಲೇ ಇದ್ದರೂ ಆತ ತುಳಿಯುವ ನೆಲ ಅದು ಕರ್ನಾಟಕದ ನೆಲ ಎಂದೇ ಭಾವಿಸಲಿ, ಜಗತ್ತಿನ ಯಾವುದೇ ಬೆಟ್ಟವನ್ನು ಏರಿದರೂ ಅದು ಕರ್ನಾಟಕದ ಸಹ್ಯಾದ್ರಿ ಎಂದೇ ಭಾವಿಸಲಿ, ಮುಟ್ಟುವ ಮರ– ಶ್ರೀಗಂಧ, ಕುಡಿಯುವ ನೀರು ಕಾವೇರಿ ಎಂದೇ ಭಾವಿಸಲಿ ಎಂದು ಹೇಳುವ ಕವಿಯ ಮಾತು ಏಕೀಕರಣದ ಅರ್ಥವನ್ನು ವಿಸ್ತರಿಸುತ್ತದೆ. ಕನ್ನಡಿಗ ತಾನು ಹೋದ ಕಡೆಯೇ ಕರ್ನಾಟಕವನ್ನು ಕಾಣಬೇಕು ಎಂಬ ಆಲೋಚನೆಯೇ ಬಹಳ ವಿಶಿಷ್ಟವಾದುದು. ಕುವೆಂಪು ಪ್ರತಿಪಾದಿಸಿದ ವಿಶ್ವಮಾನವ ಸಂದೇಶದ ಬೀಜರೂಪವು ಇದೇ ಕವಿತೆಯ ಮೂಲಕ ವ್ಯಕ್ತವಾಗಿದೆ ಎಂದು ಹೇಳಬಹುದು. ಕರ್ನಾಟಕವನ್ನು ನೆಲಕ್ಕೆ, ಗಡಿ ಗುರುತುಗಳಿಗೆ ಅತೀತವಾಗಿ ಗ್ರಹಿಸಬಹುದೆಂಬುದರ ಸೂಚನೆಯಿದು. ಕುವೆಂಪು ಅವರೇ 'ಕರ್ನಾಟಕದ ಕಾವ್ಯ ಸಂಸ್ಕೃತಿಗಳನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡ ಕನ್ನಡಿಗನು ಭೌಗೋಳಿಕವಾದ ಎಲ್ಲೆಗಳಿಂದ ಹೆದರಬೇಕಾದ್ದಿಲ್ಲ. ...... ಕನ್ನಡ ಕಾವ್ಯವನ್ನೋದುವಾತನು ಅಮೇರಿಕೆಯಲ್ಲಿದ್ದರೂ ಅದು 'ಕರ್ನಾಟಕವೇ', 'ಪಂಪನನೋದುವ ನಾಲಗೆ' ಮಿಸಿಸಿಪಿ ಹೊಳೆಯ ನೀರನ್ನು ಈಂಟಿದರೂ ಅದು ಕಾವೇರಿಯೇ, 'ಕುಮಾರವ್ಯಾಸನ ನಾಲಿಪ ಕಿವಿ' ಆಂಡಿಸ್ ಪರ್ವತವನ್ನೇರುತ್ತಿದ್ದರೂ ಅದು ಸಹ್ಯಾದ್ರಿಯೇ[೧೦] ಎನ್ನುತ್ತಾರೆ. ಏಕೀಕರಣದ ಚಳವಳಿಗಾರರು ಯಾವುದನ್ನು ಕರ್ನಾಟಕವೆಂದು ಸಾಮಾನ್ಯವಾಗಿ ಗ್ರಹಿಸಿದ್ದರೋ ಆ ಬಗೆಯ ಗ್ರಹಿಕೆಗಿಂತ ವಿಸ್ತಾರವಾದ ಕರ್ನಾಟಕದ ಪರಿಕಲ್ಪನೆ ಇದು. ಒಬ್ಬೊಬ್ಬ ಕನ್ನಡಿಗನೂ ತಾನು ಹೆಜ್ಜೆ ಇಟ್ಟಲ್ಲಿ ಒಂದೊಂದು ಕರ್ನಾಟಕ ಹುಟ್ಟಿಕೊಳ್ಳುತ್ತದೆ ಎಂಬ ವಿಶಾಲ ಚಿಂತನೆ ಇಲ್ಲಿದೆ. ಕರ್ನಾಟಕ ಎಷ್ಟು? ಎಂದರೆ ಕನ್ನಡಿಗರೆಷ್ಟೊ ಅಷ್ಟು. ಕನ್ನಡವೂ ಅಷ್ಟೇ. ಸ್ಥಗಿತಗೊಂಡ ಸ್ಥಿತಿಯಲ್ಲ. ಕನ್ನಡದ ವಿಸ್ತಾರ, ಕರ್ನಾಟಕದ ವಿಸ್ತಾರ ಅದು ಭೌಗೋಳಿಕತೆಯ ನೆಲೆಯದ್ದಲ್ಲ. ಚಲನಶೀಲತೆಯ ನೆಲೆಯಿಂದ ಗ್ರಹಿಸಿದ ಕರ್ನಾಟಕ ಇದು. ಕವಿರಾಜಮಾರ್ಗಕಾರನ ಕಲ್ಪನೆಯ ಕರ್ನಾಟಕವನ್ನೂ (ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ......) ಮೀರಿದ ಕರ್ನಾಟಕ ಪ್ರಜ್ಞೆ ಕುವೆಂಪು ಅವರಲ್ಲಿ ರೂಪುತಾಳುತ್ತದೆ. ಕವಿರಾಜ

ಮಾರ್ಗಕಾರನು ಕೊಟ್ಟಿರುವ ಗಡಿಯೂ ನದಿಗಳದ್ದು. ಅಂದರೆ ಅದೂ ಚಲನಶೀಲವೇ. ಕುವೆಂಪು ಅವರು ‘ ನೀ ಕುಡಿಯುವ ನೀರ್ ಕಾವೇರಿ’ ಎನ್ನುತ್ತಾ ಈ ಕಾವೇರಿಯಿಂದ ಗೋದಾವರಿವರೆಗೆ ಮಾತ್ರವಲ್ಲ, ಮಿಸಿಸಿಪಿ ಹೊಳೆಯವರೆಗೂ ವಿಸ್ತರಿಸುತ್ತಾರೆ. ಎಲ್ಲಿಯ ಕರ್ನಾಟಕ ? ಎಲ್ಲಿಯ ಅಮೇರಿಕಾ ದೇಶ ? ಎಲ್ಲಿಯ ಕಾವೇರಿ ? ಎಲ್ಲಿಯ ಮಿಸಿಸಿಪಿ ಹೊಳೆ ? ಎಲ್ಲಿಯ ಸಹ್ಯಾದ್ರಿ? ಎಲ್ಲಿಯ ಆಂಡಿಸ್ ಪರ್ವತ? ಕನ್ನಡಿಗನ ವಿಸ್ತಾರವೇ ಕರ್ನಾಟಕದ ವಿಸ್ತಾರವಾಗಿ ಬಿಡುತ್ತದೆ.

ಕನ್ನಡಕ್ಕೆ ಒದಗಿರುವ ಸಂಕಟದ ಸ್ಥಿತಿಯಿಂದ ಮತ್ತೆ ಕನ್ನಡವನ್ನು ಪಾರುಮಾಡುವ ಜವಾಬ್ದಾರಿ ಕನ್ನಡದ ಕಂದನದು. ಕನ್ನಡಮ್ಮನ ಮೊಲೆ ಹಾಲು ಉಂಡು, ಆಕೆಯ ಜೋಗುಳದಲ್ಲಿ ಬೆಳೆದ ಕಂದನು ಈಗ ತನ್ನ ತಾಯಿಗೆ ಬಂದಿರುವ ಸಂಕಟದಿಂದ ಪಾರುಮಾಡಬೇಕಾಗಿದೆ. ಇದು ತಾಯಿಯ ಹರಕೆಯೂ ಹೌದು ಎಂಬುದನ್ನು ‘ಕನ್ನಡಮ್ಮನ ಹರಕೆ’ ಕವಿತೆ ಚಿತ್ರಿಸುತ್ತದೆ.

“ಕನ್ನಡಕೆ ಬಂದಿಳಿಕೆ
ಹಿಡಿಯುತಿಹುದಿಂದು;
ನೀ ನಿದ್ದೆ ಮಾಡಿದರೆ
ಹಾಕುವುದು ಕೊಂದು!
ಎದ್ದೇಳು ಕಂದಯ್ಯ,
ಕತ್ತಿಯನು ಕೊಳ್ಳೊ !
ತಳಿರು ವೇಷದ ರೋಗ
ಬಂದಿಳಿಕೆ ತಳ್ಳೊ ! ”[೧೧] (ಕನ್ನಡಮ್ಮನ ಹರಕೆ)

ಕನ್ನಡಮ್ಮನೇ ತನಗೊದಗಿದ ಸಂಕಟದಿಂದ ತನ್ನನ್ನು ರಕ್ಷಿಸಲು ತನ್ನ ಕಂದನಿಗೆ ನಿವೇದಿಸಿಕೊಳ್ಳುವ ರೀತಿಯಲ್ಲಿ ಈ ಕವನ ರಚನೆಯಾಗಿದೆ. ಕನ್ನಡಕ್ಕೆ ಬಂದಿರುವ ತೊಂದರೆಗಳನ್ನು ನಿವಾರಿಸುವಂತೆ ಕೇಳಿಕೊಳ್ಳಲಾಗುತ್ತದೆ. “ ಕನ್ನಡಕ್ಕೆ ಬಂದಿಳಿಕೆ ಹಿಡಿಯುತಿಹುದಿಂದು” ಎಂಬ ಮಾತು ಕನ್ನಡಕ್ಕೆ ಬಂದೊದಗಿದ ತೊಂದರೆಯ ಮಟ್ಟವನ್ನು ಹೇಳುತ್ತಿದೆ.ಬಂದಿಳಿಕೆ ಎನ್ನುವುದು ಪರಾವಲಂಬಿ ಸಸ್ಯ.ಅದು ಬೇರೆ ಮರದ ಆಶ್ರಯ ಪಡೆದು ಜೀವಿಸುತ್ತದೆ.ಆಶ್ರಯಿತ ಮರದ ಮೂಲಕವೇ ತನ್ನ ಜೀವದ್ರವ್ಯವನ್ನು ಪಡೆದುಕೊಂಡು ಆ ಮರಕ್ಕೆ ಬೇಕಷ್ಟು ಪೋಷಕಾಂಶಗಳು ಸಿಗದ ಹಾಗೆ ಮಾಡುತ್ತದೆ.

ಹಾಗಾಗುವುದರಿಂದ ಬಂದಿಳಿಕೆ ಬಂದಾಗ ಒಂದು ಮರವೂ ಕೂಡ ಕ್ರಮೇಣ ಸಾಯಲಾರಂಭಿಸುತ್ತದೆ. ಅದೇ ರೀತಿಯಾಗಿ ಭಾಷೆಗೆ ಬಂದಿಳಿಕೆ ಅಂಟಿಕೊಂಡಿದೆ ಎಂದರೆ ಅದು ಭಾಷೆಗೆ ಭವಿಷ್ಯದಲ್ಲಿ ಸಂಭವಿಸುವ ಹಾನಿಯನ್ನು ಕುರಿತು ಎಚ್ಚರಿಸುತ್ತಿದೆ. ಈ ಮಾತಿನ ಮೂಲಕ ಕನ್ನಡದ ಕಂದರು ಜಾಗೃತರಾಗಬೇಕಾದ ಅವಶ್ಯಕತೆಯನ್ನು ಸೂಕ್ಷ್ಮವಾಗಿ ಹೇಳುತ್ತಿದೆ. ಕನ್ನಡಕ್ಕೆ ಹಿಡಿದಿರುವ ಬಂದಿಳಿಕೆ ಮೇಲ್ನೋಟಕ್ಕೆ ಅಪಾಯದ ಹಾಗೆ ಕಾಣಿಸುತ್ತಿಲ್ಲ. ಏಕೆಂದರೆ ಈ ಬಂದಿಳಿಕೆ ತಳಿರಿನ ವೇಷದಲ್ಲಿ ಅಂದರೆ ಬಾಹ್ಯವಾಗಿ ಆಕರ್ಷಣೆಯ ವೇಷದಲ್ಲಿ ಬಂದು ಸೇರಿದೆ. ಆದರೆ ಅದು ರೋಗವೇ. ಇದರಿಂದ ಬಿಡುಗಡೆಯಾಗಲೇಬೇಕು. ಕನ್ನಡ ತಾಯಿಯೇ ತನಗಂಟಿದ ಬಂದಳಿಕೆಯನ್ನು ಕತ್ತರಿಸಲು ತನ್ನ ಕಂದನನ್ನು 'ಎದ್ದೇಳೋ ಕಂದಯ್ಯ ಕತ್ತಿಯನು ಕೊಳ್ಳೊ' ಎಂದು ಹೇಳುತ್ತಾಳೆ. ಆ ಮೂಲಕ ಭಾಷೆಯನ್ನು ಕಾಪಾಡುವ ಕೆಲಸವನ್ನು ಕನ್ನಡಿಗರೇ ಮಾಡಬೇಕಾಗಿದೆ ಎಂಬ ಸಂದೇಶ ಇಲ್ಲಿದೆ. ವರ್ತಮಾನದಲ್ಲಿ ಕನ್ನಡಕ್ಕೆ ಬಂದೊದಗಿದ ಸಂಕಟವನ್ನು ಕುವೆಂಪು ಸೂಕ್ಷ್ಮವಾಗಿ ಗ್ರಹಿಸಿರುವುದನ್ನು ಈ ಕವಿತೆಯಲ್ಲಿ ನೋಡಬಹುದಾಗಿದೆ.

ಕುವೆಂಪು ಕನ್ನಡಕ್ಕೆ ಬಂದಿರುವ ಅಪಾಯವನ್ನು ಗ್ರಹಿಸಿದ ಬಗೆ ವಿಶಿಷ್ಟವಾದುದು. ವಸಾಹತು ಪ್ರಭುತ್ವದ ಕೊಡುಗೆಯಾದ ಇಂಗ್ಲಿಷ್ ಕುವೆಂಪು ಅವರಿಗೆ ವೈಯಕ್ತಿಕವಾಗಿ ಬದುಕಿನ ಪಲ್ಲಟಕ್ಕೆ ಕಾರಣವಾದ ಸಂಗತಿಯಾಗಿ ಕಂಡರೂ ಕನ್ನಡದ ನೆಲೆಯಿಂದ ಅದು ಅಪಾಯಕಾರಿಯಾಗಿ ಕಂಡದ್ದು ಹೆಚ್ಚು. ಯಾವುದು ಉದ್ಧಾರದ ಮುಖವಾಡವನ್ನು ತೊಟ್ಟುಕೊಂಡು ಬರುತ್ತಿದೆಯೋ ಅದರೊಳಗೆ ನಾಶದ ಒಂದು ಬೀಜವೂ ಇದೆ. ಇದು ಕುವೆಂಪು ಅವರಿಗೆ ಅರ್ಥವಾಗಿತ್ತು. ಹಾಗಾಗಿ ಅವರು ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆ ಎರಡು ನೆಲೆಯಿಂದಾಗಿತ್ತು. ಒಂದೆಡೆ ರಾಷ್ಟ್ರೀಯ ಚಳವಳಿಯ ಭಾಗವೇ ಆಗಿಬಿಡಬಹುದಾದ ಮಾದರಿಯಲ್ಲಿ ರಾಷ್ಟ್ರೀಯತೆಯ ಕುರಿತು ಬರೆದ ಬರವಣಿಗೆಗಳಾದರೆ, ಇನ್ನೊಂದೆಡೆ ಕನ್ನಡವನ್ನು ಅದಕ್ಕೊದಗಿ ಬಂದ ಎಲ್ಲಾ ಬಗೆಯ ಕಂಟಕಗಳಿಂದ ಪಾರು ಮಾಡಿದ ರೀತಿ. ತಳಿರಿನ ವೇಷ ಇದೆ, ಆದರೆ ಅದು ತಳಿರಲ್ಲ. ಮರವನ್ನೇ ನಾಶ ಮಾಡಿಬಿಡಬಹುದಾದ ಬಂದಿಳಿಕೆ. ತಳಿರೆಂದು ಮಾರುಹೋದವರೇ ಹೆಚ್ಚು. ಈ ನಡುವೆ ಅದರ ನಿಜರೂಪವನ್ನು ಕನ್ನಡಿಗರಿಗೆ ದರ್ಶಿಸಿದವರು ಕುವೆಂಪು.

ಕುವೆಂಪು ಅವರು ಕರ್ನಾಟಕ ಏಕೀಕರಣದ ಕನಸನ್ನು ಗಾಢವಾಗಿ ಕಂಡವರು. ಭಾರತಕ್ಕೆ ಸ್ವಾತಂತ್ರ್ಯ ಬಂದ ಕೂಡಲೇ ಅಖಂಡ ಕರ್ನಾಟಕದ ರಚನೆ ಸಾಧ್ಯವಾಗುತ್ತದೆ ಎಂದು ಭಾವಿಸಿದ್ದವರು. ಆದರೆ ಸ್ವಾತಂತ್ರ್ಯಾನಂತರ ಮೈಸೂರು ರಾಜ್ಯವಾಯಿತು. ಇಂತಹ ಸಂದರ್ಭದಲ್ಲಿ ಮೈಸೂರಿನ ಪ್ರಭುತ್ವ ವ್ಯವಸ್ಥೆಯ ಕುರಿತು ತಾಳಿದ್ದ ಅಸಮಾಧಾನವನ್ನು, ನವೀನ ರೀತಿಯಿಂದ 'ಅಖಂಡ ಕರ್ನಾಟಕ' ಕವನದಲ್ಲಿ ವ್ಯಕ್ತಪಡಿಸುತ್ತಾರೆ. ಮೈಸೂರಿನಲ್ಲಿ ಏಕೀಕರಣಕ್ಕೆ ವ್ಯಕ್ತವಾದ ವಿರೋಧವನ್ನು ಕವಿ ಎದುರಿಸಿದ ಬಗೆ ಇದು.

ಅಖಂಡ ಕರ್ನಾಟಕ:

ಅಲ್ತೊ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ!
ನೃಪತುಂಗನೆ ಚಕ್ರವರ್ತಿ !
ಪಂಪನಲ್ಲಿ ಮುಖ್ಯಮಂತ್ರಿ
ರನ್ನ ಜನ್ನ ನಾಗವರ್ಮ
ರಾಘವಾಂಕ ಹರಿಹರ
ಬಸವೇಶ್ವರ ನಾರಣಪ್ಪ
ಸರ್ವಜ್ಞ ಷಡಕ್ಷರ
ಸರಸ್ವತಿಯೆ ರಚಿಸಿದೊಂದು
ನಿತ್ಯ ಸಚಿವ ಮಂಡಲ
ತನಗೆ ರುಚಿರ ಕುಂಡಲ ! [೧೨] (ಅಖಂಡ ಕರ್ನಾಟಕ)

ಕುವೆಂಪು ಗ್ರಹಿಸಿದ ಕರ್ನಾಟಕದ ಚಿತ್ರಣ ಇಲ್ಲಿದೆ. ಕರ್ನಾಟಕ ಎನ್ನುವ ಗ್ರಹಿಕೆ ಹೇಗೆ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಎನ್ನುವುದನ್ನು ಇಲ್ಲಿ ಸ್ಪಷ್ಟವಾಗಿ ನೋಡಬಹುದು. ಕರ್ನಾಟಕ ಎನ್ನುವುದು ಕೇವಲ ನಾಲ್ಕು ದಿನಗಳಿಗಾಗಿ ನಡೆಯುವ ರಾಜಕೀಯ ನಾಟಕವಲ್ಲ ಎಂದು ಕವಿ ಇಲ್ಲಿ ಹೇಳುತ್ತಾರೆ. ಕರ್ನಾಟಕದ ಕಲ್ಪನೆ ಕೇವಲ ಸದ್ಯದ ಸಂದರ್ಭದಲ್ಲಿ ಭಾಷೆಯನ್ನಾಡುವ ಭೂವಲಯದ್ದಲ್ಲ. ಅದು ಕನ್ನಡವನ್ನು ಕಟ್ಟಿದ, ಕರ್ನಾಟಕವನ್ನು ಸಾಂಸ್ಕೃತಿಕವಾಗಿ ರೂಪಿಸಿದ ಐತಿಹಾಸಿಕ ಸಂಗತಿಗಳ ಜೊತೆಗಿನ ಒಂದು ಭಾವನಾತ್ಮಕ ಸಂಬಂಧ. ಸದ್ಯದಲ್ಲಿ ಕರ್ನಾಟಕ ರೂಪುಗೊಳ್ಳುವುದು ಎಂದರೆ ಅದೊಂದು ಭೌಗೋಳಿಕ ಪ್ರಕ್ರಿಯೆ ಅಷ್ಟೇ. ಮಾನಸಿಕ ಸ್ತರದಲ್ಲಿ ಕರ್ನಾಟಕ ಈಗಾಗಲೇ ಅಸ್ತಿತ್ವದಲ್ಲಿದೆ. ಭಾವನಾತ್ಮಕ ಕರ್ನಾಟಕ ಈಗಾಗಲೇ ರಚನೆಗೊಂಡಿದೆ. ಈ ಮನೋಸ್ತರದ ಕರ್ನಾಟಕವನ್ನು ಆಳುವವರು ಯಾವುದೋ ರಾಜಕೀಯ ನಾಯಕರಲ್ಲ, ಬದಲಾಗಿ ಸಾಂಸ್ಕೃತಿಕ ಕರ್ನಾಟಕವನ್ನು ಶ್ರೀಮಂತಗೊಳಿಸಿದ, ಕರ್ನಾಟಕದ ಸಾಂಸ್ಕೃತಿಕ ನಾಯಕರೇ

ಆಳುವವರು. 'ನೃಪತುಂಗ' ಚಕ್ರವರ್ತಿ, ಆತನಿಗೆ 'ಪಂಪ'ನೇ ಮುಖ್ಯಮಂತ್ರಿ. ಇನ್ನುಳಿದಂತೆ ರನ್ನ, ಜನ್ನ, ನಾಗವರ್ಮ, ರಾಘವಾಂಕ, ಹರಿಹರ, ಬಸವೇಶ್ವರ, ನಾರಣಪ್ಪ, ಸರ್ವಜ್ಞ, ಷಡಕ್ಷರರೇ ಸಚಿವ ಮಂಡಲದ ಮಂತ್ರಿಗಳು. ಇದು ಶಾಶ್ವತ ಸಚಿವ ಮಂಡಲ. ಶಾಶ್ವತ ಆಡಳಿತ ವ್ಯವಸ್ಥೆ. ಕವಿ ಕಲ್ಪನೆಯ ಈ ಸಚಿವ ಮಂಡಲ ಕರ್ನಾಟಕವನ್ನು ನಿಜವಾಗಿ ಆಳಬೇಕಾಗಿರುವ ಸರಸ್ವತಿ ಪ್ರಣೀತ ಸಾಂಸ್ಕೃತಿಕ ಜ್ಞಾನ ಸಂಕೇತಗಳು. ಈ ಕಾರಣದಿಂದಲೇ ಅಖಂಡ ಕರ್ನಾಟಕ ಎನ್ನುವುದು ಕೇವಲ ನಾಲ್ಕು ದಿನಗಳ ಒಂದು ರಾಜಕೀಯ ನಾಟಕ ಅಲ್ಲ ಎನ್ನುವುದನ್ನು ನೆನಪಿಸುತ್ತಾರೆ.

ಕರ್ನಾಟಕ ಎಂಬುದೇನು
ಹೆಸರೆ ಬರಿಯ ಮಣ್ಣಿಗೆ ?
ಮಂತ್ರ ಕಣಾ! ಶಕ್ತಿ ಕಣಾ!
ತಾಯಿ ಕಣಾ ! ದೇವಿ ಕಣಾ!
ಬೆಂಕಿ ಕಣಾ ! ಸಿಡಿಲು ಕಣಾ!
ಕಾವ ಕೊಲುವ ಒಲವ ಬಲವ
ಪಡೆದ ಚಲದ ಚಂಡಿ ಕಣಾ !
ಋಷಿಯ ಕಾಣ್ಬ ಕಣ್ಣಿಗೆ! [೧೩] ( ಅಖಂಡ ಕರ್ನಾಟಕ)

ಛಿದ್ರಗೊಂಡಿರುವ ಭೂಪ್ರದೇಶವನ್ನು ಒಂದು ಗೂಡಿಸುವಾಗ ರೂಪುಗೊಳ್ಳುವ 'ಕರ್ನಾಟಕ' ಎನ್ನುವುದು ಕೇವಲ ಒಂದು ಮಣ್ಣಿನ ಹೆಸರಲ್ಲ, ಅದು ಅದಕ್ಕಿಂತಲೂ ಮಿಗಿಲಾದುದು. ಕರ್ನಾಟಕ ಕೇವಲ ಮಣ್ಣಿನ ಹೆಸರಾಗುವುದಾದರೆ ಕರ್ನಾಟಕದ ಅಸ್ತಿತ್ವದ ಕುರಿತು ಚಿಂತೆ ಮಾಡುತ್ತಿರಲಿಲ್ಲ. ಕವಿಯೇ ಹೇಳುವಂತೆ, ಕರ್ನಾಟಕ ನಮ್ಮ ಮಂತ್ರ, ನಮ್ಮ ಶಕ್ತಿ, ನಮ್ಮ ತಾಯಿ, ದೇವಿ, ಬೆಂಕಿ, ಸಿಡಿಲು. ಯಾವುದು ಮಂತ್ರವೋ, ಯಾವುದು ಶಕ್ತಿಯೋ, ಯಾವುದು ತಾಯಿಯೋ ಅದನ್ನು ನಿರಾಕರಿಸಲಾಗದು. ಇದಕ್ಕೆ ಕಾಯುವ ಮತ್ತು ಕೊಲ್ಲುವ ಎರಡೂ ಶಕ್ತಿಯೂ ಇದೆ. ಹಾಗಾಗಿ ಕರ್ನಾಟಕವನ್ನು ಕಟ್ಟಬೇಕಾಗಿರುವ ತಮ್ಮ ಕಾಲದ ಏಕೀಕರಣ ಹೋರಾಟದ ಹಿಂದೆ ಇಂತಹದ್ದೊಂದು ಅಗಾಧವಾದ ಭಾವನೆ, ವಿಚಾರ ಇತ್ತು ಎಂಬುದನ್ನು ಹೇಳುತ್ತಾರೆ. ಈ ವಿಚಾರವನ್ನು ಹಾಗೂ ಭಾವನೆಯನ್ನು ಕವಿ ಕರ್ನಾಟಕದ ರೂಪುಗೊಳ್ಳುವಿಕೆಯ ಭೌತಿಕ ಕಾರ್ಯದ ಒಂದಿದ್ದ ಪ್ರೇರಣೆಯಾಗಿ ಮುಂದಿಡುತ್ತಾರೆ. ಹೊಟ್ಟೆ-ಬಟ್ಟೆಯ. ಪಕ್ಷ-ಜಾತಿಯ.

ಅಹಂಕಾರ– ಸ್ವಾರ್ಥಗಳಾಚೆಗಿನ ಒಂದು ಸಮೃದ್ಧ ಕರ್ನಾಟಕದ ಆಶಯವನ್ನು ಕವಿ ಮುಂದಿಡುತ್ತಾರೆ.

ಕರ್ನಾಟಕದ ಕನಸು ಸಾಕಾರಗೊಂಡಾಗ ಕುವೆಂಪು ಬರೆದ 'ಕರ್ನಾಟಕ ರಾಜ್ಯೋದಯ ಶ್ರೀಗೀತೆ' ಕವಿತೆ ಭಾರತ ಮತ್ತು ಕರ್ನಾಟಕದ ಸಂಬಂಧವನ್ನು ಬಲಗೊಳಿಸುವ, ಬಾಂಧವ್ಯವನ್ನು ಸುಮಧುರ ಗೊಳಿಸುವ ಸ್ವರೂಪದಲ್ಲಿದೆ. ಜೊತೆಗೆ ಕರ್ನಾಟಕವನ್ನು ಈ ಕವಿತೆ ವ್ಯಾಖ್ಯಾನಿಸುತ್ತಿದೆ. ನಾಡಿನ ಸಾಂಸ್ಕೃತಿಕ ಹಿರಿಮೆಯು ರಾಜ್ಯೋದಯದೊಂದಿಗೆ ಹೊಸ ಗೌರವವನ್ನು ಪಡೆದ ಸಂದರ್ಭದಲ್ಲಿ ನಾಡಿನ ಜನಗಳಿಗೆ ಕರ್ನಾಟಕವನ್ನು ಕಟ್ಟಿಕೊಡುವ ಬಗೆ ವಿಶಿಷ್ಟವಾದುದು.

" ಬರಿಯ ಚದರ ಮೈಲಿಗಳಲ್ತು ಕರ್ನಾಟಕದ ದೇಶ ವಿಸ್ತೀರ್ಣಂ;
ನೆನೆ, ನೆನೆ, ಮನೋಮಯದ ಸಂಸ್ಕೃತಿಯ ಕೋಶ ವಿಸ್ತೀರ್ಣ ಮಂ
ಮರೆಯದಿರು ಚದರ ಸಂವತ್ಸರದ ಶತಮಾನಗಳ ಕಾಲ ವಿಸ್ತೀರ್ಣಮಂ,
ಪ್ರಾಣಮಯ ಭಾವಪ್ರದೇಶ ವಿಸ್ತೀರ್ಣಮಂ,
ಚಿದಾಕಾಶ ವಿಜ್ಞಾನ ವಿಸ್ತೀರ್ಣಮಂ! " [೧೪]

(ಕರ್ನಾಟಕ ರಾಜ್ಯೋದಯ ಶ್ರೀ ಗೀತೆ)

ಕರ್ನಾಟಕ ರಾಜ್ಯ ೧೯೫೬ರಲ್ಲಿ ರಚನೆಗೊಂಡಾಗ ಕವಿ ಕುವೆಂಪು ರಚಿಸಿದ ಕವಿತೆಯ ಸಾಲಿದು. ಕರ್ನಾಟಕ ಉದಯಗೊಂಡಾಗಲೇ ಕವಿ ಕರ್ನಾಟಕ ಅಂದರೆ ಏನು ಎನ್ನುವುದನ್ನು ನಿರೂಪಿಸಿರುವುದು ಇಲ್ಲಿನ ವೈಶಿಷ್ಟ್ಯತೆ. ಕರ್ನಾಟಕವನ್ನು, ಅದರ ವಿಸ್ತೀರ್ಣವನ್ನು ಕೇವಲ ಅದರ ಭೌಗೋಳಿಕ ವಿಸ್ತಾರದಿಂದ ನೋಡುವುದಲ್ಲ, ಎಷ್ಟು ಚದರ ಮೈಲಿಗಳಲ್ಲಿ ಕರ್ನಾಟಕ ವಿಸ್ತರಿಸಿದೆ ಎನ್ನುವುದರಿಂದ ಕರ್ನಾಟಕದ ಮಹತ್ತನ್ನು ಅಳೆಯಲಾಗದು. ಅದು ಅಳೆಯಲಾಗದಷ್ಟು ವಿಸ್ತಾರವನ್ನು ಬೇರೆ ಬೇರೆ ಸ್ವರೂಪಗಳಲ್ಲಿ ಹೊಂದಿದೆ. ಭೂ ವಿಸ್ತೀರ್ಣ ಒಂದು ನೆಲೆಯಾದರೆ ಅದಕ್ಕಿಂತಲೂ ವಿಸ್ತಾರವಾದ 'ಮನೋಮಯ ಸಂಸ್ಕೃತಿಯ ಕೋಶ' ಇದೆ. ಶತಮಾನಗಳ ಕಾಲ ವಿಸ್ತೀರ್ಣ ಇದೆ; ಪ್ರಾಣಮಯ ಭಾವ ಪ್ರದೇಶದ ವಿಸ್ತೀರ್ಣ ಇದೆ. ಈ ಮೂಲಕ ಕರ್ನಾಟಕ ಎಂಬ ರಚನೆಯ ಹಿಂದಿನ ಕಲ್ಪನೆಯ ಅಗಾಧತೆ, ಪ್ರಾಚೀನತೆ, ಭಾವ ಸ್ವರೂಪ ಏನು ಎನ್ನುವುದನ್ನು ತೋರಿಸುವ ಪ್ರಯತ್ನ ಇಲ್ಲಿದೆ. ಕರ್ನಾಟಕದ ಮನೋಮಯ ಸಂಸ್ಕೃತಿ ಕೋಶ ವಿಸ್ತೀರ್ಣ, ಅದರ ಕಾಲ ವಿಸ್ತೀರ್ಣ, ಪ್ರಾಣಮಯ ಭಾವ ಪ್ರದೇಶ ವಿಸ್ತೀರ್ಣದ

ಎದುರು ಭೂ ಪ್ರದೇಶದ ವಿಸ್ತೀರ್ಣ ನಗಣ್ಯವಾದುದು. ಕನ್ನಡಿಗರು ಕರ್ನಾಟಕವನ್ನು ಅದರ ಭೌಗೋಳಿಕ ಸ್ವರೂಪ, ವಿಸ್ತೀರ್ಣಗಳಿಂದ ಗ್ರಹಿಸಬೇಕಾಗಿಲ್ಲ. ಹಾಗೆಯೇ ಅನ್ಯರೂ ಕೂಡ ಕರ್ನಾಟಕವನ್ನು ಗ್ರಹಿಸಬೇಕಾದ ಬಗೆ ಯಾವುದು ಎಂಬುದನ್ನು ಇಲ್ಲಿ ತೋರಿಸುತ್ತಾರೆ. ಕರ್ನಾಟಕದ ಕಲ್ಪನೆ ಏಕೀಕರಣದ ಹಿನ್ನೆಲೆಯಿಂದ ನೋಡಿದಾಗ ಆಧುನಿಕವಾದರೂ, ಕರ್ನಾಟಕವನ್ನು ಪ್ರಾಚೀನ ಕಾಲದಿಂದಲೇ ಬಹು ಸ್ವರೂಪಗಳಲ್ಲಿ ಕಲ್ಪಿಸಲಾಗಿತ್ತು. ಕವಿರಾಜ ಮಾರ್ಗಕಾರನ ಕಲ್ಪನೆಯ ಕನ್ನಡ ನಾಡಿನ ವಿಸ್ತಾರದ ಕುರಿತ ಮಾತು ಕೂಡ ಕರ್ನಾಟಕದ ರಚನೆಯ ಸ್ವರೂಪವೇ ಆಗಿರುವುದನ್ನು ಕವಿತೆ ಗುರುತಿಸುತ್ತದೆ.

ಕರ್ನಾಟಕ ರೂಪುಗೊಳ್ಳಬೇಕಾದ ಸಂದರ್ಭದಲ್ಲಿ ಕವಿ ಕರ್ನಾಟಕವನ್ನು ಅದರ ವಿಶಿಷ್ಟತೆಯೊಂದಿಗೆ ಮುಂದಿಡುತ್ತಾರೆ. ಕನ್ನಡ ನಾಡು ಪ್ರಾಚೀನವೂ ಹೌದು. ನವೀನವೂ ಹೌದು. 'ಏಕೈಕ ಕರ್ನಾಟಕ' ಕವಿತೆಯಲ್ಲಿ ಕರ್ನಾಟಕದ ಕನಸು ನನಸಾಗುವಾಗ ಮೂರ್ತಗೊಳ್ಳುವ ಕರ್ನಾಟಕದ ಚಿತ್ರವನ್ನು ನೋಡಬಹುದು.

" ಕಾವೇರಿ ಸಿರಿಮುಡಿಯ, ಗೋದಾವರಿಯ ಮುಡಿಯ
ಮೂಡುಮಲೆಯೆಡದ ಗಡಿಯ
ಪಡುಗಡಲ ಬಲದ ತಡಿಯ
ವರ್ಣಶಿಲ್ಪದ ಕಲೆಯ ಚೆಲ್ವಿನ ಶಿಲೆಯ ಗುಡಿಯ
ಕನ್ನಡ ದಿಂಪು ನುಡಿಯ
ಕನಸು ನನಸಾಯಿತಿದೊ ಏಕೈಕ ಕರ್ನಾಟಕ
ಕಣ್ ನಟ್ಟು ಬಯಸಿ ಕಾಣ್ ದಿಕ್ ತಟಧ್ವಜಪಟ! [೧೫] (ಏಕೈಕ ಕರ್ನಾಟಕ)

ಈ ಕವಿತೆ ಅಮೂರ್ತವಾಗಿರುವ ಕರ್ನಾಟಕವನ್ನು ಮೂರ್ತಗೊಳಿಸುವ, ಎಲ್ಲೆಲ್ಲೊ ಹಂಚಿಹೋಗಿರುವ ಹಲವು ಆಡಳಿತಕ್ಕೊಳಪಟ್ಟು ,ಹಲವು ಸೀಮೆಗಳನ್ನು ಹೊಂದಿರುವ ಭೂಭಾಗವನ್ನು ಒಂದು ನಿಶ್ಚಿತ ಸೀಮೆಯೊಳಗೆ ಕಲ್ಪಿಸುವ ಬಗೆ ಮಹತ್ವದ್ದಾಗಿದೆ. ಆ ಮೂಲಕ ಛಿದ್ರವಾಗಿರುವ ಕನ್ನಡದ ನೆಲವನ್ನು 'ಏಕೈಕ ಕರ್ನಾಟಕ' ವನ್ನಾಗಿ ಪರಿಭಾವಿಸಲಾಗುತ್ತದೆ. ಕಾವೇರಿ ಮತ್ತು ಗೋದಾವರಿ ನದಿಗಳ, ನಡುವಿನ ಪೂರ್ವದ ಬೆಟ್ಟಸಾಲುಗಳು ಮತ್ತು ಪಶ್ಚಿಮದ ಕಡಲ ನಡುವಿನ, ವೈವಿಧ್ಯಮಯ ಶಿಲ್ಪಕಲೆಯ, ಕನ್ನಡ ನುಡಿಯ ಇಂಪು ಕೇಳುವ ಪ್ರದೇಶವನ್ನು ಒಳಗೊಂಡ ನಾಡು

ರೂಪುಗೊಳ್ಳಬೇಕಾಗಿದೆ. ಅದೇ ಕರ್ನಾಟಕ. ಹೀಗಿದ್ದೂ "ಕಾವೇರಿ ಮತ್ತು ಗೋದಾವರಿಗಳು ನಿತ್ಯವೂ ನಿರ್ದಿಗಂತವಾಗಿ ವಿಸ್ತರಿಸುತ್ತಿರುವ ಕರ್ನಾಟಕದ ಸಾಂಸ್ಕೃತಿಕ ಹಾಗೂ ಅಧ್ಯಾತ್ಮಿಕ ಭೂಮಿಕೆಯ ಗಡಿಗಳಿಗೆ ಸಂಕೇತ ಮಾತ್ರಗಳಾಗಿರಲಿ. ಅವು ಭಾವೋಪಯೋಗಿಗಳೇ ಹೊರತು ಲೋಕೋಪಯೋಗಿಗಳಾಗುವುದಿಲ್ಲ".[೧೬] ಎನ್ನುತ್ತಾರೆ. ಕುವೆಂಪು ಅವರು ಏಕೈಕ ಕರ್ನಾಟಕದ ಕನಸು 'ಏಕೀಕರಣ' ದ ಮೂಲಕ ನನಸಾದ ಕರ್ನಾಟಕ ಎನ್ನುವುದು ಪೂರ್ಣಗೊಂಡಿತು ಎಂದು ಭಾವಿಸಲಿಲ್ಲ. "ಏಕೀಕರಣದ ಕನಸು ನನಸಾಗಿರುವುದು ಒಂದು ಅಂಶದಲ್ಲಿ ಮಾತ್ರ. ಆಗಿರುವುದಕ್ಕಿಂತಲೂ ನೂರ್ಮಡಿ ಇದೆ ಮುಂದೆ ಆಗಬೇಕಾದ್ದು. ಅನೇಕ ರೂಪಗಳಲ್ಲಿ ಈ ಕರ್ನಾಟಕ ಆಗಬೇಕಾಗಿದೆ, ಅರಳಬೇಕಾಗಿದೆ, ಬೆಳೆಯಬೇಕಾಗಿದೆ. ಕೌಟುಂಬಿಕ ಕ್ಷೇಮ, ಮಕ್ಕಳ ಕ್ಷೇಮ, ಪಶುಪಕ್ಷಿಗಳ ಕ್ಷೇಮ, ಜನದ ನಾನಾ ವಿಧ ಕ್ಷೇಮ, ತತ್ವ ಕಾವ್ಯ ಕಲೆ ಅಧ್ಯಾತ್ಮ ಮೊದಲಾದ ಊರ್ಧ್ವ ಮುಖಸಾಹಸಗಳ ಮನೋವಿಕಾಸ ರೂಪದ ಕ್ಷೇಮ. ಇವುಗಳಲ್ಲಿ ಕರ್ನಾಟಕದ ಸೃಷ್ಟಿ ಮುಂದುವರಿಯುತ್ತಿದೆ"[೧೭] (ಶಿಶುರೂಪಿ– ಪಶುರೂಪಿ ......)ಎನ್ನುತ್ತಾರೆ. ಅಂದರೆ ಕರ್ನಾಟಕದ ಬೆಳವಣಿಗೆ ಅದರ ರಾಜಕೀಯ ಸ್ವರೂಪದ ರಚನೆಯೊಂದಿಗೆ ಪೂರ್ಣಗೊಳ್ಳುವುದಿಲ್ಲ ಎನ್ನುವುದು ಕವಿಯ ಆಶಯ.

ಈಗಾಗಲೇ ಇವೆಲ್ಲವೂ ಇದ್ದರೂ ಕರ್ನಾಟಕ ಎಂಬ ಹೆಸರಿನಿಂದ ಒಂದಾಗಿಲ್ಲ. ಹಾಗಾಗಿ ಕವಿ ಎಲ್ಲವನ್ನು ಒಳಗೊಂಡ 'ಏಕೈಕ ಕರ್ನಾಟಕ'ವನ್ನು ಬಯಸುತ್ತಿದ್ದಾರೆ. ಹೀಗೆ ರೂಪುಗೊಳ್ಳುವ ಕರ್ನಾಟಕವು ಭಾರತದ ಒಂದು ಭಾಗವಾಗಿಯೇ ತನ್ನಲ್ಲಿ ಧನ್ಯತೆ ಭಾವವನ್ನು ಪಡೆಯುತ್ತದೆ. 'ಭಾರತಾಂಬೆಯ ಕನ್ಯೆ ಕನ್ನಡಾಂಬೆಯೇ ಧನ್ಯೆ' ಎನ್ನುವಾಗ ಕನ್ನಡ ತಾಯಿಯ ಧನ್ಯತೆ ಅದು ಭಾರತಾಂಬೆಯ ಮಗಳಾಗಿ ಪಡೆದು ಕೊಂಡದ್ದು ಎಂಬ ಧ್ವನಿಯು ವಿಶೇಷವಾಗಿ ಕಾಣುತ್ತದೆ.

ಕನ್ನಡದ ಸಂದರ್ಭದಲ್ಲಿ ವಸಾಹತುಶಾಹಿಯ ಆಕ್ರಮಣದ ವಿರುದ್ಧ ಹಾಗೂ ಛಿದ್ರಗೊಂಡಿರುವ ಕನ್ನಡನಾಡನ್ನು ಮರಳಿ ಸಂಘಟಿಸುವ ಏಕೀಕರಣ ಚಳವಳಿಯ ಸಂದರ್ಭದಲ್ಲಿ ಜನರನ್ನು ಹೋರಾಟಕ್ಕೆ ಅಣಿಗೊಳಿಸುವಾಗ ವರ್ತಮಾನದ ದುಃಸ್ಥಿತಿಗೆ ಸಂಕೇತವಾಗಿ ಮತ್ತು ಹೋರಾಟಕ್ಕೆ ಸ್ಫೂರ್ತಿಯಾಗಿ ಬಳಕೆಯಾದ ಒಂದು ಸಾಂಸ್ಕೃತಿಕ ಚಿತ್ರ ಹಂಪಿಯದ್ದು. ಹಾಳಾದ ಹಂಪಿಯನ್ನು ಮತ್ತೆ ಮತ್ತೆ ತೋರಿಸುವುದರ ಮೂಲಕ ಕನ್ನಡದ ಸಂದರ್ಭದಲ್ಲಿ ನಾಡಿನ ಕುರಿತು, ರಾಷ್ಟ್ರದ ಕುರಿತು ಭಕ್ತಿ ಗೌರವವನ್ನು

ಹುಟ್ಟಿಸುವ ಪ್ರಯತ್ನ ನಿರಂತರವಾಗಿ ನಡೆದಿದೆ. ಕುವೆಂಪು ಅವರು ತಮ್ಮ 'ಹಂಪೆಯಲ್ಲಿ' ಕವಿತೆಯನ್ನು ತನ್ನ ಕಾಲದ ಕನ್ನಡ ನಾಡಿನ ಸ್ಥಿತಿಯ ಕನ್ನಡಿಯಾಗಿ ಚಿತ್ರಿಸುತ್ತಾರೆ.

" ಹಂಪೆಯಿದು ಕಲಿಯುಗದ ಹಸಿಯ ಹಿರಿ ಮಸಣ !
ಕನ್ನಡಾಂಬೆಯ ಮುಡಿಯು ಸಿಡಿದು ಒಡೆದುದು ಇಲ್ಲೆ
ನಿನಗೆ ಕಂಬನಿ ಇದೆಯೆ? ಕಬ್ಬಿಗನೆ, ಸುರಿಸು ಬಾ
ಕಾಶಿಗೇತಕೆ ಹೋಗುತಿಹೆ, ಯಾತ್ರಿಕನೆ ನೀನು?
ಹಂಪೆ ತೆಂಕಣ ಕಾಶಿ ; ಬೀರದಿಂ ಪುಡಿ ಪುಡಿಯೋ
ಮರಣದಿ ಪವಿತ್ರತರವಾದ ಕಾಶಿಯಿದು ಕೇಳ್
ಯೋಗಿ ವಿದ್ಯಾರಣ್ಯನಡಿಯ ಪುಡಿ ಇಹುದಿಲ್ಲಿ;
ಮೃತ್ಯು ಪಾವನಗೈದ ಶುಭತರ ಕ್ಷೇತ್ರವಿದು "[೧೮] (ಹಂಪೆಯಲ್ಲಿ)

ಮುರಿದು ಬಿದ್ದ ಹಂಪಿ ಮತ್ತೆ ಮತ್ತೆ ಕನ್ನಡಿಗರ ಮುಂದೆ ನಿಲ್ಲುತ್ತದೆ. ಆ ಮೂಲಕ ಮುರಿದು ಹೋದುದರ ಕಾರಣವನ್ನು, ಮುರಿದು ಹೋದುದರ ಪರಿಣಾಮವನ್ನು ಹಾಗೂ ವರ್ತಮಾನದಲ್ಲಿ ಪ್ರಜೆಗಳು ಎಚ್ಚೆತ್ತುಕೊಳ್ಳುವ ಅವಶ್ಯಕತೆಯನ್ನು ಈ ಕವಿತೆ ನಾಡಿನ ಜನತೆಗೆ ಸಾರಿ ಹೇಳುತ್ತದೆ. ಕವಿ 'ಕಲಿಯುಗದ ಹಿರಿ ಮಸಣ' ಎಂದು ಹೇಳುವ ಮೂಲಕ ಹಂಪಿಯ ಒಳಗೆ ಮಡುಗಟ್ಟಿದ ನೋವನ್ನು, ವೈಭವವೊಂದರ ನಾಶವನ್ನು ಹೇಳುತ್ತಿದ್ದಾರೆ. ಆ ಮೂಲಕ ಮರೆಯಾಗಿ ಹೋದ ನಾಡಿನ ನೈಜ ಚರ್ಯೆಯನ್ನು ಮತ್ತೊಮ್ಮೆ ನೆನಪಿಸಲಾಗುತ್ತದೆ. ಯಾವ ಹಂಪಿ ತನ್ನ ಕೀರ್ತಿ, ವೈಭವಗಳಿಂದ ಕನ್ನಡ ನಾಡಿನ ಮುಡಿಯಾಗಿತ್ತೋ ಅದು ಇಂದು ಒಡೆದು ಹೋಗಿರುವುದನ್ನು ತೋರಿಸುತ್ತಾರೆ. ಪುಣ್ಯ ಸಂಪಾದನೆಗಾಗಿ ಕನ್ನಡಿಗರು ಕಾಶಿ ಯಾತ್ರೆಯನ್ನೇ ಮಾಡಬೇಕಾಗಿಲ್ಲ, ಹಂಪಿಯೇ ತೆಂಕಣ ಕಾಶಿ. ಪವಿತ್ರವಾದ ಕಾಶಿಗೆ ಸಮ ಎಂದು ತೋರಿಸುತ್ತಾರೆ. ನಾಡಿನ ಯೋಗಿ ವಿದ್ಯಾರಣ್ಯರ ಸಂಚಾರದಿಂದ ಪವಿತ್ರಗೊಂಡ ನೆಲ ಇದು. ಸಾವನ್ನೂ ಪಾವನಗೊಳ್ಳುವಂತೆ ಮಾಡಿದ ಪುಣ್ಯಕ್ಷೇತ್ರ ಎನ್ನುತ್ತಾರೆ. ಹೀಗೆ ಹೇಳುವ ಮೂಲಕ ಕನ್ನಡಿಗರಿಗೆ ಇಂಥ ಹಂಪಿಯ ವರ್ತಮಾನದ ದು:ಸ್ಥಿತಿ ಮನಸ್ಸಿಗೆ ವೇದನೆಯನ್ನುಂಟು ಮಾಡುವುದು ಮತ್ತು ಈ ವೇದನೆಯ ಕಾರಣ

ಹಂಪಿಯ ಸ್ಥಿತಿ ಮಾತ್ರವಲ್ಲ, ತನ್ನ ನಾಡು ಕರ್ನಾಟಕ, ಭಾರತದ ಸ್ಥಿತಿಯೂ ಹೀಗೆಯೇ ಇದೆ ಎಂಬ ಅರಿವೂ ಕೂಡ ಉಂಟಾಗುತ್ತದೆ.

ಕುವೆಂಪು ಅವರ 'ಜಯಹೇ ಕರ್ನಾಟಕ ಮಾತೆ' ಕವಿತೆ ಕರ್ನಾಟಕದ ನಾಡ ಗೀತೆ ಎಂದು ಮಾನ್ಯ ಮಾಡಲ್ಪಟ್ಟ ಕವಿತೆ. ಈ ಕವಿತೆ ಕವಿಯ ನಾಡಿನ ಕಲ್ಪನೆಯನ್ನು, ಅದರ ಸಾಂಸ್ಕೃತಿಕ ಸ್ವರೂಪವನ್ನು ವೈಚಾರಿಕವಾಗಿ ವಿವರಿಸುತ್ತಿದೆ. ಈ ಕವಿತೆಯಲ್ಲಿ ಭಾರತ ಮತ್ತು ಕರ್ನಾಟಕದ ಸಂಬಂಧವನ್ನು ತಾಯಿ ಮಗಳ ಸಂಬಂಧದ ನೆಲೆಯಲ್ಲಿ ರೂಪಿಸಿದ್ದಾರೆ. " ತಾನು ರೂಪಿಸಿರುವ ಗುರುತು, ಸಮುದಾಯ ಮತ್ತು ಅದು ತನ್ನದೆಂದು ದಾವೆ ಹೂಡಿರುವ ಭೌಗೋಳಿಕ ಪ್ರದೇಶದ ಚರಿತ್ರೆಯನ್ನು ಬರೆಯುವಾಗ ಸಾಧ್ಯವಾದಷ್ಟು ಎಲ್ಲರನ್ನೂ ಒಗ್ಗೂಡಿಸುವಂತಹ, ಹಳೆಯ ಸಮುದಾಯಗಳ ಸಂಕೇತಗಳಿಗೆ, ವಿಚಾರಗಳಿಗೆ ಅದರಲ್ಲೂ ಆ ಸಮುದಾಯಗಳು ಸಾಂಸ್ಕೃತಿಕವಾಗಿ ಅಥವಾ ಜನಸಂಖ್ಯೆ ಹಾಗೂ ಆರ್ಥಿಕವಾಗಿ ಪ್ರಬಲವಾಗಿದ್ದರೆ ಪ್ರಾಮುಖ್ಯ ನೀಡಲಾಗುತ್ತದೆ. ಹಳೆಯ ಸಮುದಾಯಗಳ ಸಂಕೇತ ಮತ್ತು ವಿಚಾರಗಳನ್ನು ಒಂದು ಭಾಷಿಕ ಸಮುದಾಯವಾಗಿ ಬೆಸೆಯುವ ಕ್ರಿಯೆಯನ್ನು ಇದು ಮಾಡುತ್ತಿರುತ್ತದೆ. ಈ ನಿಟ್ಟಿನಲ್ಲಿ ಕುವೆಂಪುರವರ ರಾಷ್ಟ್ರಗೀತೆಯು ತನ್ನ ಉದ್ದೇಶವನ್ನು ಬಹುಮಟ್ಟಿಗೆ ಈಡೇರಿಸಿಕೊಂಡಿದೆ"[೧೯]. ಎಂಬ ವಿ.ಬಿ.ತಾರಕೇಶ್ವರರ ವಿಶ್ಲೇಷಣೆ ಅರ್ಥಪೂರ್ಣವಾಗಿದೆ.

"ಜಯ್ ಭಾರತ ಜನನಿಯ ತನುಜಾತೆ
ಜಯಹೇ ಕರ್ನಾಟಕ ಮಾತೆ!
ಜಯ್ ಸುಂದರ ನದಿವನಗಳ ನಾಡೆ
ಜಯ ಹೇ ರಸಋಷಿಗಳ ಬೀಡೆ !
ಭೂ ದೇವಿಯ ಮಕುಟದ ನವಮಣಿಯೆ
ಗಂಧದ ಚಂದದ ಹೊನ್ನಿನ ಗಣಿಯೆ
ರಾಘವ ಮಧುಸೂದನರವ ತರಿಸಿದ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ ! " [೨೦] (ಜಯ ಹೇ ಕರ್ನಾಟಕ ಮಾತೆ)

ನಾಡಿನ ಏಕೀಕರಣಕ್ಕಾಗಿ ನಡೆಯುತ್ತಿದ್ದ ಚಳುವಳಿಯ ಕಾಲಘಟ್ಟದಲ್ಲಿ ಹಲವು ನಾಡಗೀತೆಗಳು ರಚನೆಯಾಗಿದ್ದವು. " ಆ ಕಾಲದ ನಾಡಗೀತೆಗಳು ಭಾಷಾಭಿಮಾನವನ್ನು ಉಕ್ಕಿಸುವ ರಚನೆಯಾಗಿದ್ದವು. ಅವುಗಳಲ್ಲಿ ಮೇಲಿಂದ ಮೇಲೆ ಕನ್ನಡಿಗರ ಶೌರ್ಯ, ಹಿರಿಮೆ, ನಾಡಿನ ವಿಸ್ತಾರಗಳ ಉಲ್ಲೇಖ ಬರುತ್ತದೆ. ಅನಿವಾರ್ಯ ಎಂಬಂತೆ ಮತ್ತೆ ಮತ್ತೆ

ಕರ್ನಾಟಕದ ರಾಜಮನೆತನಗಳ ಹೆಸರುಗಳನ್ನು ಹೇಳಲಾಗುತ್ತದೆ. ಇವೆಲ್ಲವೂ ಕರ್ನಾಟಕದ ರಚನೆಯ ಹಿಂದೆ ಇದ್ದ ಒತ್ತಡಗಳನ್ನು ಹೊರಗಿಡುತ್ತವೆ. ಮೊದಲ ಕನ್ನಡ ರಾಜನೆಂದು ಕದಂಬ ವಂಶದ ಮಯೂರವರ್ಮನನ್ನು ಗುರುತಿಸುವುದು, ನಿಜವಾದ ಕರ್ನಾಟಕ ಸಾಮ್ರಾಜ್ಯ ಸ್ಥಾಪಕರು ವಿಜಯನಗರದ ಅರಸರುಗಳು ಆಗಿದ್ದರೆಂದು ಘೋಷಿಸುವುದು ಈ ದೃಷ್ಟಿಕೋನಕ್ಕೆ ನಿದರ್ಶನಗಳು. ಏಕೀಕರಣದ ಪರವಾಗಿದ್ದ ಜನರ ಮನಸ್ಸಿನಲ್ಲಿ ಚಾರಿತ್ರಿಕ ಮರುಗಳಿಕೆಯ ಉದ್ದೇಶ ಸ್ಪಷ್ಟವಾಗಿದೆ. ಮತ್ತು ಈ ಮರುಕಳಿಕೆಯೂ ಒಂದು ಪ್ರದೇಶದ ನೆಲೆಯಲ್ಲಿಯೇ ಕೆಲಸ ಮಾಡುತ್ತದೆ." [೨೧]

ಕುವೆಂಪು ಅವರೇ ಹೇಳುವಂತೆ " ಕರ್ನಾಟಕದ ಕವಿ ತನ್ನ ಗಾಥೆಯ ಒಂದೊಂದು ಪದ್ಯದ ಕೊನೆಯ ಚರಣವನ್ನೂ; ಭಾರತದ ಏಕತ್ವ ರಕ್ಷಣೆಯ ಮಂತ್ರವನ್ನಾಗಿ ಘೋಷಿಸಿದ್ದಾನೆ. ರಾಘವ ಮಧುಸೂದನರವತರಿಸಿದ ಭಾರತ ಜನನಿಯ ತನುಜಾತೆ; ಜಯಹೇ ಕರ್ನಾಟಕ ಮಾತೆ !' 'ಕಪಿಲ ಪತಂಜಲಿ ಗೌತಮ ಜಿನನುತ ಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ ........' ಇಲ್ಲಿ ಕರ್ನಾಟಕ ಮಾತೆಗೆ ತನ್ನದೇ ಆಗಿರುವ ಪ್ರತ್ಯೇಕ ಅಸ್ತಿತ್ವ ಇಲ್ಲ; ಸರ್ವದಾ ತಾಯಿ ಭಾರತಿಯ ಮಗಳಾಗಿಯೇ ಇರುವುದರಿಂದ ಮಾತ್ರ ಆಕೆಯ ಅಸ್ತಿತ್ವಕ್ಕೆ ರಕ್ಷೆ ಒದಗುತ್ತದೆ. ಅದರ ಘೋಷಣೆಗೆ ಅಮೃತ ಸಹಾಯ ಲಭಿಸುತ್ತದೆ." [೨೨] ಎಂದು ಹೇಳುವ ಮೂಲಕ ತನ್ನ ನಿಲುವನ್ನು ಸ್ಪಷ್ಟಪಡಿಸುತ್ತಾರೆ.

ನಾಡಗೀತೆ ಎಂಬುದರ ಕಟ್ಟುವಿಕೆಯ ಕ್ರಿಯೆಯು ತನ್ನಲ್ಲೇ ಒಂದು ಸಾಂಸ್ಕೃತಿಕ ಪರಂಪರೆಯನ್ನು ತನಗೆ ಭೂಷಣ ಎಂದೆನ್ನಿಸುವಂತೆ ಕಟ್ಟುತ್ತದೆ. ಆ ಮೂಲಕ ಒಂದು ಸಾಂಸ್ಕೃತಿಕ ನೆನಪನ್ನು ಆ ಭಾಷಾ ಸಮುದಾಯದಲ್ಲಿ ಉಂಟು ಮಾಡುತ್ತದೆ. ಮತ್ತು ಮರೆತು ಹೋಗಬಹುದಾದುದನ್ನು 'ಸ್ಮೃತಿ'ಗೆ ತರುವ ಕೆಲಸ ಆ ಮೂಲಕ ನಡೆಯುತ್ತದೆ. ಒಂದು ಚರಿತ್ರೆ ನಾಡಗೀತೆಯ ಮೂಲಕ ರೂಪು ಪಡೆಯುತ್ತದೆ. ಆ ಚರಿತ್ರೆ ನಾಡಿನ ಬಹುಚರಿತ್ರೆಗಳಿಂದ ಆಯ್ದು ಕಟ್ಟಿದ ಚರಿತ್ರೆಯ ಸ್ವೀಕೃತ ಮಾದರಿಯಾಗುತ್ತದೆ. ಈ ಮಾದರಿಯ ಚರಿತ್ರೆ ಗತದಿಂದ ಆಯ್ದು ಆಪ್ತವಾದುದರ ಜೋಡಣೆಯೇ ಆಗಿರುತ್ತದೆ. ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಒಟ್ಟು ಬದುಕನ್ನು ಈ ನಾಡಗೀತೆ ಒಂದು ವಿನ್ಯಾಸದಲ್ಲಿ ಪೋಣಿಸುತ್ತದೆ. ಈ ಪೋಣಿಸುವಿಕೆಯೇ ನಾಡನ್ನು ಕಟ್ಟುವ ಕ್ರಿಯೆಯ ಬೌದ್ಧಿಕ ಅಭಿವ್ಯಕ್ತಿ. ಒಂದು ಸೂತ್ರವಾಗಿ ಒಂದರ ಜೊತೆ ಇನ್ನೊಂದು ಇಲ್ಲಿ

ಜೋಡಿಸಲ್ಪಡುತ್ತದೆ. " ಕುವೆಂಪು ಅವರ ನಾಡಗೀತೆ ಭಾರತದಲ್ಲಿ ಅಂತರ್ಗತವಾದ ಕರ್ನಾಟಕವನ್ನು ಕಲ್ಪಿಸುತ್ತದೆ. ಭಾರತ ಮತ್ತು ಕರ್ನಾಟಕಗಳ ನಡುವೆ ತಾಯಿ ಮಗಳ ಸಂಬಂಧವನ್ನು ರೂಪಿಸಿದ್ದಾರೆ. ಧಾರ್ಮಿಕ ಮತ್ತು ರಾಜಕೀಯ ಚರಿತ್ರೆಗಳ ಒಂದು ಅಖಿಲ ಭಾರತ ಪರಂಪರೆಯನ್ನು ಸಂಯೋಜಿಸಲಾಗಿದೆ. ಇವೆರಡರ ಜೊತೆಗೆ ಕವಿಗಳ ಪರಂಪರೆಯೊಂದನ್ನು ನೆನಪಿಸಿಕೊಳ್ಳುತ್ತಿದೆ"[೨೩] ಎಂಬ ಕೆ.ವಿ.ನಾರಾಯಣ ಅವರ ಗ್ರಹಿಕೆ ಸೂಕ್ತವಾಗಿದೆ.

ತಮ್ಮತನದ ಅರಿವನ್ನು ಕಳೆದುಕೊಂಡಿದ್ದ ಜನಗಳನ್ನು ಅವರ ನಾಡಿನ ಐತಿಹಾಸಿಕ, ಧಾರ್ಮಿಕ ಸಂಗತಿಗಳ ನೆನಪಿನ ಮೂಲಕ ಮತ್ತೆ ಅವರನ್ನು ಅಂತಹ ನೆನಪುಗಳಿಗೆ ಕೊಂಡೊಯ್ಯುವ ಪ್ರಯತ್ನ ಸಾಮಾಜಿಕವಾಗಿಯೂ ನಡೆದಿತ್ತು. ಸಾಹಿತ್ಯದ ಮೂಲಕವು ನಡೆದಿದೆ. ಇತಿಹಾಸದಲ್ಲಿ ಶ್ರೇಷ್ಠ ರಾಜರುಗಳ ಮಹಾನ್ ಸಾಮ್ರಾಜ್ಯದ ನೆನಪುಗಳ ಮೂಲಕ ಇಂತಹ ಪ್ರಯತ್ನಗಳು ನಡೆದಿತ್ತು. ಕುವೆಂಪು ಅವರ 'ಶಿಲಾಭೇರಿ' ಇಂತಹ ಸ್ವರೂಪದ ಕವನಗಳಲ್ಲೊಂದು. ನಾಡಿನ ಮೂಲೆ ಮೂಲೆಗಳಲ್ಲೂ ಇರುವ ವೀರಗಲ್ಲುಗಳು ತಮ್ಮ ಸಾಹಸವನ್ನು ನೆನಪಿಸಿಕೊಳ್ಳುವಂತೆ ಈ ಕವಿತೆ ಇದೆ.

" ಸತ್ತವರು ನಾವಲ್ಲ, ನೀವೆಂದು ಸಾರುತಿವೆ.
ಆಳಾಳ್ಗೆ ಕೈದೋರಿ ಮೌನಗಳೆ ದೂರುತಿವೆ.
ನಮ್ಮಂದಿನಾ ಕೆಚ್ಚು
ನಮ್ಮಂದಿನಾ ನೆಚ್ಚು
ನಿಮ್ಮೊಳಿಂದುದ್ಭವಿಸಲಾ ದಿವ್ಯ ಹುಚ್ಚು !'
ಎಂದಣಕಿ ಚೀರುತಿದೆ
ಹರಸಿ ಹಾರುತಿವೆ." [೨೪] (ಶಿಲಾಭೇರಿ)

ವೀರಗಲ್ಲುಗಳಲ್ಲಿ ಸ್ಥಾನ ಪಡೆದ ನಾಡಿನ ವೀರರ ಸಾವನ್ನು ಕವಿ ಸಾಹಸವಾಗಿ ಬಣ್ಣಿಸುತ್ತಾರೆ. ಅವರ ಬಲಿದಾನವು ಹಲವು ಕಾರಣಗಳಿಗಾಗಿ ಸಂಭವಿಸಿದೆ. ಇಂತಹ ಬಲಿದಾನವು ಒಂದೊಮ್ಮೆ ನಾಡಿಗಾಗಿಯೂ ನಡೆದಿತ್ತು. ಈ ಬಲಿದಾನವನ್ನು ನೆನಪಿಸುವ ಕವಿಯ ಉದ್ದೇಶವನ್ನು ನಾವು ಅರ್ಥಮಾಡಿಕೊಳ್ಳಬೇಕು. ಇನ್ನು ಸ್ವಾತಂತ್ರ್ಯ ಪಡೆಯುವ ಪೂರ್ವದಲ್ಲಿ ನಾಡಿನ ಏಕೀಕರಣಕ್ಕೂ ತೀವ್ರವಾಗಿ ಹೋರಾಟ ನಡೆಯುತ್ತಿದ್ದಾಗ ಈ

ಕವಿತೆ ರಚನೆಯಾಗಿದೆ. ಅಂದರೆ ನಾಡಿಗಾಗಿ ಬಲಿದಾನ ಮಾಡಿದ ಅವರ ಸಂದರ್ಭಕ್ಕೂ, ಈ ಕವನ ಪ್ರಸ್ತಾಪಿಸುತ್ತಿರುವ ಕಾಲಕ್ಕೂ ಕಾಲದ ಅಂತರ ತುಂಬಾ ಇರುವುದಾದರೂ ಸನ್ನಿವೇಶದಲ್ಲಿ ಬಹು ವ್ಯತ್ಯಾಸವೇನೂ ಇಲ್ಲ. ಈಗಲೂ ಪರಕೀಯತೆಯ ದಾಸ್ಯದಲ್ಲಿ ಛಿದ್ರಗೊಂಡ ನಾಡಿನೊಳಗೆ ಬದುಕುತ್ತಿದ್ದೇವೆ ಎಂಬುದನ್ನು ನೆನಪಿಟ್ಟುಕೊಂಡು ಕವಿ ಈ ಸನ್ನಿವೇಶವನ್ನು ಉದ್ದೇಶಪೂರ್ವಕವಾಗಿ ಕವಿತೆಯ ಮೂಲಕ ಕಟ್ಟಿ ಕೊಡುತ್ತಿದ್ದಾರೆ. ಪರರ ಕೈಯಲ್ಲಿ ಆಳಿಸಿ ಕೊಳ್ಳುವವರನ್ನು ವ್ಯಂಗ್ಯ ಮಾಡುವಂತೆ 'ಸತ್ತವರು ನಾವಲ್ಲ, ನೀವೆಂದು ಸಾರುತಿದೆ' ಎಂಬ ಮಾತುಗಳನ್ನಾಡುತ್ತಾರೆ. ಆ ಮೂಲಕ ಶೌರ್ಯದ ಬಲಿದಾನವು ಬದುಕಾಗಿಯೂ, ಹೇಡಿತನದ ಬದುಕು ಸಾವಾಗಿಯು ಪರಿಗಣಿಸಲ್ಪಡುತ್ತದೆ. ಈ ಇಡೀ ಕವಿತೆ ನಾಡಿಗಾಗಿ ಹೋರಾಡದ ಬದುಕನ್ನು ಅಣಕಿಸುವಂತಿದೆ.

ಕುವೆಂಪು ಕೇಂದ್ರ ಸರಕಾರದ ತ್ರಿಭಾಷಾ ಸೂತ್ರವನ್ನು ಪ್ರಬಲವಾಗಿ ವಿರೋಧಿಸಿದ್ದರು. ಮಾತೃಭಾಷೆಯ ಮೇಲೆ ಅನ್ಯಭಾಷೆಗಳನ್ನು ಒತ್ತಾಯಪೂರ್ವಕವಾಗಿ ಹೇರುವ ಕುರಿತು ಅವರ ವಿರೋಧವಿತ್ತು. ಭಾವೈಕ್ಯತೆಯ ಹೆಸರಲ್ಲಿ ಸರಕಾರ ಮುಂದಿಟ್ಟ ಸೂತ್ರ ಕನ್ನಡ ಭಾಷೆಗೆ ಅಪಾಯ ತರುವ ಸಾಧ್ಯತೆಯನ್ನು ಮನಗಂಡಿದ್ದರು. ಇದನ್ನು ಅವರು ತಮ್ಮ 'ಭಾವೈಕ್ಯತೆ' ಕವಿತೆಯಲ್ಲಿ ಹೀಗೆ ನಿರೂಪಿಸಿದ್ದಾರೆ.

"ನಿನಗೆ ಏಕೆ ಬೇರೆ ಭಾಷೆ ?
ಮೆಹೆಹೆ! ಮೆಹೆಹೆ! ಮೆಹೆಹೆ! ಮೆಹೆಹೆ!
ಬರಿಯ ಗುಡ್ಡಗಾಡು ಭಾಷೆ !
ನನ್ನದೊ ಅದು ವಿಶ್ವ ಭಾಷೆ !
ಪ್ರಪಂಚಕೇ ರಾಷ್ಟ್ರ ಭಾಷೆ!
ನಾನು ಬೇರೆ ಎಂಬ ಭ್ರಾಂತಿ
ಅದೇ ಮೂಲಜಗಕ್ಕ ಶಾಂತಿ !" [೨೫] (ಭಾವೈಕ್ಯತೆ)

ವಿಶ್ವಭಾಷೆಯ ಹೆಸರಿನಲ್ಲಿ ನಾಡ ಭಾಷೆಯನ್ನು ಕೊಲ್ಲುವ ಸಂಚಿನ ಬಗ್ಗೆ ಕವಿ ಇಲ್ಲಿ ಧ್ವನಿ ಎತ್ತುತ್ತಾರೆ. ನಾಡ ಭಾಷೆಯನ್ನು 'ಗುಡ್ಡಗಾಡು ಭಾಷೆ' ಎಂದು ಹೀಯಾಳಿಸಿ ಅದಕ್ಕೆ ಪ್ರತಿಯಾಗಿ ತಾನು 'ವಿಶ್ವಭಾಷೆ' 'ಪ್ರಪಂಚಕ್ಕೆ ರಾಷ್ಟ್ರಭಾಷೆ' ಎಂಬ ಅನ್ಯಭಾಷೆಗಳ ಅಹಂಕಾರದಿಂದ ಕನ್ನಡಕ್ಕೆ ಎದುರಾಗಬಹುದಾದ ಅಪಾಯವನ್ನು ಕವಿ ಮನಗಂಡು ಕನ್ನಡಿಗರನ್ನು ಎಚ್ಚರಿಸುತ್ತಾರೆ.

೩.೩ **ಕುವೆಂಪು ಕವಿತೆಗಳು ಚಿತ್ರಿಸಿದ 'ನಾಡಿ'ನ ಒಟ್ಟು ಸ್ವರೂಪ:**

ಕುವೆಂಪು ಅವರ ಕವಿತೆಗಳಲ್ಲಿ ಚಿತ್ರಿತವಾದ ನಾಡು ಸಾಂಸ್ಕೃತಿಕ ಏಕೀಕರಣದ ಆಶೋತ್ತರಗಳನ್ನು ಬಿಂಬಿಸುತ್ತಾ, ಕನ್ನಡಕ್ಕೆ ಒದಗಿರುವ ಆಪತ್ತಿನಿಂದ ಕನ್ನಡವನ್ನು ಪಾರುಮಾಡಿ ಅದನ್ನು ಮತ್ತೆ ನಾಡಿನ ಮುಕುಟ ಪ್ರಾಯವಾಗಿಸುವ ಚಿಂತನೆ ಇದೆ. ಅನ್ಯಭಾಷೆಗಳ ಹೊರೆಯಿಂದ ಕನ್ನಡ ನುಡಿಗೆ ಆಪತ್ತು ಒದಗಿ ಬಂದಿದೆ ಎಂದು ಆತಂಕದಿಂದ ಹೊರಟ ಕವಿಗೆ ಕನ್ನಡಿಗರ ನಿಷ್ಕ್ರಿಯತೆಯು ಇದಕ್ಕೆ ಕಾರಣ ಎಂಬ ಅರಿವಾಗುತ್ತದೆ. ಭಾಷೆಯನ್ನು ಉಳಿಸುವುದಕ್ಕಾಗಿ ಕನ್ನಡಿಗರು ವೀರಾವೇಷವನ್ನು ತೋರಿಸಬೇಕಾಗುತ್ತದೆ ಎಂದು ಕನ್ನಡಿಗರನ್ನು ಎಚ್ಚರಿಸುತ್ತಾರೆ. ಆದರೆ ಅವರು ಎಂದೂ ಕರ್ನಾಟಕವನ್ನು ಭೌಗೋಳಿಕ ಗಡಿಗಳ ನೆಲೆಯಿಂದ ಪರಿಭಾವಿಸಿದವರಲ್ಲ. ಎಲ್ಲೆಲ್ಲಿ ಕನ್ನಡ ಭಾಷೆ ಮೊಳಗುತ್ತದೋ ಅದೆಲ್ಲ ಕರ್ನಾಟಕವೇ ಎಂಬ ಚಿಂತನೆ ಅವರದು.

ಕವಿಯ ಕರ್ನಾಟಕ ಅದು ಸಾಂಸ್ಕೃತಿಕ ಕರ್ನಾಟಕ. ಹಾಗಾಗಿ ಅಲ್ಲಿ ನೃಪತುಂಗನೇ ಚಕ್ರವರ್ತಿಯಾಗಿ ಮೆರೆಯುವುದು. ಕರ್ನಾಟಕ ಕೇವಲ ಮಣ್ಣಿನ ಹೆಸರಲ್ಲ. ಅದು ದೇವಿ– ತಾಯಿ– ಸಿಡಿಲು– ಮಂತ್ರ – ಚಂಡಿ ಎಲ್ಲವೂ ಆಗುತ್ತದೆ. ಭೂ ವಿಸ್ತೀರ್ಣದ ನೆಲೆಯ ಕರ್ನಾಟಕ ಕವಿಗೆ ಮುಖ್ಯವಾಗುವುದಿಲ್ಲ. ಅದನ್ನು ಮೀರಿ ಮನೋಮಯ, ಪ್ರಾಣಮಯ ಸ್ವರೂಪದ, ಕಾಲವಿಸ್ತೀರ್ಣದ ಕರ್ನಾಟಕವನ್ನು ಗ್ರಹಿಸುತ್ತಾರೆ. ಕನ್ನಡಿಗರಿಗೆ ಮರೆತುಹೋದ ಕನ್ನಡದ ಶಕ್ತಿಯನ್ನು, ಅದರ ಮಹತ್ತನ್ನು ಚರಿತ್ರೆಯ ಗರ್ಭದಲ್ಲಿ ಹುದುಗಿಹೋದ ಸಾಮ್ರಾಜ್ಯದ ನೆನಪಿನಲ್ಲಿ ಕನ್ನಡಿಗರನ್ನು ಎಚ್ಚರಗೊಳಿಸುವ ಪ್ರಯತ್ನ ಮಾಡುತ್ತಾರೆ.

ಅವರ ಕಲ್ಪನೆಯ ನಾಡು 'ಭಾರತ ಜನನಿಯ ತನುಜಾತೆ' ಅಂದರೆ ಭಾರತಮಾತೆಯ ಮಗಳಾದ ನಾಡು. ಇಲ್ಲಿ ಕರ್ನಾಟಕ ಮಗಳು. ಇವುಗಳ ನಡುವಿನ ಸಂಬಂಧ ಬಂಧುತ್ವದ ನೆಲೆಯದ್ದು. ಸಂಘರ್ಷರಹಿತವಾದದ್ದು. ನಾಡಿನ ವೈವಿಧ್ಯತೆಯನ್ನು ಅದರೊಳಗಿನ ಬಹು ಜನಾಂಗವನ್ನು ಜೋಡಿಸುವ ನೆಲೆಯಲ್ಲಿ ಅವರ ಕಲ್ಪನೆಯ ನಾಡು ರೂಪು ತಳೆಯುತ್ತದೆ. ಯಾವ ಪರಂಪರೆಯನ್ನು ಸಂಯೋಜಿಸಿದರೆ ಒಂದು ಸಮೃದ್ಧವಾದ ನಾಡು ತಲೆ ಎತ್ತಿನಿಲ್ಲಬಹುದೋ ಅಂತಹ ಪರಂಪರೆಯನ್ನು

ನಾಡಗೀತೆಯೊಳಗೆ ಜೋಡಿಸಿ ಬಹುಜನಾಂಗದ ವೈವಿಧ್ಯತೆ, ಭಾರತದ ಜೊತೆಗಿನ ಬಂಧುತ್ವವನ್ನು ಕಲ್ಪಿಸಿ ಸಮನ್ವಯವನ್ನು ಸಾಧಿಸುತ್ತಾರೆ.

ವಿಶ್ವಮಾನವತೆಯನ್ನು ಸಾರಿದ ಕವಿಗೆ ಕನ್ನಡ, ಕನ್ನಡ ನಾಡು ಮಿತಿಯಾಗುವುದಿಲ್ಲ. ತನ್ನ ಸ್ಥಳೀಯ ಭಾಷೆಯ ಮೂಲಕವೇ ಅವರು ವಿಶ್ವಕ್ಕೆ ಮುಖಾಮುಖಿಯಾಗುತ್ತಾರೆ. ತನ್ನ ಭಾಷೆಯ ತನ್ನ ನಾಡಿನ ಶಕ್ತಿಯಿಂದಲೇ ವಿಶ್ವದ ಎಲ್ಲಾ ಒಳಿತಿನ ಸಾರವನ್ನು ಹೀರಿಕೊಂಡು ಅದನ್ನು ಅಭಿವ್ಯಕ್ತಿ ಪಡಿಸುತ್ತಾರೆ. ಮರವೊಂದು ನೆಲದಲ್ಲಿ ಬಲವಾಗಿ ಬೇರು ಚಾಚಿಕೊಂಡು ದೃಢಗೊಂಡು ವಿಶ್ವ ವಿಶಾಲವಾಗಿ ರೆಂಬೆ ಕೊಂಬೆಗಳನ್ನು ಹರಡಿದಂತೆ ಕುವೆಂಪು ಅವರು ಕರ್ನಾಟಕದಲ್ಲಿ ತನ್ನ ಕನ್ನಡದ ಮೂಲಕ ಬಲವಾಗಿ ಬೇರಿಳಿಸಿಕೊಂಡೇ ವಿಶ್ವಮಾನವತೆಯ ಸಂದೇಶವನ್ನು ಸಾರಿದರು. ಇದು ಅವರ ದ್ವಂದ್ವ ರಹಿತ, ಸಂಘರ್ಷರಹಿತ ನಾಡಿನ ಕಲ್ಪನೆಯ ರೀತಿ.

**೩.೪ ಬೇಂದ್ರೆ ಕವಿತೆಗಳಲ್ಲಿ ನಾಡಿನ ಚಿಂತನೆ:**

ಕರ್ನಾಟಕದ ಏಕೀಕರಣಕ್ಕಾಗಿ ಉತ್ತರ ಕರ್ನಾಟಕದಲ್ಲಿ ನಡೆಯುತಿದ್ದ ಹೋರಾಟದ ಬಹುದೊಡ್ಡ ಶಕ್ತಿಗಳಲ್ಲಿ ದ.ರಾ.ಬೇಂದ್ರೆಯವರೂ ಒಬ್ಬರು. ಛಿದ್ರಗೊಂಡ ಕರ್ನಾಟಕವನ್ನು ಮತ್ತೆ ಒಂದುಗೂಡಿಸುವ ಆಶಯವನ್ನು ಬಹುವಾಗಿ ವ್ಯಕ್ತಪಡಿಸಿದವರಲ್ಲಿ ಬೇಂದ್ರೆಯವರು ಮುಖ್ಯರು. ವಸಾಹತುಶಾಹಿಗೆ ಪ್ರತಿರೋಧವನ್ನು ತೋರುತ್ತಲೇ ರಾಷ್ಟ್ರೀಯತೆಯ ಕುರಿತು ಚಿಂತನೆಗಳನ್ನು ಪ್ರಕಟಿಸಿದಂತೆ ಅಖಂಡ ಕರ್ನಾಟಕದ ಕಲ್ಪನೆಯನ್ನು ಮುಂದಿಟ್ಟು ಅದಕ್ಕಾಗಿ ತೀವ್ರವಾಗಿ ಸ್ಪಂದಿಸಿದವರು.

ಬೇಂದ್ರೆ ಧಾರವಾಡದ ತನ್ನ ನೆಲದ ಮೂಲಕ ಕರ್ನಾಟಕವನ್ನು ಸಾಕ್ಷೀಕರಿಸುತ್ತಾರೆ. 'ಧಾರವಾಡದ ತಾಯಿ'ಯ ಮೂಲಕ 'ಕನ್ನಡ ತಾಯಿ'ಯನ್ನು ಕಾಣುತ್ತಾರೆ. ತಾವು ವಾಸಿಸುವ ಊರಿನ ಮೂಲಕ ಕನ್ನಡ ನಾಡನ್ನು ನೋಡುವ, ಗುರುತಿಸುವ ಬಗೆ ಬಹಳ ವಿಶಿಷ್ಟವಾದುದು ಮತ್ತು ಮುಖ್ಯವಾದುದು. ಕನ್ನಡಿಗರು ಒಂದು ಕಾಲದಲ್ಲಿ ನಡೆಸಿದ್ದ ವೈಭವದ ದಿನಗಳನ್ನು ನೆನಪಿಸುತ್ತಲೇ ಸಮಕಾಲೀನ ಸಂದರ್ಭದಲ್ಲಿ ಛಿದ್ರಗೊಂಡಿರುವ ವಿಷಾದನೀಯ ಸನ್ನಿವೇಶಗಳ ಅರಿವನ್ನು ತಂದು ಕೊಡುವಂತಹ ಆಶಯ ಬೇಂದ್ರೆ ಕವಿತೆಗಳಲ್ಲಿ ವ್ಯಕ್ತವಾಗುತ್ತದೆ. ರಾಷ್ಟ್ರವನ್ನು

ತಾಯಿಯಾಗಿ, ನಾಡನ್ನು ಮಗಳಾಗಿ ನೋಡುವುದು ಆ ಕಾಲದಲ್ಲಿ ಸಹಜ ಸಂಗತಿಯಾಗಿತ್ತು. ಬೇಂದ್ರೆಯವರ ಕವಿತೆಗಳಲ್ಲಿ ಕೂಡ ಈ ಆಶಯವನ್ನು ಸ್ಪಷ್ಟವಾಗಿ ನೋಡಬಹುದಾಗಿದೆ. ಹೀಗಿದ್ದೂ "ಬೇಂದ್ರೆಯವರ ಸಾಮಾಜಿಕ ಕವಿತೆಗಳು ನಾಡಿನ ಗತ ವೈಭವವನ್ನು ಕುರಿತು ಹಾಡುವುದಿಲ್ಲ. ಬದಲಿಗೆ ಇಲ್ಲಿನ ಬಡತನ, ಕ್ರೌರ್ಯ (ತುತ್ತಿನ ಚೀಲ) ಶೋಷಣೆ, ಸಾಮಾಜಿಕ ಅಸಮಾನತೆ (ಕುರುಡು ಕಾಂಚಾಣ) ಬದುಕಿನ ಅತಾರ್ಕಿಕವಾದ ಅಸಮತೋಲನಗಳು (ಪುಟ್ಟ ವಿಧವೆ) ಮುನ್ನೆಲೆಗೆ ಬರುತ್ತದೆ. ಆದರ್ಶೀಕೃತ ನಾಡಿನ ಕಲ್ಪನೆಯ ಆಚೆಗಿನ ನಿಷ್ಠುರ ವಾಸ್ತವದತ್ತ ಬೆರಳು ಚಾಚುತ್ತವೆ. ಬೇಂದ್ರೆಯವರ ಕವಿತೆಗಳ ನಾಡು ಅದರ ವಿಕಾರವನ್ನೂ ವಿವರಿಸುತ್ತದೆ." [೨೬] ಎಂಬ ಬಿ.ಯು.ಸುಮಾ ಅವರ ಅಭಿಪ್ರಾಯ ಬೇಂದ್ರೆಯವರ ಕವಿತೆಗಳನ್ನು ಅರ್ಥೈಸಲು ಹೊಸ ದಾರಿಯೊಂದನ್ನು ತೆರೆದಿಡುತ್ತದೆ.

ಬೇಂದ್ರೆಯವರಿಗೆ ಕರ್ನಾಟಕ ಬರಿಯ ನಾಡು ಅಲ್ಲ. ಅದಕ್ಕೆ ಹಲವು ಮುಖಗಳ ವ್ಯಕ್ತಿತ್ವ ಇದೆ. ಕರ್ನಾಟಕ ಮಮತೆ, ಒಲವು, ಸಂತೈಸುವಿಕೆ, ಆಶ್ರಯ ನೀಡುವ ಗುಣಗಳಿಂದ ಕೂಡಿದೆ ಎಂದು ಭಾವಿಸುತ್ತಾರೆ. ಕನ್ನಡ ಭಾರತಿ, ಕನ್ನಡರತಿ, ನಾಡರಾಣಿ, ಕನ್ನಡದಾರತಿ, ಸಿರಿಗನ್ನಡ ಭಾರತಿ, ನವೋನವಶ್ರೀ ಭಾರತಿ, ಪಂಚಮುಖಿ, ಶರಣನಾಡು ಹೀಗೆ ಹಲವು ಸ್ವರೂಪಗಳಲ್ಲಿ ಅವರು ಕರ್ನಾಟಕವನ್ನು ಪರಿಭಾವಿಸುತ್ತಾರೆ.

ಬೇಂದ್ರೆಯವರು, ನಾಡು ತಲೆ ಎತ್ತಿ ನಿಲ್ಲಬೇಕಾದರೆ ಕನ್ನಡಿಗರಿಗೆ ತಮ್ಮ ಗತ ಪರಂಪರೆಯ ಅರಿವು ಇರಬೇಕು ಎಂದು ಭಾವಿಸುತ್ತಾರೆ. ಕೇವಲ ಗತವನ್ನು ಕೀರ್ತಿಸುವುದು ಮೂರ್ಖತನವಾದರೆ, ಗತಕೀರ್ತಿಯನ್ನು ಮರೆತು ಬಾಳುವುದು ಶತಮೂರ್ಖತನ ಎಂದೇ ಭಾವಿಸುತ್ತಾರೆ. " ನಮ್ಮ ಸಾಹಿತ್ಯ ಸಂಸ್ಕೃತಿ ಇತಿಹಾಸಗಳ ಸಂಜೀವನವನ್ನುಣ್ಣದೆ ನಾವು ಕನ್ನಡಿಗರಾಗಲಾರೆವು. ಕರ್ನಾಟಕಸ್ಥರಾಗುವುದು ಬೇರೆ, ಕನ್ನಡಿಗರಾಗುವುದು ಬೇರೆ. ನಮ್ಮ ಸಾಹಿತ್ಯ, ನಮ್ಮ ದಿನದ ಮಾತು, ಜನದ ಮಾತು, ಮನದ ಮಾತು ಆಗಬೇಕು .......... ವೈವಿಧ್ಯಾನುಕೂಲ ಐಕ್ಯದಲ್ಲಿ, ಐಕ್ಯಾನುಕೂಲ ವೈವಿಧ್ಯದಲ್ಲಿ ಕನ್ನಡ ರಾಷ್ಟ್ರ ನವಜನ್ಮವನ್ನು ತಾಳುತ್ತದೆ. ಕನ್ನಡಿಗರೆಲ್ಲರಿಗೆ ಜಾತಿ ಕುಲ ಮೈ ಮಟ್ಟಿಗೆ, ಮತ ಗಿತ ಮನದ ಮಟ್ಟಿಗೆ, ಕನ್ನಡ ಧರ್ಮ ಮಾತ್ರ ನಮ್ಮ ನೇತ್ರ ಸೂತ್ರವಾಗಿ ಉಳಿಯಬೇಕು" [೨೭] ಎನ್ನುತ್ತಾರೆ. ಕನ್ನಡ ಧರ್ಮಸೂತ್ರವಾಗಬೇಕಾದರೆ ಅದಕ್ಕಾಗಿ ಏಕೀಕರಣ ಆಗಬೇಕಾಗಿದೆ ಎನ್ನುತ್ತಾ, ಅವರು ಮೂರು ಬಗೆಯ ಏಕೀಕರಣವನ್ನು

ಹೇಳುತ್ತಾರೆ. ೧.ಕನ್ನಡದ ಏಕೀಕರಣ, ೨.ಕನ್ನಡಿಗರ ಏಕೀಕರಣ, ೩.ಕರ್ನಾಟಕದ ಏಕೀಕರಣ ಎಂದು ಗುರುತಿಸುತ್ತಾರೆ.

ಬೇಂದ್ರೆಯವರ ಕನ್ನಡ, ಕರ್ನಾಟಕ ಪ್ರಜ್ಞೆ ಅನ್ಯ ನಾಡಿನ, ಭಾಷೆಯ ವಿರೋಧದಲ್ಲಿ ರೂಪುಗೊಳ್ಳುವುದಿಲ್ಲ. ಅವರ ನಾಡ ಪ್ರಜ್ಞೆ ಅನ್ಯದೊಂದಿಗೆ ಅವಿರೋಧಿಯಾದುದು. ಕನ್ನಡವನ್ನು, ಕರ್ನಾಟಕವನ್ನು ಅವರು ಅನ್ಯದ ಒಳಗೊಳ್ಳುವಿಕೆಯಲ್ಲಿಯೇ ಪ್ರತಿಪಾದಿಸಿದವರು. ನಾಡಿನೊಳಗಿನ ಭಾಷೆಯ ವೈವಿಧ್ಯತೆಯನ್ನಾಗಲೀ, ನಾಡಿನ ಹೊರಗಿನ ವೈವಿಧ್ಯತೆಯನ್ನಾಗಲಿ ಕನ್ನಡದ ಅಸ್ತಿತ್ವಕ್ಕೆ ಅಪಾಯಕಾರಿಯಾದ ನೆಲೆಯಲ್ಲಿ ಗ್ರಹಿಸದೆ ಐಕ್ಯದ ಭಾವದಲ್ಲಿ ಕಾಣುತ್ತಾರೆ. ಈ ಐಕ್ಯ ಪ್ರಜ್ಞೆ ಏಕೀಕರಣ ಕಾಲದ ಕವಿಯ ಭಾವ ಸ್ವರೂಪದ ಉಚ್ಚ ಮಾದರಿಯಾಗಿದೆ. “ತುಳು, ಕೊಡಗು, ಕೊಂಕಣಿ, ತೊದ, ಕೋಲ್. ಬಡಗ, ಇರುಳ, ಸೋಲಿಗರ ನುಡಿಯ ಪಸರವು ಕನ್ನಡ ಶಬ್ದಕೋಶದಲ್ಲಿ ಹೊಂದಿಕೆಯಾಗಿ ಸೇರಬೇಕು. ಈ ಕೋಶ ಸಿದ್ಧಿಯಾಗಬೇಕು; ವಿದ್ಯಾರ್ಥಿಗಳಿಗೆ ದೊರೆಯಬೇಕು. ಬೇಸಿಕ್ ಹಿಂದಿ, ಉರ್ದು, ಇಂಗ್ಲಿಷ್‌ಗಳೊಡನೆಯೂ ತನ್ನ ಸಾಮಂಜಸ್ಯವನ್ನು ಕಂಡುಕೊಳ್ಳಬೇಕು. ಸಂಸ್ಕೃತವನ್ನು ಕನ್ನಡ ಮರೆಯಲಾರದು, ಬಾರದು. ಅದಕ್ಕೂ ಹೆಚ್ಚಾಗಿ ತೆಲುಗು ತಮಿಳಿನೊಡನೆ ತನ್ನ ಮೂಲ ಬಾಂಧವ್ಯವನ್ನು ಕಂಡುಕೊಳ್ಳುವ ದ್ರಾವಿಡ ಧಾತುಕೋಶವೊಂದು ಕನ್ನಡದಲ್ಲಿ ಪ್ರಕಟವಾಗಬೇಕು. ಕನ್ನಡ ಉಸಿರಿನ ಮಂತ್ರಶಕ್ತಿ ತಲೆ ಎತ್ತಬೇಕಾದರೆ ನಮಗೆ ಇದು ತೀರಾ ಅಗತ್ಯ” [೨೮] ಎನ್ನುತ್ತಾರೆ. ಇಲ್ಲಿ ಯಾವುದೂ ‘ಅನ್ಯ’ವಾಗುವುದಿಲ್ಲ. ಕರ್ನಾಟಕ ಎಲ್ಲವನ್ನೂ ಪರಸ್ಪರ ಒಳಗೊಂಡೇ ರೂಪುಗೊಳ್ಳಬೇಕು ಎಂಬ ಆಲೋಚನೆ ಬೇಂದ್ರೆಯವರದ್ದು.

ಕನ್ನಡವನ್ನು ಬೇಂದ್ರೆ ‘ಅನೇಕ’ವಾಗಿಯೇ ಗ್ರಹಿಸಿದ್ದಾರೆ. ಯಾಕೆಂದರೆ ಅವರ ಪ್ರಕಾರ ಕನ್ನಡ ರೂಪುಗೊಂಡದ್ದು ಅನೇಕದಿಂದಲೇ “ ...... ಅನೇಕ ‘ಕನ್ನಡ’ಗಳನ್ನು ನೆಲೆಸಿದ ಮೇಲೆ, ಕನ್ನಡ–ಕನ್ನಡ ಕೂಡಿ ಸಾವಿರದ ಮುಖದ ಕನ್ನಡವಾಗಿ ಕೇರಳದವರಿಗೆ ನಾವು ಕುಂತಳರು, ತಮಿಳರಿಗೆ ವಡುಕರು, ಬಡಗರು ಶಾತಕರ್ಣಿನೂರು ಕಣ್ಣರು, ಆಂಧ್ರದ ಕಮ್ಮೆಗಳಿಗೆ ನಾವು ಕನ್ನಡಿಗರು, ಮಹಾರಾಷ್ಟ್ರರಿಗೆ ಕನ್ನಡವು ಗಂಗ–ಕದಂಬ ಭೂಮಿ, ಬನವಾಸಿ–ಮಹಿಷಮಂಡಲ! ಸುತ್ತುಮುತ್ತಿದ ಈ ಬಳಗದ ಚೌಕಟ್ಟಿನಲ್ಲಿ ಕನ್ನಡ ಮೂರ್ತಿಗೊಂಡಿದೆ” [೨೯] ಎನ್ನುತ್ತಾರೆ. ಇದು ‘ಕನ್ನಡ’ ಎನ್ನುವ ಗುರುತು ರೂಪುಗೊಂಡ

ಬಗೆಯೂ ಹೌದು. ಯಾವುದನ್ನು ಕನ್ನಡದ 'ಸಮಬಿಂಬ' (idententy) ಎನ್ನಬಹುದೋ ಆ ಸಮಬಿಂಬದೊಳಗೆ ಕೇರಳ, ತಮಿಳರ, ಆಂಧ್ರದ, ಮಹಾರಾಷ್ಟ್ರಿಗರ ಬಿಂಬವೂ ಕಾಣುತ್ತದೆ. ಸಮಬಿಂಬ ಒಂದಾದರೂ ಅದರ ಪ್ರತಿಬಿಂಬ 'ಅನೇಕ'. ಈ ಅನೇಕದಲ್ಲಿ ಕೂಡುವಿಕೆ ಇದೆ, ಒಳಗೊಳ್ಳುವಿಕೆ ಇದೆ. ಇದು ಬೇರೆಯಾಗಲು ಹೊರಟ ಕವಲುಗಳಲ್ಲ. ಐಕ್ಯದೊಳಗಿನ 'ಅನೇಕ'. ಇದು ಬೇಂದ್ರೆಯವರ ಗ್ರಹಿಕೆಯ ಕನ್ನಡ. ಹೀಗಾಗಿಯೇ ಅವರು 'ಕನ್ನಡವೂ, ಭಾರತವೂ, ಜಗವೆಲ್ಲವೂ ಒಂದೇ' ಎನ್ನುತ್ತಾರೆ.

ಬೇಂದ್ರೆಯವರು ಕರ್ನಾಟಕದ ಏಕೀಕರಣಕ್ಕಾಗಿ ತನ್ನನ್ನು ತೊಡಗಿಸಿಕೊಂಡು, ಮನಃಪೂರ್ವಕವಾಗಿ ದುಡಿದವರು. ಅವರ ಹಲವು ಕವಿತೆಗಳಲ್ಲಿ ಏಕೀಕರಣದ ಚಿಂತನೆ ಇದೆ. ಹಲವು ಬಾರಿ ಏಕೀಕರಣದ ಚಿಂತನೆಯೇ ಅವರ ಕವಿತೆಗೆ ಪ್ರೇರಣೆಯೂ ಆಗಿದ್ದಿದೆ. ಅವರ 'ಒಡನುಡಿ' ಕವಿತೆ ಇದಕ್ಕೆ ನಿದರ್ಶನ.

> " ದುಃಸಾಧ್ಯ ಸಂಭಾವ್ಯವೆಂಬ ಸೊಲ್ಲಿನ ಗುಲ್ಲು
> ಗುಡುಗಾಡುತಿದೆ. ಕನ್ನಡದ ಕನ್ನಡಿಯು ಒಡೆದು
> ಬೆಸೆಯ ಬರದಂತೆ ದೆಸೆದೆಸೆಗೆ ಬಿದ್ದಿದೆ. ಹಿಡಿದು
> ಕಟ್ಟಬಲ್ಲಾ ಕೈಯ ಕಾಣದಿದೆ. ಬಡಹುಲ್ಲು
> ಬೆಳೆಯೆ, ಹೂ ದೋಟ ಹುದುಗಿದೆ ನೆಲದೊಳೆಲ್ಲೆಲ್ಲು
> ದನದ ಜಂಗುಳಿಯಂತೆ ಹಿಂಡಾಗಿ, ಮನ ತಡೆದು
> ನಿಂತಿದೆ. ನಿರಾಯಾಸ ಮೆಲುಕು ಹಾಕುತ ಸಿಡಿದು
> ಪೂರ್ವ ವೈಭವವು ಉಃಶಾಪ ಕೋರುವ ಕಲ್ಲು" [೩೦] (ಒಡನುಡಿ)

ಏಕೀಕರಣದ ಪೂರ್ವದ ಕನ್ನಡ ನಾಡಿನ ಸ್ಥಿತಿಯನ್ನು ಕವಿ ಈ ಕವಿತೆಯಲ್ಲಿ ಚಿತ್ರಿಸಿದ್ದಾರೆ. ಕನ್ನಡ ನಾಡಿನ ಭೂಪ್ರದೇಶವು ಒಡೆದು ಹೋಗಿದೆ. ಮತ್ತೆ ಬೆಸೆಯ ಬಲ್ಲವರು ಯಾರು ಎಂಬ ಪ್ರಶ್ನೆಗೆ ಕವಿ ಎದುರಾಗುತ್ತಾರೆ. ಕನ್ನಡದ ಕನ್ನಡಿ ಬೆಸೆಯಲಾಗದಂತೆ ಒಡೆದು ದಿಕ್ಕು ದಿಕ್ಕುಗಳಲ್ಲಿ ಹರಡಿ ಬಿದ್ದಿದೆ. ಹೀಗೆ ಒಡೆದು ಹೋಗುತ್ತಿರುವ ರಚನೆಯನ್ನು ಮತ್ತೆ ಹಿಡಿದು ಒಂದು ಸೂತ್ರದಲ್ಲಿ ಕಟ್ಟಬಲ್ಲವರು ಯಾರೂ ಕಾಣುತ್ತಿಲ್ಲ. ಒಂದು ಕಾಲದ ಸುಂದರ ಹೂದೋಟ ಹುಲ್ಲು ಬೆಳೆದು ಕಾಣುತ್ತಿಲ್ಲ. ಬೇಂದ್ರೆಯವರ ನಾಡಿನ ಕುರಿತ ಚಿಂತನೆಯಲ್ಲಿ ಎದ್ದು ಕಾಣುವ ಸಂಗತಿ

ಎಂದರೆ, ನಾಡನ್ನು ವರ್ತಮಾನದ ದುಃಸ್ಥಿತಿಯಿಂದ ಪಾರು ಮಾಡುವ ಬಗೆಯನ್ನು ಆಲೋಚಿಸುವ ರೀತಿ. ನಾಡು ಈ ದುಃಸ್ಥಿತಿಯಿಂದ ಪಾರಾಗಿ ತನ್ನ ಪೂರ್ವ ವೈಭವವನ್ನು ತಾನೇ ತಾನಾಗಿ ಪಡೆದುಕೊಳ್ಳುತ್ತದೆ. ಕನ್ನಡಕ್ಕೆ ಹಿಡಿದ ಶಾಪವು ವಿಮೋಚನೆಯಾಗುತ್ತದೆ. ಕನ್ನಡದ , ಕನ್ನಡಿಗರ ಕೀರ್ತಿ ನಾಡಿಗೆ ಪ್ರಭಾವಳಿಯಾಗಿ ಹಬ್ಬುತ್ತದೆ ಎಂಬ ಆಶಾವಾದವನ್ನು ಕವಿ ಇಲ್ಲಿ ವ್ಯಕ್ತಪಡಿಸುತ್ತಾರೆ.

ಕನ್ನಡದ ದಿವ್ಯ ಧ್ವನಿ ಮೊಳಗಬೇಕಾದುದು ಎಲ್ಲಿಂದ? ಎಂಬ ಪ್ರಶ್ನೆ ಕವಿಯ ಮುಂದಿದೆ. ಏಕೀಕರಣ ಎನ್ನುವುದು ಕೇವಲ ಭೌಗೋಳಿಕ ಸ್ವರೂಪದ, ಹರಿದ ಭೂಪಟದ ಜೋಡಣೆಯ ಕೆಲಸ ಅಲ್ಲ. ಅದನ್ನು ಮೀರಿದ ಒಂದು ಸಾಂಸ್ಕೃತಿಕ ಸ್ವರೂಪದ ಕೆಲಸವಾಗಿದೆ. ಈ ಸ್ಥೂಲ ಏಕೀಕರಣದ ಹಿಂದಿರುವ ಸೂಕ್ಷ್ಮ ಕಾರಣವನ್ನು ಕವಿ 'ದಿವ್ಯಧ್ವನಿ' ಕವಿತೆಯಲ್ಲಿ ಪ್ರಸ್ತುತ ಪಡಿಸುತ್ತಾರೆ.

"ಕುಡುಗರು ತುಳುವರು ತೊಡವರು ಬಡಗರು
ತೆಂಕಣ ಕೊಂಕಣ ಕಡಲವರ
ಭೂತಳ ಕುಂತಳ ಭಾಗಮಂಡಲ
ಪಶ್ಚಿಮ ವಾಹಿನಿ ಪುರಃಸರ.
ಪುಂಡರೀಕದಲ್ಲಿ ವಿಠ್ಠಲನೆದ್ದ
ಕಣ್ ನಡೆಯಲಿ ಕನ್ನಡ ಗೆದ್ದ" [೩೧] (ದಿವ್ಯಧ್ವನಿ)

ಒಂದು ಕರ್ನಾಟಕವೆನ್ನುವುದು ಹಲವು ಜನ ಸಮುದಾಯ, ಭಾಷಿಕ ವಲಯ, ಧಾರ್ಮಿಕ ಸ್ವಭಾವಗಳಿಂದ ಕೂಡಿದ್ದು, ಈ ಎಲ್ಲ ಸಂಗತಿಗಳು ಇಲ್ಲಿನ ವೈವಿಧ್ಯತೆಗೆ ಸಾಕ್ಷಿಗಳಾಗಬೇಕೇ ಹೊರತು ಪ್ರತ್ಯೇಕತೆಗೆ ಕಾರಣಗಳಾಗಬಾರದು. ಏಕೀಕರಣಗೊಂಡ ಕರ್ನಾಟಕ ಐಕ್ಯ ಭಾವದ ಕಡೆಗೆ ಚಲಿಸಬೇಕು. ಇಂತಹ ಐಕ್ಯಭಾವವನ್ನು ಹೊಂದದ ಕರ್ನಾಟಕಕ್ಕೆ ಅಸ್ತಿತ್ವವೇ ಇಲ್ಲ. ಅದಕ್ಕಾಗಿಯೇ ಕವಿ,

'ಕೂಡಲಿ ಜಿನ ಹರಿ ಹರ ಶರಣ
ನವ ಧರ್ಮದ ಐಕ್ಯಾವರಣ' ಎನ್ನುತ್ತಾರೆ.

ಜಿನ, ಹರಿ, ಹರ, ಶರಣ ಪಂಥಗಳ ನಡುವೆ ಐಕ್ಯಭಾವ ಬೆಳೆದಾಗ ನವಧರ್ಮದ ಉದಯ ಸಾಧ್ಯವಾಗುತ್ತದೆ. ಈ ನವಧರ್ಮದ ಉದಯ 'ನವ ಕರ್ನಾಟಕ'ದ ಉದಯದಂತೆ ಅದರ ಅಂತಃಸತ್ವವೂ ಹೌದು, ಅದರ ಜೀವವೂ ಹೌದು. ಏಕೀಕರಣವು ಉದಾತ್ತವಾದ ಉದ್ದೇಶವನ್ನು ಹೊಂದಿರುವುದು. ಭೌಗೋಳಿಕ ಐಕ್ಯತೆ ಅದರ ಒಂದು ಭಾಗ ಮಾತ್ರ. ಅದನ್ನು ಗಳಿಸಿದ ಮೇಲೂ ಅದನ್ನು ಮೀರಿದ ಒಂದು ಸಾಂಸ್ಕೃತಿಕ, ಭಾವನಾತ್ಮಕ, ಮಾನಸಿಕ ಸ್ವರೂಪದ ಐಕ್ಯತೆಯು ಮುಖ್ಯವಾಗುತ್ತದೆ.

ಕನ್ನಡದ ಜೀವನ ಲಹರಿ ವಿಸ್ತಾರವಾದುದು. ಬೇಂದ್ರೆ ಈ ಜೀವನ ಲಹರಿಯ ನಾಡಿ ಬಡಿತವನ್ನು ಚೆನ್ನಾಗಿ ಅರಿತಿದ್ದರು. ನಾಡಿನೊಳಗಿನ ವೈವಿಧ್ಯತೆಗಳು ಭಿನ್ನತೆಗಳಾಗಿ, ಅಭಿಪ್ರಾಯ ಭೇದಗಳಾಗಿ ಪರ್ಯಾವಸಾನಗೊಳ್ಳದೆ ಈ ವೈವಿಧ್ಯತೆಯೇ ಕನ್ನಡಿಗರ ಮೂಲ ಶಕ್ತಿ ಎಂದು ಪ್ರತಿಪಾದಿಸುತ್ತಾರೆ. ಒಂದು ನಾಡು ಭೌಗೋಳಿಕವಾಗಿ ತಾನು ಪಡೆಯುವ ಸ್ವರೂಪದಷ್ಟೇ ಅದರ ಒಳಗಿರುವ ಜನರ ಮಾನಸಿಕ ಸ್ವರೂಪವೂ ಮುಖ್ಯ. ಹಾಗಾಗಿ ಬೇಂದ್ರೆ 'ನಮ್ಮದು ನಿಮ್ಮದು' ಎಂಬ ಭಾವನೆ ಇಲ್ಲದೆ ಎಲ್ಲವೂ ಎಲ್ಲರದು ಎಂಬ ಮಮತೆಯ ಸಂದೇಶವನ್ನು ಸಾರುತ್ತಾರೆ.

ಕನ್ನಡ ನಾಡನ್ನು ಕವಿ ಸಾಮರಸ್ಯದ ಕೂಟವೆಂದೇ ಭಾವಿಸುತ್ತಾರೆ. ಈ ನಾಡಿನ ಐಕ್ಯತೆಯ ಭಾವವನ್ನು "ಪಾರ್ವತಿ ನೀನೇ ಸಲಹು" ಕವಿತೆಯಲ್ಲಿ ಸ್ಪಷ್ಟವಾಗಿ ಕಾಣಿಸುತ್ತಾರೆ.

"ಜೈನರ ಕಾವ್ಯದ ಶರಣರ ವಚನದ
ದಾಸರ ಹಾಡಿನದೀ ನಾಡು
ವಿಶ್ವದ ಕಬ್ಬದ ಹಬ್ಬಹುಣ್ಣಿವೆಗೆ
ಕನ್ನಡ ಹೃದಯವ ಹದ ಮಾಡು
    ಕರ್ನಾಟಕವನು ಕಡೆದರು, ಹೊರಟಿತು
    ಕನ್ನಡವೆನ್ನುವ ನವನೀತ
    ಹೃದಯದ ಮರ್ಮವ ಮಿಡಿದರೆ ಬರುವೊಲು
    ನಾದಿಂದ ಅನುಭವ ಗೀತ "[೨೨] (ಪಾರ್ವತಿ ನೀನೇ ಸಲಹು)

ಕವಿ ಈ ನಾಡಿನ 'ಬಹುತ್ವ'ವನ್ನು ಈ ಕವಿತೆಯಲ್ಲಿ ಎತ್ತಿ ತೋರಿಸುತ್ತಾರೆ. ನಾಡಿನ 'ಬಹುತ್ವ'ವನ್ನು ನಿರಾಕರಿಸದೆ ತನ್ನೊಳಗೆ ಎಲ್ಲವನ್ನೂ ಒಳಗೊಳ್ಳುತ್ತಲೇ ನಾಡು ರೂಪುತಾಳುತ್ತದೆ ಎಂದು ಕವಿ ಸಾರುತ್ತಾರೆ. ಒಂದು ಕರ್ನಾಟಕ ಒಂದು ಕನ್ನಡವೆನ್ನುವುದು ಐಕ್ಯತೆಯ ಕಾರಣದಿಂದ ಮೊಳಗಬೇಕಾದ ಘೋಷಣೆಯೇ ಆದರೂ ಅದು ತನ್ನ ಒಳಗೆ ಒಂದಲ್ಲ, ಹಲವು ಎಂಬ ಅರಿವು ಇಲ್ಲಿ ಕವಿಗಿದೆ. ಒಂದು ನಾಡು ಹಲವಾಗಿ ಕಾಣಿಸಿಕೊಳ್ಳುವ ಬಗೆ ಇಲ್ಲಿನ ವೈವಿಧ್ಯತೆಯ ಸಂಕೇತ. ಏಕೀಕರಣವು ಏಕರೂಪೀಕರಣ ಅಲ್ಲ ಎಂಬುದನ್ನು ಕರ್ನಾಟಕ ಏಕೀಕರಣ ತೋರಿಸಿ ಕೊಟ್ಟಿದೆ. ಕನ್ನಡಿಗರ ಪ್ರಾಚೀನ ಕಾವ್ಯ ಪರಂಪರೆ ಜೈನರಿಂದ, ಶರಣರಿಂದ, ದಾಸರಿಂದ ಬೆಳೆಯಿತು. ಈ ನಾಡು ಇವೆಲ್ಲದರ ಕೂಡುವಿಕೆಯಿಂದಲೇ ಆದದ್ದು ಎನ್ನುವುದು ಕವಿಭಾವ. ಹಲವು ಆಡಳಿತಾತ್ಮಕ ಪ್ರಾಂತ್ಯಗಳ ನಡುವೆ ಸೇರಿಹೋಗಿದ್ದ ಕರ್ನಾಟಕವನ್ನು ಮರಳಿ ಒಂದಾಗಿಸುವ ಕಾರ್ಯದ ಏಕೀಕರಣದ ಧ್ವನಿ ಎಲ್ಲೆಡೆಯು ಮೊಳಗುತ್ತಿತ್ತು. ಕನ್ನಡಿಗರನ್ನು ಭಾವನಾತ್ಮಕವಾಗಿ ಒಂದಾಗಿಸುವುದಕ್ಕೆ ಬೇಕಾದ ವಿಚಾರಗಳನ್ನು ನೀಡುವುದಕ್ಕೆ ಅನೇಕ ಪತ್ರಿಕೆಗಳು ಆರಂಭವಾಗಿತ್ತು. ಸಾಹಿತ್ಯ ಪರಿಷತ್‌ನಂತಹ ಸಂಘಟನೆ ಕಾರ್ಯೋನ್ಮುಖವಾಗಿತ್ತು. ಇದೆಲ್ಲದರ ಪರಿಣಾಮವಾಗಿ ಅಕ್ಷರಿಕವಾಗಿ ಏಕರೂಪದ ಕನ್ನಡವೇ ಅಧಿಕೃತಗೊಳ್ಳುತ್ತಿತ್ತು. ಇದರ ನಡುವೆ ಬೇಂದ್ರೆಯವರು ಧಾರವಾಡದ ನೆಲದಿಂದ ಜಾನಪದ ಸತ್ವವನ್ನು ಹೀರಿ, ಮರಾಟಿಯ ಪ್ರಭಾವದೊಳಗಡೆಯೇ ತನ್ನ ಕನ್ನಡವನ್ನು ರೂಪಿಸಿಕೊಂಡಿದ್ದರು. ಯಾವ ಏಕೀಕರಣದ ಕ್ರಿಯೆ ಕರ್ನಾಟಕವನ್ನು ಒಂದು ಮಾಡಲು ಹೊರಟಿತ್ತೋ, ಅದು ಭಾಷಾ ವೈವಿಧ್ಯತೆಯನ್ನಾಗಲಿ, ನಾಡಿನ ಒಳಗಿನ ಸಾಂಸ್ಕೃತಿಕ ವೈವಿಧ್ಯತೆಯನ್ನಾಗಲಿ ಬಲಿತೆಗೆದುಕೊಳ್ಳದೆ ಪೋಷಿಸಿಕೊಂಡು ಬರಬೇಕಾದರೆ ಅದರಲ್ಲಿ ಬೇಂದ್ರೆಯಂಥ ಕವಿಯ ಚಿಂತನಾ ವೈಶಾಲ್ಯತೆಯ ಕಾರಣವಿದೆ. ಇದು ಕೇವಲ ಸರಳ ಹೇಳಿಕೆಯಲ್ಲ. ಬೇಂದ್ರೆಯವರು ಉದ್ದಕ್ಕೂ ತಮ್ಮ ಕಾವ್ಯದೊಳಗೆ ಭಾಷಾ ವೈವಿಧ್ಯತೆಯನ್ನು ಪೋಷಿಸಿಕೊಂಡು ಬಂದವರು. ಭೇದರಹಿತವಾಗಿ ಎಲ್ಲಾ ಬಗೆಯ ಕನ್ನಡ, ಎಲ್ಲಾ ಜನಾಂಗದ ಇರುವಿಕೆಯ ನಾಡನ್ನು ಕಟ್ಟುವ ಯತ್ನದಲ್ಲಿ ನಿರಂತರವಾಗಿ ತೊಡಗಿ ಕೊಂಡಿದ್ದರು.

ಕರ್ನಾಟಕವೆನ್ನುವ ಭೂಮಿಯನ್ನು ಮಥಿಸಿದಾಗ ಕನ್ನಡ ಎನ್ನುವ ನವನೀತ ಹೊಮ್ಮಿತು ಎನ್ನುತಾರೆ ಕವಿ. ಇದು ಕನ್ನಡ-ಕರ್ನಾಟಕದ ಸಂಬಂಧದ ಸ್ವರೂಪವನ್ನು

ಹೇಳುವ ಬಗೆ. ಕನ್ನಡಕ್ಕೆ ಕರ್ನಾಟಕ ಉಗಮಸ್ಥಾನ. ಕನ್ನಡ ಕರ್ನಾಟಕದ ಫಲ. ಕನ್ನಡಿಗರ ಹೃದಯದಲ್ಲಿ ಕರ್ನಾಟಕದ ಮಿಡಿತ ಇದೆ. ಕನ್ನಡ ಕರ್ನಾಟಕದ ನಾದ. ಕರ್ನಾಟಕ ಕನ್ನಡಿಗರ ಅನುಭವ ಗೀತ ಎನ್ನುತ್ತಾರೆ.

ಬೇಂದ್ರೆ ಕರ್ನಾಟಕವನ್ನು, ಕನ್ನಡವನ್ನು ಕುರಿತು ಉತ್ಕಟವಾಗಿ ಹಾಡಿದ್ದಾರೆ. ಅದು ಅವರ ಕನಸು, ಉಸಿರು ಎಲ್ಲವೂ ಆಗಿತ್ತು. ಆಶಾವಾದಿಯಾದ ಕವಿ ಇಂದು ಮುಂದೆ ಮತ್ತು ಎಂದೆಂದಿಗೂ ಕರ್ನಾಟಕ ಒಂದೇ ಎಂದು ದೃಢವಾಗಿ ಸಾರುತ್ತಾರೆ.

" ಒಂದೇ ಒಂದೇ ಒಂದೇ ಕರ್ನಾಟಕ ಒಂದೇ
ಇಂದೇ ಮುಂದೆ, ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವುದಿದೆ ಕರ್ನಾಟಕದಿಂದೆ
ಇಲ್ಲಿಯ ಜನ–ಮನ–ಭಾಷೆಯು ಕನ್ನಡವದು ಒಂದೇ
ಒಂದೇ ಜನವೂ, ಒಂದೇ ಮನವೂ ಕನ್ನಡಿಗರು ಎಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ
ಹೀಗೆನ್ನದ ಹೆರವರು ಅವರಿದ್ದರೂ ಒಂದೇ
ಇರದಿದ್ದರೂ ಒಂದೇ !
ಕನ್ನಡವೆಂದೂ ಒಪ್ಪದು ಕರ್ನಾಟಕ ನಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ" [೩೩] (ಒಂದೇ ಕರ್ನಾಟಕ)

ಕನ್ನಡ– ಕರ್ನಾಟಕದಿಂದ ಕೇವಲ ಕನ್ನಡಿಗರಿಗಷ್ಟೇ ಒಳಿತು ಎಂದು ಕವಿ ಭಾವಿಸುವುದಿಲ್ಲ. ಜಗದ ಏಳಿಗೆಯಾಗುವುದಿದ್ದರೆ ಅದು ಕರ್ನಾಟಕದಿಂದ ಎನ್ನುವ ಮಾತಿನ ಹಿಂದಿರುವ ಕವಿ ಭಾವವನ್ನು ಅರ್ಥೈಸಿಕೊಳ್ಳಬೇಕು. ಕರ್ನಾಟಕ ಎನ್ನುವುದು ಕೇವಲ ಸಂಕುಚಿತ ಮನಸ್ಸಿನ ಒಂದು ಭೌಗೋಳಿಕ ರಚನೆಯಲ್ಲ. ಅದರ ಅಸ್ತಿತ್ವ, ರಚನೆಯ ಹಿಂದಿರುವುದು ಜಗದ ಏಳಿಗೆಯ ಉದ್ದೇಶ. ಕರ್ನಾಟಕದ ಅಸ್ತಿತ್ವಕ್ಕಾಗಿ ನಡೆಯುವ ಏಕೀಕರಣ ಹೋರಾಟದ ಹಿಂದಿರುವ ಉದ್ದೇಶ ಒಂದು ಭಾಷೆಯನ್ನಾಡುವ ಜನಗಳಿಗೆ ಒಂದು ಆಡಳಿತಕ್ಕೊಳಪಟ್ಟ ಒಂದು ರಾಜ್ಯ ರಚನೆಯಲ್ಲ. ಅದು ಜಗತ್ ಕಲ್ಯಾಣದ ಮಾರ್ಗವೂ ಹೌದು ಎನ್ನುವುದನ್ನು ಇಲ್ಲಿ ಕವಿ ಹೇಳುತ್ತಿದ್ದಾರೆ. ಇಲ್ಲಿನ ಜನ. ಜನರ ಮನಸ್ಸು, ಅವರ ಭಾಷೆ ಕನ್ನಡ ಎಲ್ಲವೂ ಒಂದೇ. ಕನ್ನಡಿಗರು ಒಂದೇ ಕುಲಕ್ಕೆ

ಸೇರಿದವರು ಎನ್ನುತ್ತಾರೆ. ಈ ಮಾತಿನ ಹಿಂದೆ ಕವಿಯ ಉದಾತ್ತತೆಯನ್ನು, ನಾಡಿನ ಉದಾತ್ತತೆಯನ್ನು ಗಮನಿಸಬೇಕು ಜೊತೆಗೆ ನಾಡಿನ ಐಕ್ಯತೆಗಾಗಿ ನಡೆಯುವ ಚಳವಳಿಯಲ್ಲಿ ಎಲ್ಲರೂ ಪಾಲ್ಗೊಳ್ಳಬೇಕು. ಆಗ ಮಾತ್ರ ಕರ್ನಾಟಕವನ್ನು ಪಡೆಯಲು ಸಾಧ್ಯ ಎಂಬ ಅರಿವೂ ಇದೆ. ಇಲ್ಲಿ ಒಂದೇ ಕರ್ನಾಟಕ ಎನ್ನುವುದು ಕವಿ ಸಂಕಲ್ಪ. ಹಾಗೆಯೇ ನಾಡಿನ ಜನ ಸಂಕಲ್ಪವೂ ಆಗಬೇಕಾಗಿದೆ. ಒಂದು ಎನ್ನುವ ಭಾವನೆಯನ್ನು ಕನ್ನಡಿಗರೆಲ್ಲರ ಮನಸ್ಸು ಸ್ವೀಕರಿಸಬೇಕು. ಹೀಗೆ ಸ್ವೀಕರಿಸಿದ ಮನಸ್ಸಿಗೆ ಕವಿ ಅದಕ್ಕಿಂತಲೂ ಉನ್ನತವಾದ ಇನ್ನೊಂದು ಸ್ತರವನ್ನು ಮುಂದಿಡುತ್ತಾರೆ. ' ಕನ್ನಡವೂ ಭಾರತವೂ ಜಗವೆಲ್ಲವೂ ಒಂದೇ' ಎಂಬ ಸಾಲು ಕವಿಯ ಚಿಂತನೆಯ ಉತ್ಕೃಷ್ಟ ಸಾಲು. ಒಂದೆಡೆ ಕರ್ನಾಟಕದ ಏಕೀಕರಣಕ್ಕಾಗಿ, ಮತ್ತೊಂದೆಡೆ ಭಾರತದ ಬಿಡುಗಡೆಗಾಗಿ ಸದಾ ಬಯಸುತ್ತಿರುವ ಕವಿಯು ಮನಸ್ಸಿನ ತುಡಿತದಿಂದ ಒಂದು ಹಂತದಲ್ಲಿ ಭಾಷೆ, ಗಡಿ, ಕಾಲಾತೀತವಾದ ಸ್ವರೂಪದಲ್ಲಿ ನಾಡನ್ನು ಕಾಣಲು ಬಯಸುತ್ತಾರೆ. ಕೇವಲ ಕರ್ನಾಟಕವಲ್ಲ, ಕೇವಲ ಭಾರತವಲ್ಲ, ಜಗತ್ತೆಲ್ಲವೂ ಒಂದೇ ಎಂಬ ವಿಶ್ವಾತ್ಮಕವಾದ, ಜಗತ್ತು ಒಂದು ಕುಟುಂಬ ಎಂಬ ಉದಾತ್ತತೆಯನ್ನು ನಾಡಿನ ಸ್ವರೂಪವಾಗಿಯೇ ಮುಂದಿಡುತ್ತಾರೆ. ಏಕೀಕರಣದ ಆಶಯವು ಒಂದು ಭಾಷೆ, ಒಂದು ನಾಡು ಎನ್ನುವ ಮೇಲ್ನೋಟದ ಗ್ರಹಿಕೆಯನ್ನು ಮೀರಿ ಒಂದು ಭಾಷೆಯ ತಳಹದಿಯಲ್ಲಿ ನಿಂತು ವಿಶ್ವವಿಶಾಲವಾಗಿ ಆಲೋಚಿಸಬಲ್ಲ ಬೌದ್ಧಿಕ ವಿಶಾಲತೆಯನ್ನು ಒದಗಿಸುವುದು ಎಂಬ ಚಿಂತನೆ ಈ ಕವಿತೆಯಲ್ಲಿ ವ್ಯಕ್ತವಾಗುತ್ತದೆ.

ಭಿನ್ನ ಭಾಷಿಕರು ಹಾಗೂ ಭಿನ್ನ ದಿಕ್ಕುಗಳ ನಡುವೆ ಕನ್ನಡ ನಾಡನ್ನು ಪ್ರತ್ಯೇಕವಾಗಿ ಗುರುತಿಸಿ ಅದಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ಬೇಂದ್ರೆಯವರು ತಮ್ಮ ಕವಿತೆಗಳಲ್ಲಿ ನೀಡಿದ್ದಾರೆ. ಭಾರತ-ಕರ್ನಾಟಕದ ನಡುವೆ ಸಂಘರ್ಷ, ಸ್ಪರ್ಧೆ ಇಲ್ಲ. ಕನ್ನಡದ ಹಿತ ಭರತಖಂಡದಿಂದಲೇ ಸಾಧ್ಯ ಎಂಬ ನಂಬಿಕೆ ಬಲವಾಗಿದೆ. ರಾಷ್ಟ್ರ - ನಾಡಿನ ಸಂಬಂಧ ಪರಸ್ಪರ ವಿರೋಧದ ನೆಲೆಯಲ್ಲಿಲ್ಲ. ಭಾರತದ ಒಳಿತಿನೊಂದಿಗೆ ಪ್ರಾದೇಶಿಕ ಒಳಿತಿದೆ. ಭಾರತದ ಸ್ವಾತಂತ್ರ್ಯದೊಂದಿಗೆ ಕನ್ನಡ ನಾಡಿನ ಒಗ್ಗೂಡುವಿಕೆ ಸಾಧ್ಯ ಎಂಬ ಇಂಗಿತ ಈ ಕವಿತೆಗಳಲ್ಲಿದೆ.

"ಭರತಖಂಡ ಇದು ಅಖಂಡ
ಹತ್ತು ದೇಶ ಸೇರಿಕೆ
ಸಾಕು ತ್ವೇಷ, ಬೇಡ ದ್ವೇಷ
ಬೇರೆ ಭಾಷೆ, ಬೇರೆ ವೇಷ
ಹೃದಯದೊಂದೆ ಹಾರಿಕೆ
ಭಾಗ್ಯದಿಳಿವು ಏರಿಕೆ
ಉದಯಿಸಿಹುದು ಲೋಕರಾಜ್ಯ
ಭಾಗದಿದ್ದು ಆ – ವಿಭಾಜ್ಯ
ಅದರೊಳಿಹುದು ರಾಷ್ಟ್ರ ತತ್ವ
ಮಾನವೈಕ್ಯದೊಂದು ತತ್ವ" [೩೪] (ಕೇಳಿ ನುಡಿ– ಕಂಡು ನಡೆ)

ಕವಿ ಕನ್ನಡ ನಾಡನ್ನು ಭರತ ಖಂಡದ ಜೊತೆ ಇಟ್ಟು ಸಾಮ್ಯತೆಯನ್ನು ಗುರುತಿಸುತ್ತಾರೆ. ಭರತಖಂಡ ಹತ್ತಾರು ರಾಜ್ಯಗಳ ಕೂಡುವಿಕೆಯಿಂದ ಹೇಗೆ ಅಖಂಡವಾಗಿದೆಯೋ ಹಾಗೆಯೇ ಕರ್ನಾಟಕವೂ ಅಖಂಡವಾಗಿದೆ. ' ಹತ್ತು ದೇಶ ಸೇರಿಕೆ ' ಎಂಬುದನ್ನು ಹತ್ತು ಪ್ರದೇಶ ಎಂದೂ ಭಾವಿಸಬಹುದು. ಇವುಗಳ ನಡುವೆ ದ್ವೇಷ ಇಲ್ಲ. ಭಾಷೆ ವೇಷಗಳು ಬೇರೆ ಬೇರೆಯಾಗಿ ವೈವಿಧ್ಯಮಯವಾಗಿದ್ದರೂ ಹೃದಯದ ಹಾರೈಕೆಯೊಂದೇ. ಅದು ಅಖಂಡತೆಯದ್ದು. ಅದು ಏಕತೆಯದ್ದು. ಕರ್ನಾಟಕ ಒಂದೇ ಆದರೂ ಅದರೊಳಗೆ ಹಲವು ಭಾಷಾ ವೈವಿಧ್ಯತೆ ಇದೆ. ಕನ್ನಡದೊಳಗೆ ಹಲವು ಕನ್ನಡವಿದೆ. ವೇಷ ಭೂಷಣಗಳು, ಆಹಾರಗಳು, ಸಂಸ್ಕೃತಿ ಹಲವಿದೆ. ಈ ವೈವಿಧ್ಯತೆಗಳಿದ್ದರೂ ನಮ್ಮ ನಡುವೆ ಅಖಂಡತೆಯ ಭಾವನೆ ಇದೆ ಎಂದು ಕವಿ ಹೇಳುತ್ತಾರೆ. ಹೀಗೆ ಅಖಂಡತೆಯ ಭಾವನೆಯನ್ನು ಎತ್ತಿ ತೋರಿಸುವ ಕವಿಗೆ ಕನ್ನಡ ನಾಡು ಬೇರೆ ಬೇರೆ ನಾಡುಗಳ ನಡುವೆ ತಲೆ ಎತ್ತಿದೆ ಎಂಬುದರ ಅರಿವಿದೆ. ಕನ್ನಡದ ಹೃದಯದಲ್ಲಿ ಜೈನ, ಶರಣ, ದಾಸರ ಚಿಂತನೆಗಳು ಸೇರಿಕೊಂಡಿವೆ ಎನ್ನುತ್ತಾರೆ.

ನಾಡಿನ ಏಕೀಕರಣದಿಂದ ಉದಯವಾದುದು ಜನರಾಜ್ಯ. ಅಂದರೆ ಲೋಕರಾಜ್ಯ. ಇದು ಅವಿಭಾಜ್ಯ. ಈ ಅವಿಭಾಜ್ಯತೆಯಲ್ಲಿ 'ರಾಷ್ಟ್ರ' ತತ್ವವಿದೆ. ಈ 'ರಾಷ್ಟ್ರತತ್ವ' ನಿಂತಿರುವುದು ಮಾನವ ಐಕ್ಯದಲ್ಲಿ. ಮಾನವ ಏಕತೆಯಲ್ಲಿ 'ರಾಷ್ಟ್ರ'. ರಾಷ್ಟ್ರದ

ಏಕತೆಯೊಳಗೆ ಕನ್ನಡ ನಾಡು ಕೂಡಿಕೊಳ್ಳುತ್ತದೆ. ಇಲ್ಲಿ ಒಂದು ಇನ್ನೊಂದರಿಂದ ಬೇರೆ ಅಲ್ಲ. ಒಂದು ಇನ್ನೊಂದರಲ್ಲಿ ಐಕ್ಯ. ಈ ಐಕ್ಯತೆಯೇ ಇಲ್ಲಿನ ನಾಡಿನ, ರಾಷ್ಟ್ರದ ಸತ್ವ

ಕವಿ ಭೌಗೋಳಿಕ ಕರ್ನಾಟಕವನ್ನು ಸುತ್ತಲಿನ ಹಲವು ರಾಜ್ಯಗಳ ಇರುವಿಕೆಯೊಂದಿಗೆ ಹೇಳುತ್ತಾ ಅದರ ವಿಶಿಷ್ಟತೆಯನ್ನು ಹೇಳುತ್ತಾರೆ.

" ಹೆದ್ದೊರೆಯು ಕೃಷ್ಣೆ, ಅವಳ ಎದೆಯ ಹರವಿನಲಿ
ಎಡ ಬಲಕೆ ತೆರೆದಿತ್ತು ಬಯಲು ಸೀಮೆ
ಮಲೆನಾಡು ಮುಂದೆ ಸಾಗರಬಿದ್ದು ಅಪ್ಪುವುದು
ತುಳು, ಕೊಂಕ ಮತ್ತೆ ಗೋಕರ್ಣ ಗೋವೆ"
" ತೆಂಕಣಕ್ಕೆ ಕೇರಳವು ದ್ರಾವಿಡವು ಮೂಡಲಕೆ
ಆಂಧ್ರ.ಬಡಗಣಕೆ ಮರಾಷ್ಟ್ರ ನಾಡು
ಈ ಚತುರ್ದಳ ಮಧ್ಯಬೀಜ ಕರ್ನಾಟಕವು
ಧರ್ಮ ಗುಂಜಾರವದ ಕವಿಯ ಬೀಡು" [೩೫] (ಕನ್ನಡದ ಪಾವನ ಪರಂಪರೆ)

ಇಲ್ಲಿ ಕವಿ ಕರ್ನಾಟಕದ ಭೌಗೋಳಿಕತೆಯನ್ನು ಅದರ ಭೂ ಗಡಿಗಳನ್ನು ಹೀಗೆ ಸೂತ್ರೀಕರಿಸುತ್ತಾರೆ. ಕೇರಳ, ತಮಿಳು, ಆಂಧ್ರ, ಮಹಾರಾಷ್ಟ್ರಗಳೆಂಬ ಚತುರ್ದಳದ ಮಧ್ಯಬೀಜವಾಗಿ ಕರ್ನಾಟಕ ಇದೆ. ಇಲ್ಲಿ ಕರ್ನಾಟಕದ ವೈವಿಧ್ಯಮಯ ಭೂಪ್ರದೇಶವನ್ನು ಹೇಳುತ್ತಾರೆ. ಜೊತೆಗೆ ಅದರ ಸಾಂಸ್ಕೃತಿಕ ಸ್ವರೂಪವನ್ನು ಮುಂದಿಡುತ್ತಾರೆ. ಕರ್ನಾಟಕ ಪ್ರಜ್ಞೆ ಅನ್ಯ ನಾಡುಗಳನ್ನು ನಿರಾಕರಿಸುವ, ಅಥವಾ ದ್ವೇಷದಿಂದ ನೋಡುವ ಪ್ರಜ್ಞೆ ಅಲ್ಲ, ಭಾರತಪ್ರಜ್ಞೆಯು ಕವಿಯ ಚಿಂತನೆಯ ಒಂದು ಭಾಗವೇ ಆಗಿರುವುದರಿಂದ ನಾಡು ರೂಪುಗೊಳ್ಳುವ ನೆಲೆ ಅನ್ಯದ್ವೇಷದಲ್ಲಿ ಅಲ್ಲ. ತೆಲುಗು, ಮಲೆಯಾಳ, ಮರಾಟಿ ತಮಿಳುಗಳು ಒಂದು ಇನ್ನೊಂದರ ಭಾಗವೇ ಆಗಿದೆ. ಇವೆಲ್ಲವುಗಳನ್ನು ಭಾರತ ಮೂಲವು ಬೆಸೆದಿದೆ. ಒಂದು ಹೂವಿನ ನಾಲ್ಕು ದಳಗಳಾಗಿ ಈ ಭಾಷೆಗಳಿವೆ. ಹಾಗಾಗಿ ಇಲ್ಲಿ ನಾಡು ಸೌಹಾರ್ದದ ನೆಲೆಯನ್ನು ಪಡೆಯುವುದನ್ನು ನೋಡಬಹುದು. 'ಧರ್ಮ ಗುಂಜಾರವದ ಕವಿಯ ಬೀಡು' ಎನ್ನುವುದರ ಮೂಲಕ ಕರ್ನಾಟಕದ ಸ್ವಭಾವವನ್ನು ಹೇಳುತ್ತಾರೆ. ಈ ನಾಡಿನಲ್ಲಿ ಧರ್ಮ ದುಂಬಿನಾದದಂತೆ ಮೊಳಗುತ್ತಿದೆ ಎಂದು ಹೇಳಿಕೊಳ್ಳುತ್ತಾರೆ.

ಕನ್ನಡ ಸಾಹಿತ್ಯದಲ್ಲಿ 'ವಿಜಯನಗರ' ಅಥವಾ ' ಹಂಪಿ' ಕನ್ನಡಿಗರ 'ಸಾಂಸ್ಕೃತಿಕ ಸಾಮ್ರಾಜ್ಯ'ವಾಗಿ ಭಾವಿಸಿ ಹಲವು ಕವಿತೆಗಳಿಗೆ ಕೇಂದ್ರ ವಸ್ತುವಾಗಿರುವುದನ್ನು ನೋಡಬಹುದು. ಹಂಪಿ, ವಿಜಯನಗರಗಳು ಕನ್ನಡಿಗರ ಪಾಲಿಗೆ ಮರೆತುಹೋದ ಗತ ಸಾಮ್ರಾಜ್ಯದ ಸಂಕೇತಗಳಾಯಿತು. ಬೇಂದ್ರೆಯವರು ಕೂಡ ಹಂಪಿಯನ್ನು ಕನ್ನಡಿಗರ ಹೆಮ್ಮೆಯ ಪ್ರತೀಕವಾಗಿ ಭಾವಿಸುತ್ತಾರೆ.

" ಬಿದ್ದ ರಾಜ್ಯವಿದಲ್ಲ ಉದ್ಬುದ್ಧವಾಗಿದ್ದು
ಎದ್ದ ರಾಜ್ಯದ ಮೊಳಕೆಯಿದು, ಇದರ ಬಳಿಯಲ್ಲಿ
ಇದ್ದು ಸಂಜೀವನದ ಜಪಿಸುವಂತಹ ಯೋಗಿ ಕೊಂಪೆ ಹಂಪೆಯು ಇದಲ್ಲ
ಬುದ್ಧಿಯೆಣಿಸಿತು, ಅಂತರಂಗದಧಿನಾಯಕನು
ಸುದ್ದಿಯನ್ನು ಸೂರುವೊಲು ಬುದ್ಧಿಯನು ಮೀರುವೊಲು
ಎದ್ದು ಹೇಳಿದನೊ – ತಾ ಕನಕನೊಡೆಯನು ಪೇಳ್ದ
ಶುದ್ಧ ಮುಂಡಿಗೆಯಿದೆಂದು" [೬೬] (ಹಂಪಿ– ವಿಜಯನಗರ ದರ್ಶನ)

ಹಂಪಿಯನ್ನು ಆ ಮೂಲಕ ವಿಜಯನಗರವನ್ನು ವರ್ಣಿಸುವ, ಓದುಗರಿಗೆ ಒಂದು ಕಾಲದ ಶ್ರೇಷ್ಠ ಸಾಮ್ರಾಜ್ಯವೊಂದರ ದರ್ಶನವನ್ನು ಮಾಡಿಸುವ ಕವಿ ಪ್ರಸ್ತುತ ಹಾಳಾಗಿ ಕುಸಿದು ಹೋದ ಹಂಪಿಯನ್ನು ಕಣ್ಮುಂದೆ ತಂದುಕೊಂಡೇ ಅದರ ಗತವನ್ನು ವರ್ಣಿಸುತ್ತಾರೆ. ಪ್ರಸ್ತುತ ನೋಡುವಾಗ ಹಂಪಿಯು ಬಿದ್ದುಹೋದ ಪಳೆಯುಳಿಕೆಯಾಗಿ ಕಾಣಬಹುದಾದರೂ, ಕವಿ ಇದು ಬಿದ್ದ ರಾಜ್ಯವಲ್ಲ, ಉನ್ನತಿಯನ್ನು ಕಂಡು ಎದ್ದು ನಿಂತಿದ್ದ ರಾಜ್ಯದ ಬೀಜವಿದು ಎನ್ನುತ್ತಾರೆ. ಹಂಪೆಯು ಕೊಂಪೆಯಲ್ಲ. ಅದನ್ನು ಮೀರಿದ ಒಂದು ಸ್ಫೂರ್ತಿಯ ಕೇಂದ್ರವಾಗಿದೆ ಎಂದು ಕವಿ ಇಲ್ಲಿ ಹೇಳುತ್ತಾರೆ. ಅದಕ್ಕಾಗಿಯೇ ಕವಿ ಹಂಪಿಯನ್ನು 'ನಾಡ ನಡುಮನೆ' ಎಂದು ಸಂಭೋಧಿಸಿ ಈ ನಡುಮನೆಯನ್ನು ತಾನು ಕಂಡೆನು ಎಂದು ಅರ್ಥಗರ್ಭಿತವಾಗಿ ಹೇಳುತ್ತಾರೆ. ಹಂಪಿಯು ಸತ್ ಧರ್ಮದಲ್ಲಿ ನಡೆದರೆ ವಿಜಯ ಸಿಗುವುದು ಎಂಬುದಕ್ಕೆ ಸಾಕ್ಷಿಯಾಗುತ್ತದೆ.

ಬೇಂದ್ರೆಯವರು ಕರ್ನಾಟಕ – ಕನ್ನಡದ ಕುರಿತು ಹೊಂದಿದ್ದ ಹೆಮ್ಮೆಯನ್ನು ಅವರ 'ತುತ್ತೂರಿ – ಎಚ್ಚರ' ಕವನದಲ್ಲಿ ನೋಡಬಹುದು.

"ನಮ್ಮ ನಾಡು, ನುಡಿ ನಮ್ಮದೆನ್ನಿರಿ
ನಮ್ಮ ಜನರು ಎಂದೆನ್ನು ತೀಳಿರಿ
ನಮ್ಮದೆಂಬುದಿರಲೀ ಸುಸ್ವಾರ್ಥವು
ಹೆಮ್ಮೆ ಬಿಡಿರಿ, ಕಿವಿಗೊಡಿರಿ ಕೂಡಿಗೆ– ತೂತೂ ತೂತೂ

ಕರ್ಣಾಟಕ ಭಾಷೆಯು ಮತ್ತೊಮ್ಮೆ
ಕರ್ಣಾಟನ ಮಾಡಲಿ ಮೂಲೋಕದ
ಕರ್ಣಾಟಕ ಕರ್ಣಾಟಕವೆಂಬೀ
ಕರ್ಣ ಕರ್ಣದೊಳು ಕೂಗು ಹೋಗಲಿ – ತೂತೂ ತೂತೂ "[೩೭]

(ತುತ್ತೂರಿ – ಎಚ್ಚರ)

ನಾಡು – ನುಡಿಯನ್ನು, ನಾಡಿನ ಜನರನ್ನು ನಮ್ಮವರು ಎಂದು ಹೇಳುವ ಒಳ್ಳೆಯ ಸ್ವಾರ್ಥದ ಅಗತ್ಯವಿದೆ. ಅದಕ್ಕಾಗಿ ಹೆಮ್ಮೆ ಪಡಬೇಕಾಗಿದೆ ಎನ್ನುತ್ತಾರೆ. ಕರ್ನಾಟಕದ ಭಾಷೆ, ಮೂರು ಲೋಕದಿಂದಲೂ ಕಿವಿಗೆ ಕೇಳುವಂತಾಗಬೇಕು. ಕರ್ನಾಟಕ ಕರ್ನಾಟಕ ಎನ್ನುವ ಮೊಳಗುವಿಕೆ ಪ್ರತಿಯೊಂದು ಕಿವಿ ಕಿವಿಯಲ್ಲೂ ಮೊಳಗಬೇಕು ಎಂಬ ಆಸೆಯನ್ನು ಕವಿ ವ್ಯಕ್ತಪಡಿಸುತ್ತಾರೆ. ಆ ಮೂಲಕ ಜನ ಮಾನಸದ ಆಸೆಗೆ ಕವಿ ಜೀವ ತುಂಬುತ್ತಾರೆ.

ಬೇಂದ್ರೆಯವರು ಏಕೀಕರಣ ಭಾವ ಜಾಗೃತಿಗಾಗಿ ರಚಿಸಿದ ಬಹಳ ಮುಖ್ಯ ಕವಿತೆಗಳಲ್ಲಿ 'ಏಳು ಶೂರರ ರಾಣಿ !' ಕೂಡ ಒಂದು. ಕನ್ನಡಿಗರನ್ನು ಎಚ್ಚೆತ್ತುಕೊಳ್ಳುವಂತೆ ಮಾಡುವ ಕವಿತೆ ಇದು. ಕನ್ನಡಿಗರೊಳಗೆ ಹುದುಗಿರುವ ಶಕ್ತಿಯನ್ನು ಕನ್ನಡ ತಾಯಿಯ ಮೂಲಕ ಶೋಧಿಸಿಕೊಳ್ಳುತ್ತಾರೆ.

" ಏಳು ಶೂರರ ಖಣೀ ! ಏಳು ಶೂರರ ರಾಣಿ !
ಏಳು ತೀರದ ವೀರರಸದ ವಾಣಿ !
ಏಳು ಮೀರಿದ ಜಾನಿ! ಏಳು ಈ ಸ್ಥಿತಿಗಾಣಿ !
ಏಳು ವರ ವರದ ಪಾಣಿ !

ಶೂರ ಪುರುಷರ ಕೊನೆಯು, ವೀರ ಕವಿಗಳ ಗೊನೆಯು

ಬೀರುತನವೆಂಬ ಶಲ್ಯಕ್ಕೆ ಮೊನೆಯು

ಧೀರ ಸತಿಯರ ತೆನೆಯು, ವೀರರಸಗಳ ಸೊನೆಯು

ಈ ರೀತಿ ನಿನ್ನ ಮನೆಯು" ೩೮ (ಏಳು ಶೂರರ ರಾಣಿ)

ಇಲ್ಲಿ ಕವಿ ಕನ್ನಡ ತಾಯಿಯನ್ನು ಕನ್ನಡಿಗರಿಗೆ ಪರಿಚಯಿಸುವ ರೀತಿ ವಿಶಿಷ್ಟವಾಗಿದೆ. ಈ ಬಗೆಯ ಪರಿಚಯದಲ್ಲೇ ಒಂದು ಸ್ಪಷ್ಟ ಉದ್ದೇಶವಿದೆ. ಕನ್ನಡಿಗರಲ್ಲಿ ನಾಡಿನ ಚಿಂತನೆ ಸಾಂಸ್ಥಿಕವಾಗಿ ಆರಂಭಗೊಂಡ ಕಾಲಘಟ್ಟದಲ್ಲೇ ಈ ಕವಿತೆ ರಚನೆಯಾಗಿರುವುದನ್ನು ಗಮನಿಸಬೇಕು. ಕನ್ನಡಿಗರ ಮಾತೆ ಎಂಥವಳು? ಎಂಬ ಪ್ರಶ್ನೆಯನ್ನು ಎದುರಿಟ್ಟುಕೊಂಡ ಕವಿ ಆಕೆಯನ್ನು ಕನ್ನಡಿಗರಿಗೆ ಆಕೆಯು ಶೌರ್ಯ, ಶಕ್ತಿ, ಜ್ಞಾನ ಸಮೃದ್ಧಿ, ಸತ್ವವನ್ನು ಉಳ್ಳವಳೆಂದು ಪರಿಚಯಿಸುತ್ತಿದ್ದಾರೆ. ಯಾವ ಕರ್ನಾಟಕವನ್ನು ಕುವೆಂಪು ಶಕ್ತಿಯಾಗಿ, ಮಂತ್ರವಾಗಿ, ಚಂಡಿಯಾಗಿ, ತಾಯಿಯಾಗಿ, ದೇವಿಯಾಗಿ ಕಂಡಿದ್ದರೊ, ಅದನ್ನೆ ಬೇಂದ್ರೆಯವರು ಶೂರರ ರಾಣಿಯಾಗಿ, ವೀರ ರಸದ ವಾಣಿಯಾಗಿ, ವರ ವರದಪಾಣಿಯಾಗಿ ಕಾಣುತ್ತಾರೆ. ಅಂತಹ ಕನ್ನಡಮ್ಮ ಕನ್ನಡ ಜನರ ನಿಷ್ಕ್ರಿಯತೆಯ ಕಾರಣದಿಂದ ಜಡವಾಗಿ ಬಿಟ್ಟಿದ್ದಾಳೆ. ವೀರರ ನೆಲೆಯಾದ ತಾಯ್ನಾಡನ್ನು ವಿಭಜಿಸಿ ಕನ್ನಡಿಗರನ್ನು ಅತಂತ್ರರನ್ನಾಗಿಸಲಾಗಿದೆ. ವಸಾಹತುಶಾಹಿ ಪ್ರಭುತ್ವದ ಕ್ರೌರ್ಯವನ್ನು ಎದುರಿಸಿ ಕನ್ನಡ ತಾಯಿಯನ್ನು ಮತ್ತೆ ಮೆರೆಯಿಸಬೇಕಾದರೆ ಕನ್ನಡಿಗರು ತಮ್ಮ ತಾಯಿಯ ಸತ್ವವನ್ನು ಅರಿತು ಒಂದಾಗಬೇಕಾಗಿದೆ. ಇದಕ್ಕಾಗಿ ಕನ್ನಡಿಗರು ತಮ್ಮ ಹೇಡಿತನವನ್ನು ಕಳೆದು ಸತ್ವವುಳ್ಳವರಾಗಬೇಕಾಗಿದೆ. ಕವಿಗೆ ತಾಯಿಯನ್ನು ವೀರ ಮಾತೆಯಾಗಿ ತೋರಿಸುವ ಹುಮ್ಮಸಿದೆ. ಕನ್ನಡಿಗರ ಕ್ರಿಯಾಶೀಲತೆಯಲ್ಲಿ ಕನ್ನಡ ತಾಯಿ ಮತ್ತೆ ಮೇಲೆದ್ದು ನಿಲ್ಲುವ ಆಶಯವನ್ನು ಕವಿ ಪ್ರಕಟಿಸುತ್ತಾರೆ.

ಕನ್ನಡ ತಾಯಿ ಶೂರರ ಸಂಪತ್ತು, ಶೂರರ ರಾಣಿ, ವೀರರಸ ಪ್ರತಿಪಾದನೆಯ ಸರಸ್ವತಿ, ಉನ್ನತ ಮಟ್ಟದ ಜ್ಞಾನಿ ಎಂದು ಹೇಳಿ ಕನ್ನಡಿಗರಲ್ಲಿ ಮರೆತು ಹೋದ ಪ್ರಜ್ಞೆಯನ್ನು ಮತ್ತೆ ಎಚ್ಚರಗೊಳಿಸುತ್ತಾರೆ. ಆಕೆ ವೀರರಿಗೆ, ಆಕೆಯ ವೀರತ್ವವನ್ನು ಕಾವ್ಯರಸವನ್ನಾಗಿಸಿದ ಕವಿಗಳಿಗೆ ನಾಡಿಗಾಗಿ ಹುತಾತ್ಮರಾದ ಧೀರ ಸತಿಯರಿಗೆ ಜನ್ಮ ನೀಡಿದವಳು. " ಈ ರೀತಿ ನಿನ್ನ ಮನೆಯು" ಎನ್ನುವಾಗ ಕವಿ ತನ್ನೆದುರಿನ ಕನ್ನಡಿಗರ ಆಲಸ್ಯ, ಹೇಡಿತನಕ್ಕೆ ಪ್ರತಿಯಾಗಿ ನಿನ್ನ ಮನೆ ಹಿಂದೊಮ್ಮೆ ಹೀಗಿತ್ತು ಎನ್ನುವುದರ

ಮೂಲಕ ಅವರಲ್ಲೂ ಎಚ್ಚರ ಮೂಡಿಸುತ್ತಾರೆ. ಈ ರೀತಿಯಾಗಿ ನಾಡಿನ ವೀರ ಪರಂಪರೆಯನ್ನು ನೆನಪಿಸುವ ಮೂಲಕ "ಕನ್ನಡಿಗರಲ್ಲಿ 'ಅಭಿಮಾನಿ ದೇವತೆ'ಯನ್ನು ಕ್ರಿಯಾಶೀಲವನ್ನಾಗಿಸುತ್ತಾರೆ." [೩೯] ಜಡವಾಗಿ, ಸತ್ವಹೀನರಾಗಿ ಹೋಗಿರುವ ಕನ್ನಡಿಗರಲ್ಲಿ ಕನ್ನಡ ತಾಯಿ ಮತ್ತೊಮ್ಮೆ ಜೀವಂತಿಕೆಯನ್ನು ತುಂಬಬೇಕು ಎಂಬ ಪ್ರಾರ್ಥನೆ ಇಲ್ಲಿದೆ. ಹೇಡಿತನ ಎನ್ನುವುದು ಸಾವಿಗೆ ಸಮಾನ ಎಂದು ಭಾವಿಸಿದ್ದ ಕಾಲಘಟ್ಟದಲ್ಲಿ ಕವಿ ಇಂತಹ ಹೇಡಿಗಳ ಎದೆಯಲ್ಲಿ ಶೌರ್ಯವನ್ನು ತುಂಬಬೇಕಾಗಿತ್ತು. ಕನ್ನಡಕ್ಕೆ ಕಂಟಕವಾಗಿ ಸುತ್ತಿರುವ ವಿಷವನ್ನು, ಕೆಡುಕಿನ ಅಂಶಗಳನ್ನು ಹೀರಿ ತೆಗೆಯಬೇಕಾಗಿದೆ. ಮತ್ತೆ ಅವರೊಳಗೆ ಅಮೃತತ್ವವನ್ನು, ಸತ್ವವುಳ್ಳ ಬೀಜವನ್ನು ಬಿತ್ತಿ ಅವರೊಳಗಿನ ಹೇಡಿತನವನ್ನು ಕೀಳುವಂತೆ ಕನ್ನಡಮ್ಮನಲ್ಲಿ ಕವಿಯ ನಿವೇದನೆ ಇದು. ಕವಿ ಕನ್ನಡ ತಾಯಿಯನ್ನು ಸಾಕ್ಷಾತ್ಕರಿಸಿಕೊಂಡ ರೀತಿ ಇಲ್ಲಿ ಗಮನಾರ್ಹವಾದುದು. ಏಕೆಂದರೆ ಒಡೆದ ನಾಡಿನ ಓದುಗರನ್ನು ಮುಖಾಮುಖಿಯಾಗಬೇಕಾಗಿದ್ದ ಸಂದರ್ಭದಲ್ಲಿ ಕವಿಗಿದ್ದ ಎಚ್ಚರವನ್ನು ಇದು ಸೂಚಿಸುತ್ತದೆ.

ಕನ್ನಡಿಗರ ಅಭಿಮಾನ ಶೂನ್ಯತೆಯಿಂದ ಕನ್ನಡ ನಾಡಿಗೆ ಬಂದ ಶೋಚನಿಯ ಸ್ಥಿತಿಗತಿಯನ್ನು ಬೇಂದ್ರೆ ಮತ್ತೆ ಮತ್ತೆ ಓದುಗರೊಂದಿಗೆ ಹೊಸದೊಂದು ಪ್ರಶ್ನೆಯಾಗಿಯೇ ಮುಂದಿಡುತ್ತಾರೆ. ಕವಿ ಒಂದೆಡೆ ಕನ್ನಡ ತಾಯಿಯ ಮಮತೆಯ, ಕಾರುಣ್ಯದ ಗುಣಗಳನ್ನು ಪರಿಚಯಿಸುತ್ತಲೇ ಕನ್ನಡಿಗರಿಗೆ ಒದಗಿದ ದುಃಸ್ಥಿತಿಯಿಂದ ಪಾರಾಗಬೇಕಾದರೆ ತಾಯಿಗಾಗಿ ಬಲಿಯಾಗಲು ತಯಾರಾಗಬೇಕಾಗಿದೆ. ಇದಕ್ಕಾಗಿ ಮಮತಾಮಯಿಯಾದ ತಾಯಿಯೇ ತನ್ನ ರೌದ್ರ ರೂಪವನ್ನು ಪ್ರಕಟಿಸಬೇಕಾಗುತ್ತದೆ ಎಂದೂ ಹೇಳುತ್ತಾರೆ . ತನ್ನನ್ನು ಚಂಡಿಯಾಗಿ, ಚಾಮುಂಡಿಯಾಗಿ ಪ್ರಕಟಪಡಿಸುವ ಕನ್ನಡ ತಾಯಿಯ ಚಿತ್ರವನ್ನು ಬೇಂದ್ರೆಯವರ 'ಕನಸಿನೊಳಗೊಂದು ಕಣಸು' ಕವಿತೆಯಲ್ಲಿ ನೋಡಬಹುದು.

" ನೀನಾರ ಮನೆಯವಳೊ ಮುತ್ತೈದೆ ಹೇಳು"
"ನಾನಾರ ಮನೆಯವಳೊ ಬಯಲನ್ನೆ ಕೇಳು"
"ರಾಜಮುಖಿ ನಿನ್ನಲ್ಲಿ ರಾಜ ಕಳೆಯಿಹುದು"
"ಸಾಜಮಾದರು ಪಕ್ಷವಿದು ವದ್ಯವಹುದು"

"ಯಾವುದಾದರು ನಾಡದೇವಿಯೇ ನೀನು?"

"ಭಾವುಕರ ಕಂಗಳಿಗೆ ದೇವಿಯೇ ನಾನು "

"ಚಂಡಿಚಾಮುಂಡಿ ಪೇಳ್ ಬೇಕಾದುದೇನು?"

" ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?" [೪೦]

(ಕನಸಿನೊಳಗೊಂದು ಕಣಸು)

ಈ ಕವಿತೆಯು ತಾಯಿ–ಮಕ್ಕಳ ಸಂವಾದದ ಸ್ವರೂಪವನ್ನು ಹೊಂದಿದೆ. ಇಲ್ಲಿ ತಾಯಿ ಕನ್ನಡಾಂಬೆ. ಆಕೆ ತನಗೆ ಒದಗಿರುವ ಹೀನಸ್ಥಿತಿಯನ್ನು ಹೇಳುತ್ತಲೇ ಈ ಸ್ಥಿತಿಯಿಂದ ತನ್ನನ್ನು ಪಾರುಮಾಡುವುದಕ್ಕೆ ಮಕ್ಕಳು ತಮ್ಮನ್ನು ಬಲಿ ನೀಡಬೇಕಾದ ಸಂದರ್ಭ ಬಂದಿದೆ ಎಂದು ಹೇಳುವಂತಿದೆ. ಕನ್ನಡ ಮನಸ್ಸು ಪ್ರಕಟಿಸಬೇಕಾದ ನಿಲುವನ್ನು ತಾಯಿಯ ರೂಪದಲ್ಲಿ ಆಹ್ವಾನಿಸುತ್ತಾರೆ.

ತಾಯಿಯಲ್ಲಿ ಕೇಳುವ ಪ್ರಶ್ನೆಯು ಹೊರಡಿಸುವ ಅರ್ಥವನ್ನು ಇಲ್ಲಿ ಗಮನಿಸಬೇಕು. ಇಲ್ಲಿನ ಮಕ್ಕಳಿಗೆ ತಾಯಿ ಅಪರಿಚಿತಳು. ತಾಯಿ ಎಂದು ಅರಿಯದ ಮಕ್ಕಳು 'ಯಾರು ನಿಂದವರಲ್ಲಿ? ಎಂದು ಕೇಳುತ್ತಾರೆ. ನೀನಾರ ಮನೆಯವಳು? ಎಂದು ಕೇಳುತ್ತಾರೆ. ಇಂತಹ "ಪ್ರಶ್ನೆಗಳು ಕನ್ನಡಾಂಬೆಯ ಬಗೆಗೆ ಮಕ್ಕಳು ತಳೆದ ಉದಾಸೀನತೆಯನ್ನು ಹಾಗೂ ಪಾರತಂತ್ರ್ಯದಿಂದ ಕನ್ನಡಾಂಬೆಗೆ ಒದಗಿರುವ ಅವಸ್ಥೆಯನ್ನು ಸೂಚಿಸುತ್ತದೆ. ತಾಯಿಯನ್ನೆ ಅಪರಿಚಿತಳಂತೆ ಪ್ರಶ್ನಿಸುವ ಇಂಥ ಮಗನ ಪ್ರಶ್ನೆಗಳು ಹೊರಡಿಸುವ ದುರಂತ ಮಾರ್ಮಿಕವಾದುದು. ಕನ್ನಡಿಗರ ಆಲಸ್ಯ ಹಾಗೂ ನಿರ್ವೀರ್ಯತೆಗಳನ್ನು ಪ್ರಶ್ನಿಸುವ ಕವಿತೆ ಇದು." [೪೧]

ಕವಿತೆ ಪಡೆದ ಸಂವಾದದ ಸ್ವರೂಪ ಅದರ ಅರ್ಥವ್ಯಾಪ್ತಿಯನ್ನು ಹಿಗ್ಗಿಸಿದೆ. ತಾಯಿಯನ್ನೇ ಗುರುತಿಸಲಾಗದ ವಿಸ್ಮೃತಿ ಕನ್ನಡಿಗರಿಗೆ ಬಂದಿತ್ತು. ಅನ್ಯೆಕ್ಯತೆಯ ಸವಾಲನ್ನು ಕನ್ನಡಿಗರು ಎದುರಿಸಲೇಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಕನಸಿನಲ್ಲಿ ಕಾಣಿಸಿಕೊಂಡ ನಾಡದೇವಿ ಮುತ್ತೈದೆಯಾಗಿ ತನ್ನ ರೂಪವನ್ನು ಪ್ರಕಟಪಡಿಸುತ್ತಲೇ, ತನ್ನೊಳಗೆ ಮಡುಗಟ್ಟಿದ ಅವ್ಯಕ್ತ ನೋವು, ದುಃಖಗಳನ್ನು ಹೊರಚೆಲ್ಲುತ್ತಾಳೆ. "ಆಕೆಗೆ ಮಕ್ಕಳೆಂಬುವರು (ಕನ್ನಡಿಗರು) ಇದ್ದರೂ ಚೆಲ್ಲಾಪಿಲ್ಲಿಯಾಗಿರುವುದರಿಂದ (ತುಂಡಾದ ಕನ್ನಡದ ಪ್ರದೇಶಗಳಲ್ಲಿ) ತನ್ನ ಹೆಸರನ್ನು (ಕರ್ನಾಟಕ ಮಾತೆ ಅಥವಾ ಕನ್ನಡಮ್ಮ)

ಹೇಳಿಕೊಳ್ಳಲಾರದ ಸ್ಥಿತಿಯನ್ನು ವಿವರಿಸುತ್ತಾಳೆ. ಆಕೆಗೆ ಬೇಕಿರುವುದನ್ನು ಬೇಡಿಕೊಳ್ಳಲು ಹೇಳುವ ಪ್ರಶ್ನಿಕ, ಆಕೆಯ ಬೇಡಿಕೆಯನ್ನು ಕೇಳಿ ದಂಗಾಗುತ್ತಾನೆ. ಏಕೆಂದರೆ ಆಕೆ ಕೇಳುವುದು ನಾಡಿಗಾಗಿ ಆತನ 'ಬಲಿ'ಯನ್ನು. ಅವನಿಗೆ ಮುತ್ತೈದೆಯ ಚಹರೆಗಿಂತ ಭಿನ್ನವಾದ 'ಚಂಡಿ- ಚಾಮುಂಡಿ'ಯ ರೂಪದರ್ಶನ ಆಗುತ್ತದೆ. "ಗಂಡಸಾದರೆ ನಿನ್ನ ಬಲಿಕೊಡುವೆಯೇನು?" ಎಂದು ಸವಾಲು ಹಾಕುವ ಆಕೆ ಬಯಸುವುದು ಬಲಿಷ್ಠ ತ್ಯಾಗವನ್ನೇ" [೪೨] ಎಂದು ಡಾ.ಸಿ.ಆರ್. ಗೋವಿಂದರಾಜು ಅಭಿಪ್ರಾಯ ಪಟ್ಟಿರುವುದು ಸರಿಯಾಗಿದೆ. ತಾಯಿ ಬಯಸುವ ಬಲಿ ಕನ್ನಡಿಗರ ಆಲಸ್ಯವನ್ನು, ನಿರ್ವೀರ್ಯತೆಯನ್ನು ವ್ಯಂಗ್ಯವಾಗಿ ಛೇಡಿಸುವಂತಿದೆ. ಯಾಕೆಂದರೆ ತಾಯಿಯ ಆಸೆಯನ್ನು ಪೂರೈಸಬೇಕಾದರೆ ಮಕ್ಕಳು ತಮ್ಮಲ್ಲಿ ವಿಶ್ವಾಸವನ್ನು ಹೊಂದುವ ವೀರರಾಗಲೇಬೇಕು. ಮಮತೆಯನ್ನು ಮಕ್ಕಳಿಗೆ ಉಣಿಸಿದ ತಾಯಿಯೇ ತನ್ನ ಮಕ್ಕಳನ್ನು ಬಲಿಯಾಗಲು ಕೂಡ ಆಹ್ವಾನಿಸಬಲ್ಲಳು. ತಾಯಿಯನ್ನು 'ಚಂಡಿ- ಚಾಮುಂಡಿ'ಯಾಗಿ ಕಂಡ ಕವಿ ಕನ್ನಡಿಗರಿಗೆ ತಾಯಿಯ ಹೊಸರೂಪವನ್ನು ಪರಿಚಯಿಸುತ್ತಾರೆ. ಆ ಮೂಲಕ ಕನ್ನಡಿಗರನ್ನು ಜಾಗೃತಗೊಳಿಸುತ್ತಾರೆ.

ಕನ್ನಡಿಗರ ಐಕ್ಯವನ್ನು ಕೆಡಿಸಿ ನಾಡನ್ನು ಒಡೆಯಲಾಗಿತ್ತು. ಈ ಸ್ಥಿತಿಯನ್ನು ದಾಟಿ ಮತ್ತೆ ನಾಡು ಒಂದಾಗಬೇಕಾದರೆ ನಾಡಿನ ಜನಗಳಿಂದ 'ಸೀಮೋಲ್ಲಂಘನ' ನಡೆಯಬೇಕಾಗಿದೆ. ಬೇಂದ್ರೆಯವರ ಈ ಹೆಸರಿನ ಕವಿತೆ ಕನ್ನಡಿಗರು ಸೀಮೆಯನ್ನು ದಾಟಿ ಹೋಗಬೇಕಾದ ಅವಶ್ಯಕತೆಯನ್ನು ಪ್ರತಿಪಾದಿಸುತ್ತಿದೆ. ವಿಂಗಡನೆಯನ್ನು ಕೈಬಿಟ್ಟು ಕೂಡಿ ಬಾಳುವ ಉದ್ದೇಶಕ್ಕಾಗಿ ಈ 'ಸೀಮೋಲ್ಲಂಘನ' ನಡೆಯಬೇಕಾಗಿದೆ ಎನ್ನುವುದು ಕವಿತೆಯ ಆಶಯ.

"ಒಂದೆ ತಾಯ ಮಕ್ಕಳಂತೆ ಒಂದಾಗಿ
ಅಂದಗೇಡನು ಕೆಡಿಸಿ ಚೆಲವು ಚೆಂದಾಗಿ
ಮುಂದಿರುವ ಜನರ ಸರಿಮೇಲು ಮುಂದಾಗಿ
ಸಾಗೋಣ ಹೋಗೋಣ ಸೀಮೆಯನು ದಾಟಿ
    ಹೋಗಲಾಡಿಸಿಕೊಂಡು ತಿರುಕತನವನ್ನು
    ನೀಗಲಾಡಿಸುತ ಮನೆಮುರುಕುತನವನ್ನು

ಬೇಗದಿಂ ಕರುನಾಡ ಹರಕುತನವನ್ನು

ಕಳೆದು ಹಿರಿದಾಗೋಣ ಸೀಮೆಯನು ದಾಟಿ"[೪೩] (ಸೀಮೋಲ್ಲಂಘನ )

ಕನ್ನಡಿಗರು ಪಂಗಡವಾಗಿ ವಿಂಗಡನೆಯಾಗಿದ್ದಾರೆ. ಹೀಗಾಗಿ ಒಂದೆ ತಾಯಿಯ ಮಕ್ಕಳಾದರು ಒಂದಾಗಿ ಬಾಳಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ಈ ಮಕ್ಕಳಿಗೆ ತಾವು ಒಂದೇ ತಾಯಿಯ ಮಕ್ಕಳು ಎಂಬ ಅರಿವೂ ಇಲ್ಲವಾಗಿದೆ. ಒಂದಾಗುವುದಕ್ಕೆ 'ಇಲ್ಲಸಲ್ಲದ ಕಾಲ ತೊಡರುಗಳಿವೆ'. ಈ ತೊಡರುಗಳನ್ನು ವಾಸ್ತವ ಪ್ರಜ್ಞೆಯಿಂದ ಅರಿಯದೇ ಹೋದರೆ, ಇವುಗಳೇ ಸಹಜವಾಗುವ ಸಾಧ್ಯತೆ ಇದೆ. ಹಾಗಾಗಿ ಬಲ್ಲವರು ತೋರುವ ಹಾದಿಯನ್ನು ಕನ್ನಡಿಗರು ಅರಿತುಕೊಳ್ಳಬೇಕು. ಒಂದಾಗುವುದಕ್ಕೆ ತಡೆಯಾಗಿ ನಮ್ಮೊಳಗೆ ಒಡಕುಗಳಿವೆ, ಸಂಶಯಗಳಿವೆ. ಪರಸ್ಪರರ ಹಗೆ ಕಳೆದು ಗೆಳೆತನ ಮೂಡಿದಾಗಲೇ ಏಕೀಕರಣ ಸಾಧ್ಯವಾಗುತ್ತದೆ. ಅದಕ್ಕಾಗಿ ಕವಿ ನಾಡ ಜನಗಳನ್ನು ಒಂದೇ ತಾಯಿ ಮಕ್ಕಳು ಒಂದಾಗಿ ನಡೆದು ಸೀಮೆಯನ್ನು ದಾಟಬೇಕಾಗಿದೆ ಎನ್ನುತ್ತಾರೆ. ಏಕೆಂದರೆ ಈ ಸೀಮೆ ನಮ್ಮನ್ನು ಒಡೆದ ಕೃತಕ ಸೀಮೆಯಾಗಿದೆ. ಅದನ್ನು ದಾಟಿದಾಗಲೇ ನಾವು ನಮ್ಮತನದ ಅನುಭೂತಿಯನ್ನು ಪಡೆಯಲು ಸಾಧ್ಯ. ಕನ್ನಡಿಗರ ತಿರುಕತನ, ಮನೆ ಮುರುಕುತನ ಹಾಗೂ ಕನ್ನಡ ನಾಡಿನ ಹರಕುತನವನ್ನು ಕಳೆದುಕೊಳ್ಳಬೇಕು. ಈ ಅಂಶಗಳು ಕನ್ನಡಿಗರಿಗೆ ಒಂದು ಮಿತಿಯಾಗಿದೆ. ಇದು ವರ್ತಮಾನದ ಸ್ಥಿತಿಯೂ ಆಗಿತ್ತು. ಇವೆಲ್ಲವನ್ನು ಸಂಕುಚಿತ ಸಂಗತಿಗಳೆಂದು ಭಾವಿಸಿ, ವಿಸ್ತಾರವಾದ ಒಂದಾದ ನಾಡನ್ನು ಮರಳಿ ಪಡೆದು ಹಿರಿದಾಗಬೇಕಾಗಿದೆ, ಇಡಿಯಾಗಬೇಕಾಗಿದೆ ಎಂದು ಕವಿ ಬಯಕೆ ಸಾರುತ್ತಿದೆ.

ಸೀಮೆಯನ್ನು ಮೀರಬೇಕಾದುದು ಕನ್ನಡಿಗರಿಗೆ ಸದ್ಯದ ಸ್ಥಿತಿಯಿಂದ ಪಾರಾಗಲು ಇರುವ ಏಕೈಕ ದಾರಿಯಾಗಿದೆ. ಹಾಗೆಂದು ಸೀಮೋಲ್ಲಂಘನ ನಮ್ಮ ಸೀಮೆಯನ್ನು ದಾಟಿ ಇನ್ನೊಬ್ಬರ ಸೀಮೆಯನ್ನು ಪ್ರವೇಶಿಸುವ ದುರಾಕ್ರಮಣದ ಪರಾಕ್ರಮ ಅಲ್ಲ. ಸೀಮೆ ಸೀಮೆಯ ಸಂಬಂಧವನ್ನು ಹೊಂದಿಸಿಕೊಳ್ಳುವುದೇ ಇಲ್ಲಿನ ಉದ್ದೇಶ. ಕನ್ನಡಿಗರು ತಮ್ಮ ಆಲಸಿತನವನ್ನು ಕಳೆದು ಮುನ್ನುಗ್ಗಬೇಕಾಗಿದೆ ಎನ್ನುವುದು ಕವಿತೆಯ ಆಶಯವಾಗಿದೆ.

### ೩.೫ ಬೇಂದ್ರೆ ಕವಿತೆಗಳು ಚಿತ್ರಿಸಿದ ನಾಡಿನ ಒಟ್ಟು ಸ್ವರೂಪ:

ಬೇಂದ್ರೆ ಕವಿತೆಗಳು ನಾಡು ಛಿದ್ರತೆಯನ್ನು ಕಳೆದು ಒಂದಾಗುವುದಕ್ಕಾಗಿ ಸಮೂಹದ ನಿಷ್ಕ್ರಿಯತೆಯಿಂದ ಬಿಡುಗಡೆಗೊಳ್ಳಬೇಕಾದ ಆಶಯವನ್ನು ವ್ಯಕ್ತಪಡಿಸುತ್ತದೆ. ಕನ್ನಡಮ್ಮನ ಆಂತರ್ಯದಲ್ಲಿ ಮಡುಗಟ್ಟಿ ನಿಂತಿರುವ ನೋವು ತನ್ನ ಮಗನೊಬ್ಬನ ಜೊತೆಗಿನ ಮಾತುಕತೆಯಲ್ಲಿ ಪರಿಹಾರವಾಗುವ ಸಾಧ್ಯತೆಯೊಂದನ್ನು ಹೇಳುತ್ತಿದೆ. ಇಲ್ಲಿ ಮನನು ತಾಯಿಗಾಗಿ ಬಲಿಯಾಗಲು ಸಿದ್ಧನಾದರೆ ತಾಯಿಯ ಸಂಕಟ ಪರಿಹಾರವಾಗುತ್ತದೆ. ಆದರೆ ಮಗನ ಮನಸ್ಥಿತಿ ಇದಕ್ಕೆ ಇನ್ನೂ ಹದಗೊಂಡಿಲ್ಲ. ತಾಯಿಯ ಆಸೆಯನ್ನು ಕೇಳಿಯೇ ಮಗನು ಕನಸು ಕಳೆದು ಎಚ್ಚರಗೊಂಡು ನಡುಗುವ ಹಾಗಿದೆ. ಆದರೆ ತಾಯಿ ತನ್ನ ಅಸಹಾಯಕತೆಯಿಂದ ಬಿಡುಗಡೆಗೊಳ್ಳುವುದು ಅಗತ್ಯ.

ಬೇಂದ್ರೆಯವರ ನಾಡು ಐಕ್ಯ ತತ್ವವನ್ನು ತನ್ನ ಮೂಲ ಬೀಜಮಂತ್ರವನ್ನಾಗಿಸಿಕೊಂಡಿದೆ. ಹಾಗಾಗಿ ನಾಡು ಒಂದಾಗುವ ಪ್ರಕ್ರಿಯೆಯಲ್ಲಿ ವೈವಿಧ್ಯತೆ ಕಳೆದು ಹೋಗುವುದಿಲ್ಲ. ಹಲವು ಮತ ತತ್ವಗಳು ಇಲ್ಲಿ ಸಾಮರಸ್ಯದಿಂದ ನೆಲೆಗೊಳ್ಳಲು ಸಾಧ್ಯವಿದೆ. ಇವೆಲ್ಲದರ ನಡುವೆ 'ಕರ್ನಾಟಕ ಒಂದೇ' ಎನ್ನುತ್ತಾರೆ. ಕನ್ನಡಿಗರ ಜನ-ಮನ-ಕುಲ- ನೀತಿ ಭಾಷೆಗಳೆಲ್ಲವೂ ಒಂದೇ ಆಗಿರುವುದರಿಂದ ಕರ್ನಾಟಕ ಒಂದೇ ಎನ್ನುತ್ತಾರೆ. ಇದರ ಹಿಂದೆ ಕನ್ನಡಿಗರ ಒಳಿತಷ್ಟೇ ಅಲ್ಲ, ಜಗತ್ತಿನ ಒಳಿತೂ ಇದೆ ಎನ್ನುವರು. ಕವಿಯ ಆಸೆ ಇರುವುದು ಕನ್ನಡ ಭಾಷೆ ಮೂರು ಲೋಕದಲ್ಲೂ ಕಿವಿಯಲ್ಲಿ ಮೊಳಗುವಂತಾಗಬೇಕು. ಕರ್ನಾಟಕದ ತುತ್ತೂರಿ ಎಲ್ಲೆಡೆಯೂ ಕೇಳುವಂತಾಗಬೇಕು.

ಬೇಂದ್ರೆಗೆ ಕನ್ನಡತನದ ಅರಿವು ಅದು ಕನ್ನಡಿಗರ ಅಸ್ಮಿತೆಯ ಪ್ರಶ್ನೆಯಾಗಿತ್ತು. ಭೌಗೋಳಿಕವಾಗಿ ಉಂಟಾದ ಪ್ರತ್ಯೇಕತೆಯ ಅರಿವು ಕನ್ನಡಿಗರನ್ನು ದಿನನಿತ್ಯದ ಅನೇಕ ಸಂಗತಿಗಳಲ್ಲಿ ಬಾಧಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ತಮ್ಮ ಕನ್ನಡತನವನ್ನು ಕಾಪಾಡಿಕೊಳ್ಳಬೇಕು ಎಂಬ ಎಚ್ಚರ ನಾಡಿನೆಲ್ಲೆಡೆ ಪಸರಿಸುವಂತಾಗಬೇಕಾಗಿತ್ತು. ಇದನ್ನು ಉಂಟುಮಾಡುವಲ್ಲಿ ಬೇಂದ್ರೆ ತೀವ್ರ ಸ್ವರೂಪದಲ್ಲಿ ಕ್ರಿಯಾಶೀಲರಾಗಿದ್ದರು. ನಾಡು ವಿಭಜನೆಗೊಂಡ ಕಾರಣದಿಂದ ವಸಾಹತುಶಾಹಿಯ ಕ್ರೌರ್ಯ ಬಹುವಾಗಿ ಕಾಡಿದ್ದು ಉತ್ತರ ಕರ್ನಾಟಕದ ಜನರನ್ನೇ. ಆದ್ದರಿಂದ ಬೇಂದ್ರೆ ಕಾವ್ಯದಲ್ಲಿ ನಾಡನ್ನು ಈ ಎಲ್ಲ ತೊಡಕುಗಳಿಗೆ ಉತ್ತರವಾಗಿ ಕಟ್ಟಬೇಕಾದ ಅನಿವಾರ್ಯತೆ ತೀವ್ರ ಸ್ವರೂಪದಲ್ಲಿದೆ. ಇದಕ್ಕೆ ಬೇಂದ್ರೆ ಧ್ವನಿಯಾದರು. ಒಟ್ಟಿನಲ್ಲಿ ಕನ್ನಡಿಗರು ಪ್ರಭುತ್ವದ ಸಂದಿಗ್ಧತೆಯಿಂದ ಪಾರಾಗಿ

'ಸ್ವ' ಗುರುತಿನೊಂದಿಗೆ ಬಾಳುವಂತೆ, ಕನ್ನಡದ ಜನ ಒಂದಾಗಬೇಕಾಗಿದೆ ಎನ್ನುವುದೇ ಬೇಂದ್ರೆಯವರ ಕವಿತೆಗಳಲ್ಲಿ ಕಾಣುವ ಮುಖ್ಯಸಂವೇದನೆಯಾಗಿದೆ.

## ೩.೬ ಬಿ.ಎಂ.ಶ್ರೀ. ಕವಿತೆಗಳಲ್ಲಿ ನಾಡಿನ ಚಿಂತನೆ:

'ಕನ್ನಡದ ಕಣ್ವ' 'ಕನ್ನಡ ನವೋದಯದ ಪ್ರವರ್ತಕ' ಎಂದು ಕರೆಯಲ್ಪಟ್ಟ ಬಿ.ಎಂ.ಶ್ರೀ.ಯವರು ಹೊಸಗನ್ನಡ ಕಾವ್ಯಕ್ಕೆ ಹೊಸ ಬಗೆಯ ಸ್ವರೂಪವೊಂದನ್ನು ತಂದು ಕೊಟ್ಟವರು. ಕನ್ನಡ ನಾಡು ನುಡಿಯ ಕುರಿತ ಶ್ರೀಯವರ ಚಿಂತನೆ ಗಮನಾರ್ಹವಾದದು. ವಿಭಿನ್ನ ಆಡಳಿತ ಘಟಕಗಳಲ್ಲಿ ಸೇರ್ಪಡೆಗೊಳಿಸುವುದಕ್ಕಾಗಿ ಛಿದ್ರಗೊಂಡಿದ್ದ ನಾಡಿನ ಏಕೀಕರಣಕ್ಕಾಗಿ ಹಾಗೂ ಭಾರತದ ಸ್ವಾತಂತ್ರ್ಯಕ್ಕಾಗಿ ತೀವ್ರವಾದ ಹೋರಾಟ ನಡೆಯುತ್ತಿದ್ದ ಕಾಲಘಟ್ಟದಲ್ಲೇ ಬಿ.ಎಂ.ಶ್ರೀಯವರು ಕಾವ್ಯ ಕೃಷಿಯಲ್ಲಿ ತೊಡಗಿಕೊಂಡಿದ್ದರು. ರಾಷ್ಟ್ರೀಯ ಹೋರಾಟದ ಬಗೆಯಲ್ಲಿ ಹೇಗೋ ಹಾಗೆಯೇ ಶ್ರೀಯವರು ಕರ್ನಾಟಕ ಏಕೀಕರಣದ ವಿಷಯದಲ್ಲೂ ಉಳಿದವರಿಗಿಂತ ಭಿನ್ನ ನಿಲುವನ್ನು ಹೊಂದಿದ್ದರು. ಇಬ್ಬಗೆಯ ದಾಸ್ಯದ ಮೈಸೂರು ಸಂಸ್ಥಾನದಲ್ಲಿದ್ದ ಶ್ರೀಯವರಿಗೆ ಮೈಸೂರು ಎನ್ನುವುದು ಮಹಾರಾಜರದ್ದು ಎಂಬಂತಹ ಭಾವನೆ ಇತ್ತು. ಹಾಗಾಗಿ ನೇರವಾಗಿ ಭೌಗೋಳಿಕ ಏಕೀಕರಣದ ವಿಷಯದಲ್ಲಿ ಶ್ರೀಯವರದ್ದು ಒಟ್ಟು ಏಕೀಕರಣ ಚಳವಳಿಯ ನೇತಾರರಿಗೆ ಇದ್ದ ಕಲ್ಪನೆಗಿಂತ ಭಿನ್ನ ನಿಲುವು ಇತ್ತು. ಶ್ರೀಯವರು ಭೌಗೋಳಿಕ ಏಕೀಕರಣಕ್ಕಿಂತ ಹೆಚ್ಚಾಗಿ ನಾಡನ್ನು ಸಾಂಸ್ಕೃತಿಕ ವಲಯದ ಪರಿಕಲ್ಪನೆಯಾಗಿಯೇ ಗ್ರಹಿಸಿದ್ದರು. ಬ್ರಿಟಿಷ್ ಪ್ರಭುತ್ವವನ್ನು ಸ್ವೀಕರಿಸಿದ್ದ ಮೈಸೂರು ಮಹಾರಾಜರ ಕೈ ಕೆಳಗಿನ ರಾಜಸೇವಾಸಕ್ತ ಶ್ರೀಯವರು ಭೌಗೋಳಿಕ ಏಕೀಕರಣ ಕಲ್ಪನೆಯನ್ನು ಪ್ರತಿಪಾದಿಸುವುದು ಸಾಧ್ಯವಿರಲಿಲ್ಲ. ಹಾಗಾಗಿ ಅದನ್ನು ಸಾಂಸ್ಕೃತಿಕ ನೆಲೆಯಲ್ಲಿ ಗ್ರಹಿಸಿ ಕನ್ನಡ ಭಾಷೆಯನ್ನು ತಲೆ ಎತ್ತಿ ನಿಲ್ಲುವಂತೆ ಮಾಡುವ ಕಾರ್ಯವನ್ನು ಹಲವು ಬಗೆಯಿಂದ ಮಾಡಿದರು. ಇದು ಎಲ್ಲೂ ಕರ್ನಾಟಕವನ್ನು ಏಕಪ್ರಭುತ್ವವಾಗಿಸುವ ಪ್ರಕ್ರಿಯೆಯ ಭಾಗವಾಗಿರಲಿಲ್ಲ. ಕನ್ನಡ ನಾಡಿನ ಕುರಿತ ಶ್ರೀಯವರ ಒಲವಿಗಿಂತ, ಕನ್ನಡ ಭಾಷೆಯ ಬಗೆಗಿನ ಒಲವಷ್ಟೇ ವಿಶೇಷವಾಗಿ ಅವರ ಕವಿತೆಗಳಲ್ಲಿ ಪ್ರಕಟವಾಗಿದೆ. ಭಾಷೆಯ ಕುರಿತ ಅವರ ಚಿಂತನೆ, ಒಲವುಗಳನ್ನು ಈ ಭಾಗದಲ್ಲಿ ಚರ್ಚೆಗೆ ಒಳಪಡಿಸಲಾಗುವುದು.

ಶ್ರೀಯವರು ದೇಶಭಾಷೆಯನ್ನು ಜನರ ವಿದ್ಯಾಭಿವೃದ್ಧಿಗಾಗಿ ಇಟ್ಟುಕೊಳ್ಳಬೇಕು, ಸಾಮಾನ್ಯ ರಾಜಕಾರ್ಯಕ್ಕೆ, ಸಭೆಗಳಿಗೆ ಇಂಗ್ಲಿಷನ್ನು ಬಳಸಬೇಕು ಎಂಬ ಧೋರಣೆಯನ್ನು ಹೊಂದಿದ್ದರು. ಹೀಗೆ ಮಾಡಿದಾಗ ದೇಶಭಾಷೆಗಳು ಹಲವಿದ್ದರೂ ಒಗ್ಗಟ್ಟಿಗೆ ಬಾಧಕವಲ್ಲ ಎಂದು ಭಾವಿಸಿದ್ದರು. ಬಹುಭಾಷೆ, ಬಹುಜಾತಿಗಳ ನಡುವೆ ಐಕ್ಯವನ್ನು ಪ್ರತಿಪಾದಿಸುತ್ತಿದ್ದಾಗ ಶ್ರೀಯವರು "ಐಕ್ಯ ಮತ್ಯವೆಂದರೆ ಎಲ್ಲರೂ ಒಂದೇ ಪಡಿಯಚ್ಚಾಗಿ ಸ್ವತಂತ್ರವನ್ನು ನೀಗಿಕೊಳ್ಳಬೇಕೆಂದಲ್ಲ; ಭೇದವಿರಬೇಕಾದ ಕಡೆ ಭೇದವೂ, ಸಾಮ್ಯವಿರಬೇಕಾದ ಕಡೆ ಸಾಮ್ಯವೂ ಮುಖ್ಯ. ಪರಸ್ಪರ ವಿಶ್ವಾಸವಿದ್ದಲ್ಲಿ ಎರಡೂ ಐಕಮತ್ಯದಲ್ಲಿ ಸೇರಬಹುದು" [೪೪] ಎನ್ನುತ್ತಾರೆ. ಏಕತೆಯನ್ನು ಸಾಧಿಸಿಕೊಳ್ಳುವಾಗ ವೈವಿದ್ಯವನ್ನು ಬಲಿಕೊಡ ಬೇಕಾಗಿಲ್ಲ. ಭೇದವೂ, ಸಾಮ್ಯವೂ ಒಟ್ಟಾಗಿಯೇ ಇದ್ದು ಉಳಿಯಬಹುದು ಎಂಬ ಚಿಂತನೆ ಅವರಲ್ಲಿದೆ.

ಶ್ರೀಯವರ ನಾಡಿನ ಪ್ರಜ್ಞೆ ಸಂಕುಚಿತವಾದುದಲ್ಲ. ಅವರು ಇಂಗ್ಲಿಷ್–ಸಂಸ್ಕೃತ– ಕನ್ನಡದ ನಡುವೆ ಸಮನ್ವಯ ಸಾಧಿಸಿಕೊಂಡರೆ ಲಾಭ ಎನ್ನುತ್ತಿದ್ದರು. "ಇಂಗ್ಲಿಷರ ಕಾವ್ಯಮಾಲೆ ಪರಮೋತ್ಕೃಷ್ಟವಾದದ್ದು! ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು, ಇದರ ಐಶ್ವರ್ಯದಲ್ಲಿ ಭಾಗಿಗಳಾಗಿ, ಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿ ಬಿಟ್ಟರೆ, ಮುಂದೆ ಸ್ವದೇಶ ಮಾರ್ಗವೂ, ವಿದೇಶ ಮಾರ್ಗವೂ ಕಲೆತು ಒಂದಾಗಿ, ಎರಡರಲ್ಲೂ ಒಗ್ಗದುವು ವಕ್ರವಾದುವು ಬಿಟ್ಟುಹೋಗಿ, ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ" [೪೫] ಎನ್ನುತ್ತಾರೆ. ಶ್ರೀಯವರು ಕನ್ನಡವನ್ನು ಸದ್ಯದ ದುಃಸ್ಥಿತಿಯಿಂದ ಮೇಲೆತ್ತಲು ಇರುವ ದಾರಿಯಾಗಿ ಕಾಣುವುದು ಇಂಗ್ಲಿಷ್‌ನ ಜೊತೆಗೆ ಸಂಬಂಧವನ್ನು ಸಾಧಿಸುವ ಬಗೆಯೊಂದೇ. ಅದಕ್ಕಾಗಿ ಭಾಷಾಂತರ ಮಾಡಿ ಕನ್ನಡದ ಬೊಕ್ಕಸವನ್ನು ತುಂಬಿಕೊಂಡರೆ ಕನ್ನಡದ ಸ್ಥಿತಿ ಉತ್ತಮವಾಗುವ ಭರವಸೆ ಅವರಿಗಿದೆ. ಸ್ವದೇಶಮಾರ್ಗ ಮತ್ತು ವಿದೇಶಮಾರ್ಗದ ಜೊತೆಗೆ ಕೂಡಿಕೊಂಡು ಕನ್ನಡ ತನ್ನಲ್ಲಿ ಅತ್ಯುತ್ತಮವಾದ ಕಾವ್ಯಮಾಲೆಯನ್ನು ಸೃಷ್ಟಿಸಲು ಸಾಧ್ಯವೆಂದು ಭಾವಿಸಿದ್ದರು. ಶ್ರೀಯವರ 'ಇಂಗ್ಲಿಷ್ ಗೀತ'ಗಳ ಅನುವಾದ ಕಾರ್ಯವನ್ನು ಅವರ ಈ ನಿಲುವಿನ ಹಿನ್ನೆಲೆಯಾಗಿಯೇ ನೋಡಬೇಕು. ಸದ್ಯ ಖಾಲಿಯಾಗಿರುವ ಕನ್ನಡದ ಬೊಕ್ಕಸವನ್ನು ತುಂಬುವ ದಾರಿಯಾಗಿ ಅವರು ಅನುವಾದವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

೧೯೧೧ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನೀಡಿದ ಉಪನ್ಯಾಸ 'ಕನ್ನಡ ಮಾತು ತಲೆ ಎತ್ತುವ ಬಗೆ' ಯಲ್ಲಿ ಕನ್ನಡವು ಸದ್ಯದ ಎಲ್ಲಾ ರೀತಿಯ ಶಕ್ತಿಹೀನತೆಯಿಂದ ಮೇಲೆದ್ದು ಬರುವ ಭರವಸೆಯನ್ನು ತುಂಬುತ್ತಾರೆ. ಕನ್ನಡದಲ್ಲಿ ಮಾತನಾಡುವುದು, ಬರೆಯುವುದು ಗೌರವಕ್ಕೆ ಪಾತ್ರವಾಗದೇ ಇದ್ದ ಕಾಲಘಟ್ಟದಲ್ಲಿ ಕನ್ನಡದ ಬಗ್ಗೆ ಚಿಂತನೆ ಮಾಡಿದವರು ಶ್ರೀಗಳು. ಕನ್ನಡದ ಬಗೆಗೆ ಸಂಪೂರ್ಣ ನಿರ್ಲಕ್ಷ್ಯವೇ ಆವರಿಸಿದ್ದ ಸಂದರ್ಭದಲ್ಲಿ ಅವರು ಕನ್ನಡವನ್ನು ಮತ್ತೆ ತಲೆ ಎತ್ತಿ ನಿಲ್ಲುವಂತೆ ಮಾಡಬಲ್ಲ ದಾರಿಗಳನ್ನು ಹುಡುಕುತ್ತಿದ್ದರು.

ಶ್ರೀಯವರು ಕನ್ನಡವನ್ನು ಮೇಲೆತ್ತುವುದಕ್ಕಾಗಿ ತಾವೇ ಒಂದು ಸವಾಲನ್ನು ಮೈಮೇಲೆ ಹಾಕಿಕೊಳ್ಳುತ್ತಾರೆ. ಅದೆಂದರೆ ಭಾಷೆಗೆ ಒಂದು ಸಾಮಾನ್ಯ ಕಟ್ಟನ್ನು ತರುವ ಕುರಿತು. ಆಡು ಭಾಷೆಯು ಕಾವ್ಯಕ್ಕೆ ಸೂಕ್ತವಲ್ಲ ಎಂಬ ಗ್ರಹಿಕೆಯ ಹಿನ್ನೆಲೆಯಿಂದ. "ಈಗಿನ ಆಡುವ ಭಾಷೆಯಲ್ಲಿ ಕ್ರಮವಿಲ್ಲ, ಏಕರೂಪವಿಲ್ಲ, ಪ್ರಾಂತ್ಯಭೇದವಿದೆ, ಮಿಶ್ರವಿದೆ, ಗ್ರಾಮ್ಯವಿದೆ. ಅರ್ಥ ಕ್ರಮ ಎರಡೂ ಬೇಕಾದರೂ ಅರ್ಥ ಮುಂದು, ಕ್ರಮ ಹಿಂದು; ಆದದ್ದರಿಂದ ಅರ್ಥವಾಗುವ ಹೊಸ ಭಾಷೆಯನ್ನೇ ಹಿಡಿದು ಕ್ರಮಕ್ಕೆ ಬರುವಂತೆ ತಪ್ಪು ಭಾಗವನ್ನೆಲ್ಲಾ ಶೋಧಿಸೋಣ. ಎರಡೂ ಭಾಷೆಗೂ ಮಧ್ಯಮಾರ್ಗವನ್ನು ಹಿಡಿದರೆ ಸಾಧ್ಯವಾಗುತ್ತದೆ. ..... ಆದರೆ ಭಾಷೆಯನ್ನು ಸುಲಭ ಮಾಡುತ್ತೇನೆಂದು ಅಬದ್ಧ ಮಾಡಬಾರದು, ಗ್ರಾಮ್ಯವನ್ನು ದೂರವೇ ನಿಲ್ಲಿಸಿ ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟೂ ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು" [೪೬] ಎನ್ನುತ್ತಾರೆ. ಶ್ರೀಯವರು ಆಯ್ಕೆ ಮಾಡಿದ ಕ್ರಮದ ಬಗ್ಗೆ ನಮಗೆ ಪ್ರಶ್ನೆಗಳಿರಬಹುದಾದರೂ ಆ ಕಾಲಘಟ್ಟದ ಚಾರಿತ್ರಿಕ ಹಿನ್ನೆಲೆಯೊಳಗೆ ನೋಡಿದರೆ ಅದ್ಯಾವುದೇ ದಾರಿಯಿಂದಾದರೂ ಕನ್ನಡವನ್ನು ಮತ್ತೆ ಅರಳಿಸಬೇಕು ಎಂಬ ಸವಾಲನ್ನು ಅವರು ಸ್ವೀಕರಿಸಿದ್ದರು ಎನ್ನುವುದನ್ನು ನೆನಪಿಟ್ಟುಕೊಳ್ಳಬೇಕಾಗುತ್ತದೆ.

ಶ್ರೀಯವರಿಗೆ ಕನ್ನಡದ ಪುನರುಜ್ಜೀವನವೇ ನಾಡಿನ ಕುರಿತು ಮಾಡಬಹುದಾದ ಅತಿದೊಡ್ಡ ಕಾರ್ಯವಾಗಿತ್ತು. ಕುವೆಂಪು ಬೇಂದ್ರೆಯವರಿಗಿಂತ ಭಿನ್ನವಾಗಿ ಶ್ರೀಯವರು ಈ ಸವಾಲಿಗೆ ಮುಖಾಮುಖಿಯಾದರು. ಶ್ರೀಯವರು ಹೊಸಗನ್ನಡವನ್ನು ಕಟ್ಟುವುದಕ್ಕಾಗಿ ಕಾವ್ಯಭಾಷೆಯನ್ನು ಸುಧಾರಿಸುವುದಕ್ಕಾಗಿ ಎಲ್ಲರಿಗೂ ಉಪಯುಕ್ತವಾದ ಒಂದು ಶಬ್ದಕೋಶವನ್ನು ಯೋಚಿಸುತ್ತಾರೆ. ಹೊಸ ಕಾಲಕ್ಕೆ ಉಪಯುಕ್ತವಾಗಬಹುದಾದ

ರೀತಿಯಲ್ಲಿ ಅವರು ಶಬ್ದಗಳನ್ನು ಆಯ್ಕೆ ಮಾಡುತ್ತಾರೆ. ಅದಕ್ಕಾಗಿ ವ್ಯಾಕರಣದ ನಿಯಮಗಳಲ್ಲಿ ಹೊಸ ಸುಧಾರಣೆಯನ್ನು ಯೋಚಿಸುತ್ತಾರೆ. ಇವೆಲ್ಲದರ ಹಿಂದೆ ಕನ್ನಡವನ್ನು ಮತ್ತೆ ಉತ್ತಮ ಭಾಷೆಯನ್ನಾಗಿಸಬೇಕು ಎಂಬ ಅವರ ಆಲೋಚನೆ ಕಾರಣವಾಗಿತ್ತು. ಕನ್ನಡ ನಾಡನ್ನು, ಕನ್ನಡ ನುಡಿಯನ್ನೂ ಒಮ್ಮನಸ್ಸಿನಿಂದ ಕಟ್ಟಲು ಬಯಸಿದರು.

ಶ್ರೀಯವರು ನಾಡು-ನುಡಿಯ ಕುರಿತು ಚಿಂತನೆಯನ್ನು ಆರಂಭಿಸಿದ ಕಾಲಕ್ಕೆ ಕನ್ನಡವು ಅವನತ ಸ್ಥಿತಿಗೆ ಇಳಿದು ಕುಗ್ಗಿ ಹೋಗಿತ್ತು. ಅದು ಒಂದು ಉಚ್ಛ್ರಾಯ ಕಾಲವನ್ನು ದಾಟಿ ಈ ಸ್ಥಿತಿಗೆ ಬಂದಿತ್ತು. ಒಂದೆಡೆ ಕರ್ನಾಟಕವನ್ನು ಒಂದು ಪ್ರಾಂತವನ್ನಾಗಿಸಬೇಕು ಎಂಬ ಚಳವಳಿ ತೀವ್ರವಾಗಿರುವಾಗಲೇ, ಇನ್ನೊಂದೆಡೆ ಕನ್ನಡ ಭಾಷೆ ಕುಗ್ಗಿ ಹೋಗುತ್ತಿತ್ತು. “ನಾಡಿನಿಂದ ನುಡಿಯೂ, ನುಡಿಯಿಂದ ನಾಡೂ ಬಲವಾದವು. ಭದ್ರವಾದುವು. ನಾಡ ನುಡಿ ಉನ್ನತ ಸ್ಥಾನದಲ್ಲಿತ್ತು. ಗೌರವ ಸ್ಥಾನದಲ್ಲಿತ್ತು. ದೇಶದಲ್ಲಿ ನಡೆಯಬೇಕಾದ ಕಾರ್ಯಗಳೆಲ್ಲವೂ ಆ ಭಾಷೆಯಲ್ಲೇ ನಡೆಯುತ್ತಿದ್ದವು. ವಿದ್ಯಾಭ್ಯಾಸದ ಭಾಷೆ ಅದು. ರಾಜಕಾರ್ಯಸಂಸ್ಥೆಗಳಲ್ಲಿ ಉಪಯೋಗಿಸುವ ಭಾಷೆ ಅದು. ಜನಸಾಮಾನ್ಯದ ಭಾಷೆ ಅದು. ಕನ್ನಡ ನಾಡಿನ ದೇಶಭಾಷೆ ಕನ್ನಡ ಎಂಬ ಆಧಾರದ ಮೇಲೆಯೇ ಕನ್ನಡ ನಾಡು ಮತ್ತೆ ಹುಟ್ಟಬೇಕಾಗಿದೆ”[೪೭] ಎನ್ನುತ್ತಾರೆ. ನಾಡು ಮತ್ತೆ ಭಾಷೆಯ ಆಧಾರದಲ್ಲೇ ಮೇಲೆದ್ದು ನಿಲ್ಲಬೇಕಾಗಿದೆ. ಕನ್ನಡಿಗರು ಮಾತೃಭಾಷೆ, ದೇಶಭಾಷೆ, ರಾಷ್ಟ್ರಭಾಷೆ, ದೇವಬಾಷೆಗಳ ಮೇಲಾಟದಲ್ಲಿ ಬಳಲುತ್ತಿರುವಾಗ ಕನ್ನಡಿಗರ ಆಯ್ಕೆ ಯಾವುದಾಗಬೇಕು ಎಂಬುದರ ಕುರಿತು ಚಿಂತಿಸಿದರು. ಇದಕ್ಕೆ ಉತ್ತರವಾಗಿ ಅವರು ‘ ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲೀಷಲ್ಲ, ಹಿಂದಿಯಲ್ಲ, ಕನ್ನಡ’ ಎನ್ನುತ್ತಾರೆ. ಕನ್ನಡದ ಹೊರತಾಗಿ ಕನ್ನಡ ನಾಡಿಲ್ಲ. ಕನ್ನಡ ನಾಡಿನ ಹೊರತು ಕನ್ನಡಕ್ಕೆ ಗತಿಯಿಲ್ಲ. ಹಾಗೆಂದು ಹೇಳುವಾಗ ಶ್ರೀಯವರ ಕನ್ನಡ ಪ್ರೀತಿ ಅನ್ಯಭಾಷಾ ವಿರೋಧದ ರೂಪ ತಾಳುವುದಿಲ್ಲ. ಶ್ರೀಯವರು ಎಲ್ಲೂ ಅನ್ಯಭಾಷೆಗಳನ್ನು ವಿರೋಧಿಸುವುದು ಇಲ್ಲ. ಅವರು ಹೇಳುವಂತೆ ‘ ಕನ್ನಡದ ಸಾರ ಮಂತ್ರ ಹೀರಿ ಹೊಮ್ಮುವುದು’ ಆಗಬೇಕು. ಅದೇ ಕಾಲಘಟ್ಟದ ಅನೇಕರು ಇಂಗ್ಲಿಷನ್ನು ಭಯಮಿಶ್ರಿತವಾಗಿ ನೋಡುತ್ತಿದ್ದರೆ, ಶ್ರೀಯವರು “ ನನಗೆ ಇಂಗ್ಲಿಷ್‌ನ ಭೀತಿಯಿಲ್ಲ. ದಾಸ್ಯ, ಪರಭಿಕ್ಷೆ, ಸಂಪ್ರದಾಯ ಭಂಗ ಮುಂತಾದ ಕೂಗುಗಳು ನನಗೆ ಅರ್ಥವಾಗವು. ಪುನರುಜ್ಜೀವನಕ್ಕೆ, ಸ್ವಾತಂತ್ರ್ಯಕ್ಕೆ ಹೊಸ ಆತ್ಮಕ್ಕೆ ಪ್ರಳಯವೂ ಬೇಕು, ಸೃಷ್ಟಿಯೂ ಬೇಕು.

ಅದಕ್ಕಾಗಿ ಬಿಡುವುದೂ ಉಂಟು, ಇಡುವುದೂ ಉಂಟು, ಸೇರಿಸುವುದೂ ಉಂಟು. ಹೊಸದನ್ನು ಕಲಿಯುವುದರಿಂದ ದೇಶವೂ ಮುಳುಗುವುದಿಲ್ಲ, ಭಾಷೆಯೂ ಕೆಡುವುದಿಲ್ಲ" [೪೭] ಎನ್ನುವರು. ಕನ್ನಡ ಭಾಷೆಯ ಪುನರುಜ್ಜೀವನಕ್ಕಾಗಿ ಶ್ರೀಯವರು ಇಂಗ್ಲಿಷಿನೊಂದಿಗೆ ಸಮನ್ವಯ ಭಾವವನ್ನು ಹೊಂದುತ್ತಾರೆ. ಹಾಗಾಗಿ ಇಂಗ್ಲಿಷ್‌ನ್ನು ಆತಂಕಕಾರಿಯಾಗಿ ನೋಡುವುದಿಲ್ಲ. ಇಂಗ್ಲಿಷನ್ನು ಒಪ್ಪುವುದು ದಾಸ್ಯವನ್ನು, ಪರಭಿಕ್ಷೆಯನ್ನು ಒಪ್ಪಿದಂತೆ ಎಂಬ ಆ ಕಾಲದ ಕೂಗಿಗೆ ಅವರು ನೀಡುವ ಉತ್ತರ ಇದು. ಯಾವ ನೆಲೆಯಿಂದಾದರೂ ಕನ್ನಡ ಬೆಳಗಬೇಕು ಎನ್ನುವುದೇ ಅವರ ಕಳಕಳಿ.

ಏಕೀಕರಣ ಚಳವಳಿಯ ಕಾಲಘಟ್ಟದಲ್ಲಿ ಕನ್ನಡವನ್ನು ಅದರ ಎಲ್ಲಾ ಮಿತಿ, ದೋಷಗಳಿಂದ ಹೊರಗೆ ನಿಲ್ಲಿಸಿ ಉತ್ಕಟವಾಗಿ ಹೊಗಳುವ, ವರ್ಣಿಸುವ ಪ್ರಯತ್ನವೇ ನಡೆಯುತ್ತಿತ್ತು. ಶ್ರೀಯವರು ಕನ್ನಡದ ಮೂಲಸತ್ವವನ್ನು ಅರಿತು ಅದನ್ನು ಕುರಿತು ಮಾತನಾಡುತ್ತಾರೆ. " .... ಕನ್ನಡ ಬದುಕಿದೆ– ಬೆಳೆಯುತ್ತಿದೆ. ಅದು ಇಂದಿನ ಅವಶ್ಯಕತೆಗಳಿಗೆಲ್ಲ ಒದಗಿ ಕನ್ನಡಿಗರ ಜೀವಾಳವಾಗಬೇಕು. ಅವರ ಆತ್ಮವಿಕಾಸಕ್ಕೆ ಆಧಾರವಾಗಬೇಕು. ಕ್ರಾಂತಿಯಾಗಬೇಕು. ಹಳೆಯ ನುಡಿ ಹೊಸದಾಗಬೇಕು. ....ಕನ್ನಡದವರ ದೃಷ್ಟಿ ವಿಶಾಲವಾಗಬೇಕು. ಬೆಳಕು, ಗಾಳಿ ಎಲ್ಲೆಲ್ಲಿಂದ ಬರುವುವೋ ಅಲ್ಲಿಂದೆಲ್ಲಾ ಅವನ್ನು ನಮ್ರತೆಯಿಂದ, ಭಕ್ತಿಯಿಂದ ಸ್ವಾಗತಿಸಿ, ನಮ್ಮ ಸಂಸ್ಕೃತಿಯನ್ನೂ ತೇಜಸ್ಸನ್ನೂ ಬೆಳೆಸಿಕೊಳ್ಳಬೇಕು. ಒಡಕು ಹುಟ್ಟಿಸುವ ಮೋಟು ಗೋಡೆಗಳನ್ನು ಒಡೆದು, ಮುಚ್ಚಿದ ಕಿಟಕಿಗಳನ್ನು ತೆರೆದು, ಎಲ್ಲ ದಿಕ್ಕುಗಳಿಂದಲೂ ಅಳವನ್ನೂ ಅಂದವನ್ನೂ ತುಂಬಿಕೊಂಡು ಕನ್ನಡ ಮಹಾಕಾವೇರಿಯಾಗಿ ಹರಿಯಬೇಕು. ಕನ್ನಡಿಗರ ಭಾಗ್ಯ ವಿಧಾತೆಯಾಗಿ ಬೆಳಗಬೇಕು. ಸಂಯುಕ್ತ ಭಾರತಕ್ಕೆ ಚತುರ್ಭುಜವಾಗಿ ನಿಲ್ಲಬೇಕು" [೪೯] ಎನ್ನುತ್ತಾರೆ. ಈ ಮಾತುಗಳು ಕನ್ನಡಿಗರು ಹೊಸಕಾಲಕ್ಕೆ ತಮ್ಮನ್ನು ತಾವು ತೆರೆದುಕೊಳ್ಳಬೇಕಾದ ಬಗೆಯನ್ನು, ಕನ್ನಡದ ಶಕ್ತಿಯನ್ನೂ ಹೇಳುತ್ತಲೇ, ಕನ್ನಡವು ಸಂಯುಕ್ತ ಭಾರತದ ಚತುರ್ಭುಜವಾಗಬೇಕು, ಭಾರತವು ಪರಕೀಯರ ದಾಸ್ಯದಿಂದ ವಿಮೋಚನೆಗೊಳ್ಳಬೇಕು. ಭಾರತದ ಒಕ್ಕೂಟದಲ್ಲಿ ಐಕ್ಯಗೊಂಡ ಪ್ರತೀ ಭಾಷಾಪ್ರಾಂತದಲ್ಲಿ ಆ ಪ್ರಾಂತ ಭಾಷೆಯೇ ಅಗ್ರಮಾನ್ಯವಾಗಿರುವಂತೆ ಕರ್ನಾಟಕದಲ್ಲಿ ಕನ್ನಡವೇ ಸರ್ವಪ್ರಾಧಾನ್ಯತೆಯನ್ನು ಹೊಂದಿರಬೇಕು. ಆ ಮೂಲಕ ಭಾರತದ ಶಕ್ತಿಯೇ ಆಗಬೇಕು ಎಂಬ ಆಶಯವನ್ನು ಹೊಂದಿದೆ.

ಶ್ರೀಯವರು ಸಂಪಾದಿಸಿದ 'ಕನ್ನಡ ಬಾವುಟ' ಸಂಕಲನ ಒಂದು ಮಹತ್ವದ ಸಂಕಲನ. ೧೯೩೮ರಲ್ಲಿ ಈ ಕೃತಿಯನ್ನು ಸಂಪಾದಿಸಿದರು. ಅದರ ಮುನ್ನುಡಿಯಲ್ಲಿ "೭ನೆಯ ಶತಮಾನದಿಂದ ೨೦ನೆಯ ಶತಮಾನದ ಇಂದಿನವರೆಗೆ ಕನ್ನಡ ಬೆಳೆಯನ್ನು ೧) ಶಾಸನಗಳು ೨) ಪೂರ್ವಸಾಹಿತ್ಯ ೩) ನಾಡಪದಗಳು ೪) ಇಂದಿನ ಹೊಸಕವಿತೆ – ಈ ನಾಲ್ಕು ತೆನೆಗಳಲ್ಲಿ ತೋರಿಸಿದ್ದೇನೆ. ಕಾಲ ಕಾಲದ ಭಾಷೆಯ ಮಾರ್ಪಾಟುಗಳು, ಛಂದಸ್ಸಿನ ಬಗೆಬಗೆಯ ಕುಣಿತ, ಕನ್ನಡ ನಾಡಿನ ಸೊಬಗು, ಹೃದಯ, ಧರ್ಮಗಳು, ಮಹಾವ್ಯಕ್ತಿಗಳು, ಜೀವಗುರಿಗಳು, ಬೇರೆ ಬೇರೆ ಪ್ರಾಂತ ಪ್ರೇಮಗಳು – ಒಂದು ಮಾತಿನಲ್ಲಿ, ಹಿಂದಿನ ಮಹತ್ವದ ಸಂಸ್ಕಾರ ಮತ್ತು ಸಂಸ್ಕೃತಿ, ಇಂದಿನ ಮಹತ್ವದ ಧ್ಯೇಯ ಮತ್ತು ಯೋಜನೆಗಳು, ನಾಡ ನುಡಿಯ ಮಿಡಿತ– ನನಗೆ ತಿಳಿದಂತೆ ಯಾವ ಯಾವುದು ಕನ್ನಡ ಬಾವುಟದಡಿಯಲ್ಲಿ ಹೊಮ್ಮಿದ ಎರಡು ಸಾವಿರ ವರ್ಷದ ಜೀವಾಳವೋ ಅದನ್ನೇ ತೆನೆಗಳಾಗಿ ಆಯ್ದು ತೆಕ್ಕೆ ಮಾಡಿ ಕನ್ನಡಿಗರ ಕೈಗೆ ಒಪ್ಪಿಸಿದ್ದೇನೆ"[೫೦] ಎಂದಿದ್ದಾರೆ. ಈ ಸಂಕಲನದ ಉದ್ದೇಶವೇ ಕನ್ನಡ ನಾಡು ಎಚ್ಚೆತ್ತುಕೊಳ್ಳುತ್ತಿರುವ ಸಂದರ್ಭದಲ್ಲಿ ಕನ್ನಡ ನಾಡಿನ ಹೆಮ್ಮೆಯನ್ನು ಹಾಡಿದ ಕವಿಗಳ ಕಾವ್ಯಭಾಗಳನ್ನು ಸಂಗ್ರಹಿಸುವುದು ಆಗಿತ್ತು. ಕನ್ನಡದ ಹೆಮ್ಮೆಯನ್ನು ಹರಡುವುದಕ್ಕಾಗಿ, ಸುಮಾರು ೧೪ ಶತಮಾನಗಳಷ್ಟು ವಿಸ್ತಾರವಾಗಿರುವ ಕನ್ನಡದ ವಿವಿಧ ಬಗೆಯ ಕಾವ್ಯಗಳನ್ನು ಸಂಗ್ರಹಿಸಿ ನೀಡಿರುವುದು ಕನ್ನಡಿಗರಲ್ಲಿ ಕನ್ನಡದ, ನಾಡಿನ ಕುರಿತು ಹೆಮ್ಮೆಯನ್ನು ಹುಟ್ಟಿಸುವುದಕ್ಕಾಗಿಯೇ. ನಾಡಕಾರ್ಯದಲ್ಲಿ ಜನರಿಗೆ ಇನ್ನಷ್ಟು ಪ್ರೇರಣೆಯನ್ನು ಹುಟ್ಟಿಸುವುದಕ್ಕಾಗಿ. ಏಕೀಕರಣ ಹೋರಾಟದ ಕಾಲಘಟ್ಟದ ಹಿನ್ನೆಲೆಯಲ್ಲಿ ಮಾತ್ರವಲ್ಲ, ಯಾವ ಕಾಲಕ್ಕೂ ಇದೊಂದು ಮಹತ್ವದ ಸಂಕಲನವೇ ಆಗಬಲ್ಲದು. ಇದರಲ್ಲಿ ಶ್ರೀಯವರ ಚಿಂತನೆಯ ವಿಸ್ತಾರವನ್ನು ನೋಡಬಹುದು. "ಒಟ್ಟಿನ ಮೇಲೆ ಕನ್ನಡ ಮಂತ್ರ ಒಂದೇ ಆಗಿರಬೇಕು. ನಮ್ಮ ಕನ್ನಡ ನಾಡು, ನುಡಿ, ಸಾಮ್ರಾಜ್ಯ ಇನ್ನೊಮ್ಮೆ ಕಟ್ಟಬೇಕಾಗಿದೆ. ನಾವೆಲ್ಲರೂ ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ ಎಂಬುದನ್ನು ಜಪಿಸಬೇಕು" ಎಂಬುದೇ ಶ್ರೀಯವರ ಆಶಯವಾಗಿತ್ತು.

ಶ್ರೀಯವರು ಕನ್ನಡ ನುಡಿಯ ಕುರಿತು ಒಲವನ್ನು ಹೊಂದಿದ್ದು, ಅದಕ್ಕೆ ಪೂರಕವಾಗಿಯೇ ಇಂಗ್ಲಿಷನ್ನು ಗ್ರಹಿಸಿದ್ದರು. ಅವರು ಕನ್ನಡ ಮತ್ತು ಇಂಗ್ಲಿಷ್‌ನ ನಡುವೆ ಹುಟ್ಟು ಹಾಕಿದ ಸಂಬಂಧದ ನೆಲೆ ವಿಶಿಷ್ಟವಾದುದು.

" ಕನ್ನಡ ನುಡಿ ನಮ್ಮ ಹೆಣ್ಣು
ನಮ್ಮ ತೋಟದಿನಿಯ ಹಣ್ಣು
ಬಳಿಕ ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು
ಹೊಸದು ರಸದ ಬಳ್ಳಿ ಹಣ್ಣು
ಒಳಗೆ ಸುಳಿದಳು"[೫೧] (ಕಾಣಿಕೆ)

ಶ್ರೀಯವರು ಏಕೀಕರಣ ಚಳವಳಿಯಲ್ಲಿ ನೇರವಾಗಿ ತೊಡಗಿಸಿಕೊಂಡವರಲ್ಲ. ಅವರು ಮೈಸೂರು ಸಂಸ್ಥಾನದ ಮಹಾರಾಜರನ್ನು ಹೊಗಳುತ್ತಾ, ರಾಜಸೇವಾಸಕ್ತರಾಗಿಯೇ ಉಳಿದವರು.

ಇಂಗ್ಲಿಷ್ ಗೀತಗಳು ಸಂಕಲನದಲ್ಲಿನ ಸ್ವತಂತ್ರ ಕವಿತೆ 'ಕಾಣಿಕೆ'. ಈ ಕವನ ಕನ್ನಡ ಮತ್ತು ಇಂಗ್ಲಿಷ್‌ನ ಸಂಬಂಧವನ್ನು ಹೊಸ ಬಗೆಯಲ್ಲಿ ಮುಂದಿಡುತ್ತದೆ. ಈ ಕವಿತೆ ಕನ್ನಡ–ಇಂಗ್ಲಿಷ್, ಕನ್ನಡನಾಡು–ಇಂಗ್ಲೆಂಡ್‌ನ ಸಂಬಂಧವನ್ನು ಕೂಡ ನಿರೂಪಿಸುತ್ತಿದೆ. ಇಲ್ಲಿ ಕನ್ನಡದ ಬಗೆಗಿನ ಕವಿಯ ಅಭಿಮಾನ ಇಂಗ್ಲಿಷನ್ನು ಬಿಟ್ಟು ವ್ಯಕ್ತವಾಗುವುದಿಲ್ಲ. ಕನ್ನಡ ನುಡಿಯನ್ನು 'ನಮ್ಮ ಹೆಣ್ಣು' ಎನ್ನುತ್ತರಾದರೂ ಇಂಗ್ಲಿಷ್ ಕೂಡ 'ಪಡುವ ಕಡಲ ಹೊನ್ನ ಹೆಣ್ಣು' ಆಗಿ ಕಾಣುತ್ತದೆ. ಕನ್ನಡವನ್ನು ಇಂಗ್ಲಿಷಿಗೆ ಅಡಿಯಾಳಾಗಿ ಕಟ್ಟಿಹಾಕಲಿಲ್ಲ. ಬದಲಾಗಿ ಇಬ್ಬರನ್ನು ಪರಸ್ಪರ ಇನಿಯರಾಗಿ ನೋಡುತ್ತಾರೆ.

" ಹೀಗೆ ನನಗೆ ಹಬ್ಬವಾಗಿ
ಇನಿಯರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ "[೫೨] (ಕಾಣಿಕೆ)

ಇಲ್ಲಿ 'ಕನ್ನಡ' 'ಇಂಗ್ಲಿಷ್' ಎರಡನ್ನೂ ಇನಿಯರನ್ನಾಗಿಯೇ ನೋಡುತ್ತಾರೆ. ಆ ಮೂಲಕ ಎರಡು ಭಾಷೆಗಳ ನಡುವೆ ಒಂದು ಬಗೆಯ ವಿಶಿಷ್ಟ ನಂಟನ್ನು ಬೆಸೆಯಲಾಯಿತು. ಪರಸ್ಪರರ ಸೊಬಗನ್ನು ಒಬ್ಬರಿಗೊಬ್ಬರು ಬದಲಾಯಿಸಿ ತೊಟ್ಟುಕೊಂಡು ಅಲಂಕರಿಸಿಕೊಂಡ ಪ್ರಕ್ರಿಯೆ. ಕವಿ ಕನ್ನಡ ಇಂಗ್ಲಿಷ್ ಎರಡೂ ಭಾಷೆಗಳನ್ನು, ಎರಡೂ ಹೆಣ್ಣುಗಳನ್ನು ಹೊಸರೂಪದಲ್ಲಿ ಕಾಣಬಯಸಿದ ಸಂಗತಿಯಾಗಿದೆ. ಈ ಕೊಡುಕೊಳ್ಳುವಿಕೆಯ ಕ್ರಮವೆ ಶ್ರೀಯವರು ಗ್ರಹಿಸಿದ ಕನ್ನಡದ ಸ್ವರೂಪ. ಇಂಗ್ಲಿಷ್‌ನ ಜೊತೆಗಿನ ಸಂಬಂಧದಿಂದ ಕನ್ನಡಕ್ಕೆ ಧಕ್ಕೆಯಾಗದೆ, ಕನ್ನಡಕ್ಕೆ ಹೊಸತನ ಪ್ರಾಪ್ತವಾಗುವುದು ಎಂಬ ಗ್ರಹಿಕೆ ಇಲ್ಲಿದೆ. ಇಂಗ್ಲಿಷ್ ಗೀತಗಳು ಸಂಕಲನವೇ ಇದಕ್ಕೆ ನಿದರ್ಶನ. ಇಂಗ್ಲಿಷ್‌ನ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ ಕ್ರಮವನ್ನು ಈ ಹಿನ್ನೆಲೆಯಿಂದಲೇ ಗಮನಿಸಬೇಕು.

ಶ್ರೀಯವರ ಸ್ವತಂತ್ರ ಕವಿತೆಗಳಲ್ಲಿ 'ಕನ್ನಡ ತಾಯ ನೋಟ' ಒಂದು ಮಹತ್ವದ ಕವಿತೆಯಾಗಿದೆ. ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷದ ಹಬ್ಬದ ಸಂದರ್ಭದಲ್ಲಿ ರಚಿಸಿದ ಕವಿತೆ ಇದು. ಗತದ ಸಂಗತಿಯೊಂದರ ಮೂಲಕ ನೆನಪುಗಳನ್ನು ಆಯ್ದು ಪುನರ್ ಸಂಘಟಿಸುತ್ತಾರೆ. ಈ ಕವಿತೆಯಲ್ಲಿ ಕವಿ ಕನ್ನಡ ತಾಯಿ ಕವಿಯ ಮೂಲಕ ಕಳುಹಿಸಿರುವ ಒಸಗೆ ನುಡಿಯನ್ನು ಆಕೆಯ ಮಕ್ಕಳಿಗೆ ತಿಳಿಸಲು ಬರುತ್ತಾರೆ.

"ಕೇಳಣ್ಣ ನಾನೊಬ್ಬ ಹಳೆಯ ಮುತ್ತೈದೆ– ಹಿರಿದಾಗಿ ಬಾಳಿದವಳೊಮ್ಮೆ
ಈಗ ಬಡತನ, ಬಡವೆ, ಬಡವಾದೆ, ಬಡವಾದ ಮಕ್ಕಳನು ನೋಡಿ
ಬತ್ತಿ, ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ, ಸಾವಿಲ್ಲ ನನಗೆ!
ಸಾವಿಲ್ಲ – ಸಾಯುತಿಹೆ .........
ಏನು ಕವಿಯಿತೊ, ಮಂಕು, ಮಕ್ಕಳಿಗೆ ! ಯಾರೆರಚಿದರೊ ಬೂದಿ ಕಾಣೇ
ನನ್ನನೊಲ್ಲರು ನನ್ನ ಮಕ್ಕಳೇ ! ತಾವ್ ಬಾಳಿ ತಾಯ ಬಾಳಿಸರು
ಹೆರದ ನುಡಿ, ಹೆರರ ನಡೆ – ಹೆರರ ಕೂಗೇ ಕೂಗು,ಹೆರರದೇ ಹೆಮ್ಮೆ
ನನ್ನ ಮನೆ ಹಾಳು!
ನನ್ನ ನುಡಿ ಬೀಳು !
ನನ್ನ ನಾಡಿನಳಿರುಳು "[೫೩] (ಕನ್ನಡ ತಾಯ ನೋಟ)

ಕನ್ನಡ ನಾಡಿನ ವರ್ತಮಾನದ ಸ್ಥಿತಿಯನ್ನು 'ಕನ್ನಡ ತಾಯಿ'ಯೇ ತನ್ನ ಮತ್ತು ನಾಡಿನ ಸ್ಥಿತಿಯನ್ನು ಹೇಳಿದ ಬಗೆಯ ವಿಶಿಷ್ಟ ಕವನ ಇದು. ಪ್ರಾಕೃತಿಕ ಸಂಪತ್ತಿನ ವೈಭವದ ನಡುವೆ ಕಳೆಗುಂದಿದ ಮುಖದ ನೊಂದಿರುವ ತಾಯಿಯೊಬ್ಬಳ ರೀತಿಯಲ್ಲಿ ಕನ್ನಡ ತಾಯಿ ಕಾಣಿಸಿಕೊಳ್ಳುತ್ತಾಳೆ. ಆ ತಾಯಿಯ ಮಾತಿನಲ್ಲಿ ಆಕೆಯ ಬದುಕಿನ ಸಂಗತಿಗಳು ಒಂದೊಂದಾಗಿ ಬಿಚ್ಚಿಕೊಳ್ಳುತ್ತದೆ.

ಶ್ರೀಯವರು ಕನ್ನಡ ಮಾತು ಮತ್ತೆ ತಲೆ ಎತ್ತುವಂತಾಗಬೇಕು ಎಂದು ಬಯಸಿ ಅದಕ್ಕಾಗಿ ನಾಡಿನಾದ್ಯಂತ ಓಡಾಡಿದವರು. 'ಕನ್ನಡ ತಾಯ ನೋಟ' ಕವನ ಅವರು ನಾಡು ಸುತ್ತಿದ ಮೇಲೆ ಕಂಡ ಕನ್ನಡ ತಾಯಿಯ ಚಿತ್ರಣವಾಗಿದೆ. ಕನ್ನಡಕ್ಕೆ ಶ್ರೀಮಂತವಾದ ಪರಂಪರೆ ಇದ್ದರೂ ಕನ್ನಡ ನಾಡಿನ ಮಕ್ಕಳ ಮರೆವಿನಿಂದ ತಾಯಿ ಬಡವಾಗಿದ್ದಾಳೆ. ಕವಿ ಕನ್ನಡ ತಾಯಿಯನ್ನು ಭೇಟಿಯಾಗುವ ಪೂರ್ವದಲ್ಲಿ ಶ್ರೀಮಂತವಾದ ಕನ್ನಡ ನಾಡನ್ನು ಸುತ್ತಿ ಬಂದಿದ್ದರು. ಆ ಇಡೀ ಸಂಭ್ರಮ ತಾಯಿಯನ್ನು ಕಂಡು ಆಕೆಯ ಕೊರಗನ್ನು ಕೇಳಿದಾಗ ಮರೆಯಾಗುತ್ತದೆ. ಮುಂದೆ ಕವಿ ಆ ತಾಯಿಗೆ ನಿದ್ದೆಗೈದಿರುವ ಕನ್ನಡದ ಮಕ್ಕಳು ಮೇಲೆದ್ದಾಗ ಮತ್ತೆ ವೈಭವ ನೆಲೆಯಾಗುವ ಮಾತುಗಳನ್ನಾಡುತ್ತಾರೆ. ಅಲ್ಲಿ ಹೊಸ ಕಾಣ್ಕೆಗಳು ಮೂಡುತ್ತವೆ. ಮತ್ತೆ ಸಾಮ್ರಾಜ್ಯಗಳು ಎದ್ದು ನಿಲ್ಲುತ್ತದೆ. ನಾಡು ಒಂದಾಗುವ, ನುಡಿ ಕೀರ್ತಿಯನ್ನು ಗಳಿಸುವ ರೀತಿಯಲ್ಲಿ ತಾಯನ್ನೂ ಬಾಳಿಸಿ ತಾವು ಬದುಕುವರು ಎನ್ನುತ್ತಾರೆ. ಕನ್ನಡ ತಾಯನ್ನೆ ರಥವೇರುವಂತೆ ಆಹ್ವಾನಿಸುತ್ತಾರೆ. ಅಲ್ಲಿಗೆ ಆಕೆಯ ಮುದಿತನ ಕಳೆದು ಮತ್ತೆ ಯೌವ್ವನ ಪ್ರಾಪ್ತವಾಗುತ್ತದೆ. ಆ ಮೂಲಕ ಲೋಕದ ಉಳಿದ ಭಾಷಾ ಬಂಧುಗಳ ಸಾಲಿನಲ್ಲಿ ಕನ್ನಡಿಗರೂ ಕೀರ್ತಿವಂತರಾಗುವ ಚಿತ್ರಣ ಇದೆ. ಕನ್ನಡ ತಾಯಿ ಹೇಳುವಂತೆ 'ತಾನು ಹಳೆಯ ಮುತ್ತೈದೆ, ಒಂದು ಕಾಲದಲ್ಲಿ ಹಿರಿದಾದ, ವೈಭವದ ಬಾಳನ್ನು ಬಾಳಿದವಳು' ಎನ್ನುತ್ತಾಳೆ. ಜೊತೆಗೆ ವರ್ತಮಾನದಲ್ಲಿನ ತನ್ನ ಘೋರ ಬಡತನವನ್ನೂ ಹೇಳಿಕೊಳ್ಳುತ್ತಾಳೆ. ಸಾವಿಲ್ಲದ ಬಾಳು ತನ್ನದಾದರೂ ಸಾಯುತ್ತಿರುವಂತಹ ತನ್ನ ಬದುಕು ಅರ್ಥಹೀನವಾಗಿದೆ. ತನ್ನ ಓರಗೆಯವರು ಹಬ್ಬದ ಸಂತೋಷದಲ್ಲಿದ್ದರೂ ತನಗೆ ಮಾತ್ರ ಹಬ್ಬವಿಲ್ಲ. ತನ್ನ ಮಕ್ಕಳಿಗೆ ಅದೆಂಥ ವಿಸ್ಮೃತಿಯೊ ? ನನ್ನನ್ನೇ ಕೈ ಬಿಟ್ಟಿದ್ದಾರೆ. ಪರರ ನುಡಿ, ನಡೆಗಳನ್ನು ಹೆಮ್ಮೆಯಿಂದ ಸ್ವೀಕಾರ ಮಾಡಿ ಬದುಕುತ್ತಿದ್ದಾರೆ. ನನ್ನ ನಾಡಿನಲ್ಲಿ ಮಾತ್ರ ಕತ್ತಲು ಕವಿದಿದೆ ಎಂಬ ನೋವಿನ ನುಡಿಗಳನ್ನು ಹೇಳುತ್ತಾಳೆ. ಇಡೀ ಕವಿತೆ ತನ್ನ

ನಾಟಕೀಯತೆಯಿಂದಲೇ ಗಮನ ಸೆಳೆಯತ್ತದೆ. ಕನ್ನಡ ತಾಯಿಯ ಕೊರಗೇನು ಎನ್ನುವುದನ್ನು ತಾಯಿಯೇ ಹೇಳಿಕೊಳ್ಳುವ ಬಗೆ ಕವಿತೆಯನ್ನು ಪರಿಣಾಮಕಾರಿಯಾಗಿಸಿದೆ. 'ಹಿರಿದಾಗಿ ಬಾಳಿದವಳೊಮ್ಮೆ' ಎಂದು ಹೇಳಿಕೊಳ್ಳುವಾಗಲೇ ವರ್ತಮಾನದ ಬಗೆಗಿನ ನೋವು ಏನು ಎನ್ನುವುದು ಬಿಂಬಿತವಾಗುತ್ತದೆ. ಅಂತಹ ಕನ್ನಡ ತಾಯಿಗೆ ವರ್ತಮಾನದಲ್ಲೇಕೆ ಇಂಥ ಸಂಕಟ ಎಂದು ಯಾರಾದರೂ ಕೂಡ ಯೋಚಿಸುತ್ತಾರೆ. ಇಲ್ಲಿ ಕವಿಯ ಉದ್ದೇಶ ಇದೇ ಆಗಿದೆ.

' ಹೆರರ ನುಡಿ, ಹೆರರ ನಡೆ – ಹೆರರ ಕೂಗೇ ಕೂಗು, ಹೆರರದೇ ಹೆಮ್ಮೆ!' ಎಂದು ಕನ್ನಡ ತಾಯಿ ತನ್ನ ಮಕ್ಕಳ ಕುರಿತು ವಿಷಾದದ ಮಾತುಗಳನ್ನು ಹೇಳುತ್ತಾಳೆ. ಕವಿತೆ ಇಂತಹ ಕನ್ನಡ ತಾಯಿಗೆ ಮತ್ತೆ ವೈಭವವನ್ನು ತಂದುಕೊಡುವ, ರಥವೇರಿ ಮುನ್ನಡೆಯುವ ಆಶಯವನ್ನು ವ್ಯಕ್ತಪಡಿಸುತ್ತದೆ. ಹೀಗಿದ್ದರೂ ಶ್ರೀಯವರಿಗೆ ವರ್ತಮಾನದಲ್ಲಿನ ವಸಾಹತುಶಾಹಿ ಆಳ್ವಿಕೆ ಆಕೆಯ ಪುನರ್ ವೈಭವಕ್ಕೆ ಅಡ್ಡಿ ಎಂದು ಅನ್ನಿಸುವುದಿಲ್ಲ. ಬ್ರಿಟಿಷ್ ಸಾಮ್ರಾಜ್ಯವನ್ನು ನಿರಾಕರಿಸುವ ಉದ್ದೇಶವೂ ಇಲ್ಲಿ ಕವಿಗಿಲ್ಲ. ಕಳೆದುಕೊಂಡ ವೈಭವದ ಮರು ಪ್ರತಿಷ್ಠಾಪನೆಗೆ ವಿಜಯನಗರ ಸಂಕೇತವಾಗುತ್ತದೆ. ಕನ್ನಡ ತಾಯಿಯ ಮಕ್ಕಳು ಒಂದಾಗಬೇಕು ಎನ್ನುವುದು ಇಲ್ಲಿನ ಮುಖ್ಯ ಆಶಯವಾಗುತ್ತದೆ.

ಶ್ರೀಯವರು ಇಲ್ಲಿನ ನಾಡು–ನುಡಿಯ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುವಂತೆ, ನಾಡನ್ನು ಆಳಿದ ವಿವಿಧ ಅರಸು ಮನೆತನಗಳನ್ನು ,ವೈಭವವನ್ನು ಕನ್ನಡಿಗರ ಹೆಮ್ಮೆಯ ಸಂಗತಿಗಳಾಗಿ ಮುಂದಿಡುತ್ತಾರೆ. ಅವರ 'ಕನ್ನಡದ ಬಾವುಟ' ಕವನದಲ್ಲಿ ಪ್ರಕಟವಾದ ಬಾವುಟವು ಕನ್ನಡಿಗರ ಹೆಮ್ಮೆಯ ಪ್ರತೀಕವಾಗಿ ಮೂಡಿ ಬಂದಿದೆ.

"ಬಾಳ್ ಕನ್ನಡ ತಾಯ್" !
ಏಳ್ ಕನ್ನಡ ತಾಯ್ !
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರೀ ! "
"ಕನ್ನಡದ ಬಾವುಟವ ಹಿಡಿಯದವರಾರು?
ಕನ್ನಡದ ಬಾವುಟಕೆ ಮಿಡಿಯದವರಾರು?

ಹೇಳಿರೋ ಹೆಸರೊಂದು ನೆನಹಿನಲಿ ಸುಳಿದರೆ!

ಹುಡುಕಿರೋ ಹೇಡಿ ತಾನೊಬ್ಬ ಮನೆಗುಳಿದರೆ!

ಕನ್ನಡದ ನಾಡಲಾ

ಕನ್ನಡದ ನುಡಿಯಲಾ

ಕನ್ನಡಿಗನೆದೆ ಕಡೆದ ತೆನೆಯಲಾ ಕೆನೆಯಲಾ!" [೨೪]

( ಕನ್ನಡದ ಬಾವುಟ)

ಇಲ್ಲಿ 'ಕನ್ನಡದ ಬಾವುಟ' ಕನ್ನಡ ನಾಡಿನ ಹೆಮ್ಮೆಯ ಪ್ರತೀಕವಾಗುತ್ತದೆ. ಕನ್ನಡ ತಾಯಿಯ ಮೂಲಕ ಕನ್ನಡಿಗರ ಏಳ್ಗೆಯನ್ನು, ಉನ್ನತಿಯನ್ನು ಕವಿ ಕಾಣುತ್ತಾರೆ. ಕನ್ನಡ ರಾಜರುಗಳ ಶೌರ್ಯ ಪರಂಪರೆಯನ್ನು ,ಅವರ ಸಾಹಸವನ್ನು, ಕನ್ನಡದ ಕವಿಗಳ ಕಾವ್ಯ ಶಕ್ತಿಯನ್ನು, ವೀರರ, ಸಾಧುಸಂತರ ಮೂಲಕ ಕಟ್ಟಲ್ಪಟ್ಟ ಕನ್ನಡದ ಬದುಕನ್ನು ಕವಿ ಇಲ್ಲಿ ತೋರಿಸುತ್ತಾರೆ. ಬಾವುಟ ಇಲ್ಲಿ ಸಮೃದ್ಧಿಯ ಸಂಕೇತವಾಗುತ್ತದೆ. ಹೊಸತನವನ್ನು, ಬೆಳಕನ್ನು ಬಾವುಟ ಪ್ರತಿನಿಧಿಸುತ್ತಿದೆ.

ಶ್ರೀಯವರ ಕನ್ನಡ ಅಭಿಮಾನ ಮೈಸೂರಿನ ರಾಜಮನೆತನದ ಅಭಿಮಾನದ ಜೊತೆ ಬೆರೆತು ಕೊಂಡಿತ್ತು. ಶ್ರೀ ಜಿ.ಎಚ್.ನಾಯಕ್‌ರವರು ಗುರುತಿಸುವಂತೆ "ಶ್ರೀಯವರ ಕನ್ನಡ ಭಕ್ತಿಯು ರಾಜಭಕ್ತಿಯ ಮರಕ್ಕೆ ಹಬ್ಬಿ ಬೆಳೆದ ಬಳ್ಳಿಯಂತೆ ತೋರುತ್ತದೆ. ಕನ್ನಡ ಭಕ್ತಿಯ ಆವೇಶ ತುಂಬಿಕೊಂಡು ಕರ್ನಾಟಕದ ಮೂಲೆ ಮೂಲೆಗಳನ್ನು ಸುತ್ತುವಾಗಲೂ ಕನ್ನಡದ ಅಭಿಮಾನ, ಕರ್ನಾಟಕದ ಏಕೀಕರಣಗಳ ಬಗ್ಗೆ ಪ್ರಚಾರ ಮಾಡುವಾಗಲೂ ಅವರ ರಾಜಭಕ್ತಿ ಅವರಿಗೆ 'ಸ್ವರಕ್ಷಣೆ'ಯ ಕವಚವಾಗಿದ್ದಂತೆ ತೋರುತ್ತದೆ. ಏಕೀಕೃತ ಕರ್ನಾಟಕಕ್ಕೆ ಮೈಸೂರು ಮಹಾರಾಜರು ಗವರ್ನರರಾಗಬೇಕೆಂದೂ, ಮೈಸೂರು ವಿಶ್ವವಿದ್ಯಾಲಯ ಕನ್ನಡಿಗರೆಲ್ಲರ ಏಕೈಕ ವಿಶ್ವವಿದ್ಯಾಲಯವಾಗಬೇಕೆಂದೂ ಅವರ ನಿಲುವಾಗಿತ್ತು …… ಮೇಲಿನವರ, ಅಧಿಕಾರದಲ್ಲಿರುವವರ ಇಷ್ಟ, ಒಲವುಗಳನ್ನು ಅರಿತು ಅನುಸರಿಸಿಕೊಂಡು ನಡೆಯುವ ಶ್ರೀಯವರ 'ಕರಿಯರಿಸ್ಟ್' ಮನೋಭಾವಕ್ಕೆ ಅನುಗುಣವಾಗಿಯೇ ಅವರ ಕನ್ನಡ ಭಕ್ತಿ ಬೆಳೆಯಿತು" [೨೫] ಎನ್ನುತ್ತಾರೆ. ಈ ಮಾತಿಗೆ ನಿದರ್ಶನವೆಂಬಂತೆ ಶ್ರೀಯವರ "ಶ್ರೀ ಜಯನ ಬೆಳಕು" ಕವಿತೆಯನ್ನು ನೋಡಬಹುದಾಗಿದೆ.

" ಕನ್ನಡದ ಬಾನಿನಲಿ ಮೂಡಿತದೋ ಬೆಳಕು
ಪುಣ್ಯ ಕಣ್ದೆರೆದಂತೆ ಬೆಳಕು !
ಕನ್ನಡಿಗರೊಲುಮೆ ತೆರೆ ಹೊಮ್ಮಿಸುವ ಬೆಳಕು
ಹೊನ್ನ ಕನಸನು ತರುವ ಹೊಸ ಕಳೆಯ ಬೆಳಕು
ಮುನ್ನರಿಯಚ್ಚರಿಯ ಮೆಚ್ಚು ಬೆಳಕು
ಬೆಳ್ಳಿ ಬೆಳಗುವ ಬಾನ ಬೆಳ್ಳನೆಯ ಬೆಳಕು
ಒಳ್ಳಿತೊಸರುವ ಹೆಸರ ದೊಡ್ಡ ಬೆಳಕು" [೫೬] (ಶ್ರೀ ಜಯನ ಬೆಳಕು)

ಈ ಕವಿತೆಯಲ್ಲಿ ಕನ್ನಡದ ಬೆಳಕು ಎಂದು ಹೇಳಲ್ಪಟ್ಟಿರುವುದು ಶ್ರೀ ಜಯಚಾಮರಾಜೇಂದ್ರ ಒಡೆಯರನ್ನು. ಕನ್ನಡ ನುಡಿಗೆ, ಕನ್ನಡ ನಾಡಿಗೆ, ಕನ್ನಡಿಗರಿಗೆ ಶ್ರೀ ಜಯಚಾಮರಾಜೇಂದ್ರನೇ ಬೆಳಕು. 'ಕನ್ನಡ ನಾಡು' ಬಿ.ಎಂ.ಶ್ರೀಯವರ ಈ ಕವಿತೆಯಲ್ಲಿ ಕರ್ನಾಟಕವಾಗದೆ 'ಮೈಸೂರು' ಆಗಿಯೇ ಉಳಿಯುತ್ತದೆ. ಮೈಸೂರು ಅರಸರೇ ಕನ್ನಡದ ಬೆಳಕಾಗುತ್ತಾರೆ. ಒಡೆಯರು ಇಲ್ಲಿ ಕನ್ನಡಿಗರ ಪುಣ್ಯವಾಗುತ್ತಾರೆ. ಕನ್ನಡಿಗರ ಒಲುಮೆಯಾಗುತ್ತಾರೆ.

ನಾಡಿನೆಲ್ಲೆಡೆ ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳವಳಿ ತೀವ್ರವಾಗಿ ನಡೆಯುತ್ತಿದ್ದಾಗ, ಶ್ರೀಯವರು ರಾಜಭಕ್ತಿಗೆ ಬಲವಾಗಿ ಅಂಟಿಕೊಳ್ಳುತ್ತಾರೆ. ಆ ಮೂಲಕ ವಸಾಹತುಶಾಹಿ ಶಕ್ತಿಗೂ ಪರವಾಗಿ ನಿಲ್ಲುತ್ತಾರೆ. ರಾಜಭಕ್ತಿಯನ್ನು ಸಾರುವ ಕವನಗಳನ್ನು ನಿಸ್ಸಂಕೋಚವಾಗಿ ಬರೆಯುತ್ತಾರೆ. ಅವರ ಕವನಗಳಿಗೆ ನಾಲ್ವಡಿ ಕೃಷ್ಣ, ಜಯಚಾಮರಾಜ ಕಾವ್ಯದ ವಸ್ತುವಾಗುತ್ತಾರೆ. ಮೈಸೂರು ಸಂಸ್ಥಾನ ಮಹಾರಾಜರ ಮೈಸೂರಾಗಿಯೇ ಉಳಿಯುವುದು ಶ್ರೀಯವರ ಆಸೆಯೂ ಹೌದು. ಹಾಗಾಗಿ ಜಯಚಾಮರಾಜ ಸಂಪತ್ತಿಗೆ ಒಡೆಯರಾಗಿಯೇ ಉಳಿಯುತ್ತಾರೆ. ಆ ಮೂಲಕ ಕನ್ನಡದ ಚೆಲುವು ಬೆಳಗುತ್ತದೆ ಎಂದು ಮೈದುಂಬಿ ವರ್ಣಿಸುತ್ತಾರೆ. ಇದು ಕೇವಲ ಶ್ರೀಯವರು ಭಾವುಕರಾಗಿ ಕಟ್ಟಿದ ಕವಿತೆಯಲ್ಲ. ಶ್ರೀಯವರ ಕನ್ನಡ ನಾಡಿನ ಗ್ರಹಿಕೆಯ ವ್ಯಾಖ್ಯಾನವಿದು. ರಾಜನನ್ನು ಒಪ್ಪಿಕೊಂಡೆ ಕಟ್ಟುವ ಕನ್ನಡ ನಾಡು ಇದು. ಹೀಗಾಗಿ ಇವರಿಗೆ ರಾಜನೇ ಬೆಳಕಾಗುತ್ತಾರೆ. ಕುವೆಂಪು, ಬೇಂದ್ರೆಯವರಿಗೆ ಹೋಲಿಸಿದಾಗ ಶ್ರೀಯವರು ಭಿನ್ನರಾಗಿಯೇ ಕಾಣುತ್ತಾರೆ.

ಇದೇ ವಿಚಾರವನ್ನು ಶ್ರೀಯವರ 'ಮೈಸೂರು ಮಕ್ಕಳು' ಕವನದಲ್ಲೂ ನೋಡಬಹುದಾಗಿದೆ.

" ನಿಮ್ಮ ನಾಡಾವುದು?
ಮೈಸೂರು.
ನಿಮ್ಮೂರದಾವುದು?
ಮೈಸೂರು.
ಕನ್ನಡದ ಕಣ್ಣದು,
ಮೈಸೂರು.
ನಾಲುಮಡಿ ಕೃಷ್ಣನ
ಮೈಸೂರು"

...............

"ಬೆಳೆಯುವ ನಾಡದು
ಮೈಸೂರು
ಇಳೆಯ ಮಾದರಿಯದು
ಮೈಸೂರು
ಕನ್ನಡಿಗನುಸಿರದು
ಮೈಸೂರು
ನಾಲುಮಡಿ ಕೃಷ್ಣನ
ಮೈಸೂರು "[೫೨] (ಮೈಸೂರು ಮಕ್ಕಳು)

ಮೈಸೂರನ್ನು ಮತ್ತು ನಾಲುಮಡಿ ಕೃಷ್ಣನನ್ನು ಕೊಂಡಾಡುವ ಮೂಲಕ ನಾಡಿನ ಸಮೃದ್ಧಿಗೆ, ಏಳ್ಗೆಗೆ ನಾಲುಮಡಿ ಕೃಷ್ಣನ ನಾಯಕತ್ವವೇ ಬೇಕಾಗಿದೆ, ಆತನ ಮೂಲಕ ಮೈಸೂರು ಎಂಬ ನಾಡು ಬೆಳಗಿ ನಿಲ್ಲುತ್ತದೆ ಎಂಬ ಭಾವ ಇಲ್ಲಿದೆ. ಇಲ್ಲಿ ಮೈಸೂರು ಇಳೆಗೆ ಮಾದರಿಯಾಗುತ್ತದೆ. ಇದು ಪರೋಕ್ಷವಾಗಿ ಮೈಸೂರನ್ನು ಉಳಿದ ಪ್ರದೇಶಗಳ ಜೊತೆ ಸೇರಿಸುವುದಾಗಲೀ, ಮೈಸೂರಿಗೆ ಉಳಿದ ಭೂಭಾಗಗಳ ಸೇರ್ಪಡೆಯನ್ನಾಗಲೀ ಸ್ವೀಕರಿಸಲು ಸಾಧ್ಯವಾಗದ ಮನಸ್ಥಿತಿಯನ್ನು ಪ್ರಕಟಿಸುತ್ತದೆ. ಮೈಸೂರು ಭಾಗದಲ್ಲಿ ಏಕೀಕರಣಕ್ಕಿದ್ದ ಬಹುದೊಡ್ಡ ವಿರೋಧದ ಕಾರಣವೆಂದರೆ ಉತ್ತರ ಕರ್ನಾಟಕವಾಗಲಿ, ಉಳಿದ ಕನ್ನಡ ನಾಡಿನ ಭೂಭಾಗವಾಗಲೀ ಮೈಸೂರಿನಷ್ಟು ಪ್ರಗತಿ ಹೊಂದಿಲ್ಲ ಎಂಬ ವಾದವೂ ಅಲ್ಲಿತ್ತು. ಹಾಗಾಗಿ ಮೈಸೂರು ಇಳೆಗೆ ಮಾದರಿಯಾಗಿ ಉಳಿಯಬೇಕಾದರೆ, ಮೈಸೂರು ಸ್ವತಂತ್ರವಾಗಿಯೇ ಬೆಳೆಯಬೇಕು ಎಂಬ ಆಶಯವೂ ಇಲ್ಲಿದೆ.

" ಏನು ಲಲಿತಾದ್ರಿಯಲಿ ಬೆಳಕುಗಳುಷೆಗೆ ಕಾಂತಿಯನೀವುವು!
ಮೇಲಕ್ಕೇರುವ ಬೆಳಕದಾವುದು? ಇಳಿವ ಬೆಳಕುಗಳಾವುವು?
ಆವ ದೇವಿಯರಿವರು ಮೂವರು ? ಕನ್ನಡದ ಸಿರಿಯೊಬ್ಬಳು
ಅಕ್ಕ ತಂಗಿಯರಂತೆ ತಬ್ಬುತ, ಕಡಲ ರಾಣೀಯದೊಬ್ಬಳು
ಶ್ರಿ ಭರತಮಾತೆಯದೊಬ್ಬಳು"[೫೮] (ಶ್ರೀಕೃಷ್ಣರಾಜ ರಜತೋತ್ಸವ ಪ್ರಗಾಥ)

ಈ ಕವಿತೆ 'ಮೂವರು ದೇವಿಯರ' ಕಲ್ಪನೆಯೊಂದನ್ನು ಮುಂದಿಡುತ್ತದೆ. ಆ ಮೂವರೆಂದರೆ, ಒಬ್ಬಳು ಕನ್ನಡದ ಸಿರಿ, ಇನ್ನೊಬ್ಬಳು– ಕಡಲರಾಣಿ (ಬ್ರಿಟನ್), ಮೂರನೆಯವಳು ಭರತಮಾತೆ. ಇಲ್ಲಿ ಕನ್ನಡದ ಸಿರಿ 'ಮೈಸೂರು', ಈ ಕನ್ನಡದ ಸಿರಿಗೆ ಅಕ್ಕ ತಂಗಿಯರಂತೆ ಒದಗಿ ಬಂದವರು ಒಬ್ಬಳು ಕಡಲರಾಣಿ, ಮತ್ತೊಬ್ಬಳು ಭರತಮಾತೆ. ಇಲ್ಲಿ ಈ ಮೂವರ ನಡುವೆ ಜಗಳವಿಲ್ಲ, ದ್ವೇಷವಿಲ್ಲ. ಒಬ್ಬರು ಇನ್ನೊಬ್ಬರ ಇರುವಿಕೆಗೆ ತೊಡಕಲ್ಲ ಎಂಬ ಭಾವನೆ ಇದೆ. ಈ ಮೂಲಕ ಕವಿ ವಸಾಹತುಶಾಹಿ ವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಾ, ಕನ್ನಡ ಸಿರಿಯ ಸಮೃದ್ಧಿಗೆ, ನೆಮ್ಮದಿಗೆ ಕಡಲರಾಣಿಯ ಸಖ್ಯದ ಅವಶ್ಯಕತೆಯನ್ನು ಹೇಳುತ್ತಿದ್ದಾರೆ. ಭರತಮಾತೆ ಮತ್ತು ಕಡಲ ರಾಣಿಯರ ನಡುವೆಯೂ ಸಖ್ಯವನ್ನು ಕಾಣುವುದು ಶ್ರೀಯವರ ವೈಶಿಷ್ಟ್ಯ.

ಶ್ರೀಯವರು ಪಂಪನ ಸಾವಿರ ವರ್ಷದ ಹಬ್ಬದ ಆಚರಣೆಯ ಸಂದರ್ಭದಲ್ಲಿ ಬರೆದ 'ಪಂಪನ ಒರತೆ' ಕವಿತೆ ಪಂಪನ ನೆನಪನ್ನು ಮಾಡುತ್ತಲೇ ಪಂಪನ ಪರಂಪರೆ ಹೇಗೆ ಕನ್ನಡ ನಾಡಿನಲ್ಲಿ ಬೆಳೆಯಿತು ಮತ್ತು ಕನ್ನಡವನ್ನು ಬೆಳೆಸಿತು ಎನ್ನುವುದನ್ನು ಹೇಳುತ್ತಿದೆ.

"ಗುರು ಪಂಪ, ಓ ತಂದೆ ಪಂಪಾ
ತೆಂಕ ನಾಡನ್ ಮಱೆಯಲಾಱದೆಲೆ ಜೀವಾ
ಮಱೆಯದಿರು, ಪರಸು, ಪರಸೆಮ್ಮನ್
ಪೞೆಯ ಕರ್ನಾಟಕಂ ಮತ್ತೊರ್ಮೆ ಕಟ್ಟುಗೆ !
ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ !
ಪಿರಿಯತನಮನ್ ಮಱೆತ ಕಿಱೆ ಮಕ್ಕಳನ್ ಪರಸು
ಪರಸು ನೀನೆಮ್ಮನ್"[೫೯] (ಪಂಪನ ಒರತೆ)

ಪಂಪ ಇಲ್ಲಿ ಮರೆತು ಹೋದ ಕರ್ನಾಟಕದ ನೆನಪನ್ನು ಮತ್ತೆ ಎಚ್ಚರಿಸುವ, ಮರೆಯದೆ ಮುನ್ನಡೆಯಲು ಹರಸುವ ಸಂಕೇತವಾಗುತ್ತಾನೆ. ಕರ್ನಾಟಕದ ಹೆಮ್ಮೆಗೆ ಸಂಕೇತವಾಗುತ್ತಾನೆ. 'ಪುಲಿಗೆರೆಯ ತಿರುಳ ಕನ್ನಡದ ಮುರುಳ ರಸರಸದ ಬಾವಿ ಮನೆಮನೆಗೆ ತೀವಿ' ಬಂದ ಗುರು ಪಂಪನಾಗಿ ಕಾಣುತ್ತಾನೆ. ಕನ್ನಡ ಕಾವ್ಯ ಪರಂಪರೆಯ ಮೂಲ ಶಕ್ತಿಯಾಗಿ ಕಾಣುವ ಪಂಪನನ್ನು ಕವಿ ಮತ್ತೆ ತನ್ನ ಕಾಲಕ್ಕೆ ಆವಾಹಿಸಿಕೊಳ್ಳುತ್ತಾರೆ.

ಈ ಆವಾಹನೆಯ ಹಿಂದೆ ಇರುವ ಉದ್ದೇಶ ಕವಿಗೆ ಸ್ಪಷ್ಟವಿದೆ. " ಪೞಿಯ ಕರ್ನಾಟಕಂ ಮತ್ತೊರ್ಮೆ ಕಟ್ಟುಗೆ !" ಇದು ಕವಿಯ ಉದ್ದೇಶ. ಹಳೆಯ ಕರ್ನಾಟಕವನ್ನು ಮತ್ತೊಮ್ಮೆ ಕಟ್ಟುವುದು ಎಂದರೆ ಗತದ ವೈಭವಗಳ ಮರುಸ್ಥಾಪನೆ. ಕರ್ನಾಟಕ ಮತ್ತೆ ಹೊಸ ಹುಟ್ಟು ಪಡೆದುಕೊಳ್ಳುವಂತಾಗಬೇಕು. ಕರ್ನಾಟಕದ ಹಿರಿತನವನ್ನು ಮರೆತ ಕನ್ನಡಿಗರನ್ನು ಹರಸುವ ಮೂಲಕ ಅವರಲ್ಲಿ ಕರ್ನಾಟಕದ ಬಗೆಗೆ ಹೆಮ್ಮೆ ಮೂಡುವಂತಾಗುತ್ತದೆ.

ಕನ್ನಡದ ಮೇಲಿನ ಒಲವನ್ನು ಶ್ರೀಯವರು ತಮ್ಮ ಹಲವು ಕವನಗಳು ಮತ್ತು ಭಾಷಣಗಳಲ್ಲಿ ವ್ಯಕ್ತಪಡಿಸುತ್ತಿದ್ದರೂ ಕೂಡ ಅವರ ಕನ್ನಡ ಪರ ನಿಲುವು ಹಲವು ಬಗೆಯ ಪ್ರಶ್ನೆಗಳನ್ನು ಎದುರಿಸಿದೆ. ವಸಾಹತುಶಾಹಿ ಬ್ರಿಟನ್ ಪರವಾದ ಅವರ ಪ್ರೀತಿಯು ತನ್ನ ಕಾಲದ ಸಾಮಾಜಿಕ ವಾಸ್ತವಗಳಿಗೆ, ಚಾರಿತ್ರಿಕ ಘಟನೆಗಳಿಗೆ ಕುರುಡಾಗಬೇಕಾಯಿತು. ಒಂದೆಡೆ ಮೈಸೂರು ಮಹಾರಾಜರು ಬ್ರಿಟಿಷರನ್ನು ಮೆಚ್ಚಿಸುವುದಕ್ಕಾಗಿ ಸ್ವಾತಂತ್ರ್ಯ ಹೋರಾಟಗಾರರನ್ನು ನಿರ್ದಯವಾಗಿ ಶಿಕ್ಷಿಸುತ್ತಿದ್ದರೆ, ಅವರನ್ನು ಅಕ್ರಮವಾಗಿ ಬಂಧಿಸುತ್ತಿದ್ದರೆ, ಶ್ರೀಯವರು ಮಾತ್ರ ರಾಜಶಾಹಿಯಾದ ಜಯಚಾಮರಾಜನನ್ನು ಹೊಗಳುತ್ತಾರೆ. "ಗೆಲುವು ಜಯಚಾಮರಾಜಗೆ" ಎಂದು ಹಾಡುತ್ತಾರೆ. "ರಾಷ್ಟ್ರ ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಯನ್ನು ಪ್ರತಿಪಾದಿಸುತ್ತಿದ್ದ ಕಾಂಗ್ರೆಸ್ಸಿನ ಭಾಷಾವಾರು ಪ್ರಾಂತ ರಚನೆಯ ಪರಿಕಲ್ಪನೆಗೆ ಹಿನ್ನೆಲೆಯಾಗಿ ಇದ್ದ ವ್ಯಾಪಕ ದೃಷ್ಟಿಕೋನ ಶ್ರೀಯವರ ಕನ್ನಡ ಅಭಿಮಾನ ಮತ್ತು ಕರ್ನಾಟಕದ ಏಕೀಕರಣದ ಪರಿಕಲ್ಪನೆಗೆ ಇದ್ದಂತೆ ತೋರುವುದಿಲ್ಲ. ಇಡೀ ರಾಷ್ಟ್ರದ ಸ್ವಾತಂತ್ರ್ಯ ಮತ್ತು ಪುನರ್ ನಿರ್ಮಾಣದ ಜ್ವಲಂತ ಅಭೀಪ್ಸೆಯೊಂದಿಗೆ ಅವಿನಾಸಂಬಂಧದಲ್ಲಿ ಬೆಸೆದು ಕೊಂಡಂಥ ಕನ್ನಡಾಭಿಮಾನ ಕರ್ನಾಟಕ ಏಕೀಕರಣದ ಆದರ್ಶ ಅವರದ್ದಾಗಿರಲಿಲ್ಲ. ಕನ್ನಡ ಭಾಷೆ, ಸಾಹಿತ್ಯ ಮತ್ತು

ಕರ್ನಾಟಕ ಏಕೀಕರಣ ಕುರಿತಂಥ ಅವರ ಆದರ್ಶಕ್ಕೆ ಒಂದು ಘನವಾದ ತಾತ್ವಿಕ ಹಿನ್ನೆಲೆಯ ಕೊರತೆ ಇದ್ದುದು ಕಾರಣವಾಗಿರಬಹುದು"[೬೦] ಎಂದು ಜಿ.ಎಚ್. ನಾಯಕ್ ಅವರು ಅಭಿಪ್ರಾಯ ಪಟ್ಟಿರುವುದು ಸೂಕ್ತವಾಗಿದೆ.

## ೩.೭ ಬಿ.ಎಂ.ಶ್ರೀ ಯವರ ಕವಿತೆಗಳು ಕಟ್ಟುವ ನಾಡಿನ ಒಟ್ಟು ಸ್ವರೂಪ:

ಶ್ರೀಯವರ ಕನ್ನಡ ಪ್ರಜ್ಞೆ ಯಾವ ಸ್ವರೂಪದ್ದು? ಎಂಬ ಪ್ರಶ್ನೆಯನ್ನು ಎದುರಿಗಿಟ್ಟುಕೊಂಡರೆ ಅದು ಅವರ ಕಾಲಘಟ್ಟದ ಉಳಿದ ಅನೇಕ ಬರಹಗಾರರಂತೆ ವಸಾಹತುಶಾಹಿಯ ವಿರೋಧಿ ಪ್ರಜ್ಞೆಯ ರೂಪದಲ್ಲಿ ಕಾಣುವುದಿಲ್ಲ. ಶ್ರೀಯವರು ಇಂಗ್ಲಿಷ್‌ನ ಪ್ರಭಾವದಿಂದ ಬದಿಗೆ ಸರಿಸಲ್ಪಟ್ಟ ಕನ್ನಡವನ್ನು ಮತ್ತೆ ತಲೆ ಎತ್ತಿ ನಿಲ್ಲುವಂತೆ ಮಾಡಲು ಹಲವು ಬಗೆಯಿಂದ ಕ್ರಿಯಾಶೀಲರಾಗುತ್ತಾರೆ. ಆದರೆ ಅವರ ಕನ್ನಡ ಪ್ರಜ್ಞೆ ನೇರವಾಗಿ ವಸಾಹತುಶಾಹಿಯಿಂದ ಉಂಟಾದ ತೊಂದರೆಗಳಿಗೆ ಮುಖಾಮುಖಿಯಾಗುವುದಿಲ್ಲ. ಕನ್ನಡಗರಿಗೆ ಎಂಥ ಸಾಹಿತ್ಯಬೇಕು? ಕನ್ನಡವನ್ನು ಹೊಸಕಾಲಕ್ಕೆ ತಕ್ಕಂತೆ ಹೇಗೆ ಬದಲಿಸಿಕೊಳ್ಳಬೇಕು ಎಂಬುದರ ಕುರಿತು ಶ್ರೀಯವರು ನಿರಂತರವಾಗಿ ಚಿಂತಿಸಿದವರು.

ಇಂಗ್ಲಿಷ್ ಗೀತಗಳ ಅನುವಾದದ ಮೂಲಕ ಅವರು ಕನ್ನಡದಲ್ಲಿ ಕೊರತೆಯಿರುವ ಹೊಸಬಗೆಯ ಗೀತಗಳನ್ನು ಕನ್ನಡಡಿಗರಿಗೆ ಲಭ್ಯವಾಗುವಂತೆ ಮಾಡುತ್ತಾರೆ. ಈ ಪ್ರಕ್ರಿಯೆ ಕನ್ನಡಕ್ಕೆ ಹೊಸ ಬಗೆಯ ಚಲನಶೀಲತೆಯನ್ನು ತಂದುಕೊಟ್ಟಿತು. ನೇರವಾಗಿ ವಸಾಹತು ಪ್ರಭುತ್ವದಿಂದ ಕನ್ನಡಕ್ಕಾದ ತೊಂದರೆಯನ್ನು ಪ್ರಸ್ತಾಪಿಸುವುದಿಲ್ಲ. ಅದರ ಬದಲಿಗೆ ಕನ್ನಡವು ಇಂಗ್ಲಿಷಿನ ಜೊತೆ ಒಡನಾಡುವುದರ ಮೂಲಕ ಹೊಸತನವನ್ನು ಪಡೆಯಬಹುದು ಎಂದು ತೋರಿಸಿದರು.

ಶ್ರೀಯವರು ಕಟ್ಟುವ ಕನ್ನಡ ನಾಡು ಮೈಸೂರು ಸಂಸ್ಥಾನದ ಅಡಿಯಾಳು ಆಗುತ್ತದೆ. ಅವರ ನಾಡಿಗೆ ವಸಾಹತುಶಾಹಿಯಾಗಲಿ, ಮೈಸೂರು ಪ್ರಭುತ್ವವಾಗಲಿ ಆತಂಕಕಾರಿಯಾಗಿ ಕಾಣುವುದಿಲ್ಲ. ಬದಲಾಗಿ ಇವುಗಳ ನಡುವೆ ಸಂಬಂಧವನ್ನು ಸಾಧಿಸುತ್ತಾ, ಕನ್ನಡದ ಹೆಣ್ಣು ಇಂಗ್ಲಿಷ್ ಹೆಣ್ಣಿನೊಂದಿಗೆ ಇನಿಯಳಾಗಿ. ಸಹೋದರಿಯಾಗಿ ಸಂಬಂಧ ಬೆಳೆಸುತ್ತಾರೆ.

ಕನ್ನಡ ತಾಯಿಯ ಕೊರಗನ್ನು ನಿವಾರಿಸಿ ಆ ಕನ್ನಡ ತಾಯಿ ಮತ್ತೆ ರಥವೇರುವಂತೆ ಚಿತ್ರಿಸುತ್ತಾರೆ. ಇಲ್ಲಿ ಒಂದಂಶವನ್ನು ಗಮನಿಸಬೇಕು ಯಾವ ರಥ ಕಡಲ ರಾಣಿಗೆ, ಮೈಸೂರಿನ ಒಡೆಯರಿಗಷ್ಟೇ ಸೀಮಿತವಾಗಿತ್ತೊ, ಆ ಸಾಲಿನಲ್ಲಿ ಕನ್ನಡ ಹೆಣ್ಣು ಕೂಡ ಅಂತಹ ರಥವೇರಿ ಕನ್ನಡವು ಒಂದು ಗೌರವದ ಸ್ಥಾನವನ್ನು ಪಡೆಯಲು ಸಾಧ್ಯವಾಗುವಂಥ ಒಂದು ಚಿತ್ರಣವನ್ನು ನೀಡುತ್ತಾರೆ.

ಕನ್ನಡದ ಗೌರವ, ಕನ್ನಡದ ಹಿರಿಮೆ ಹೆಚ್ಚಾಗುವಂತೆ, ಶ್ರೀಯವರು ಕನ್ನಡ ತಾಯಿಯನ್ನು ಚಿತ್ರಿಸುತ್ತಾ, ವಸಾಹತುಶಾಹಿ ಪ್ರಭುತ್ವದಿಂದಾಗಲಿ, ಮೈಸೂರು ಒಡೆಯರಿಂದಾಗಲಿ ಕನ್ನಡದ ತಾಯಿಗೆ ಧಕ್ಕೆಯಿಲ್ಲ ಎನ್ನುವಂತೆ ಕನ್ನಡವನ್ನು ಕಟ್ಟುತ್ತಾರೆ. ಅವರದ್ದು ಒಂದು ಬಗೆಯ ಸಮನ್ವಯವಾದಿ ಪ್ರಜ್ಞೆ, ಇಂಗ್ಲೆಂಡ್ – ಭಾರತ– ಮೈಸೂರು ಪ್ರಭುತ್ವಗಳ ನಡುವೆ ಕನ್ನಡ ತಾಯಿಯನ್ನು ತಂದು ಗೌರವ ಪೂರ್ವಕವಾಗಿ ಪ್ರತಿಷ್ಠಾಪಿಸುತ್ತಾರೆ.

“ಬೇರೆ ಅನೇಕ ಲೇಖಕರ ಹಾಗೆ ಬಿ.ಎಂ.ಶ್ರೀಯವರು ವಸಾಹತುಶಾಹಿಯನ್ನಾಗಲಿ, ವಸಾಹತುಶಾಹಿ ಆಡಳಿತವನ್ನಾಗಿಲಿ, ಸ್ವಾತಂತ್ರ್ಯದ ಪ್ರಶ್ನೆಯನ್ನಾಗಲಿ, ಪೂರ್ವ ಪಶ್ಚಿಮಗಳ ಮುಖಾಮುಖಿಗಳ ಪ್ರಶ್ನೆಯನ್ನಾಗಲಿ, ತುಂಬ ನೇರವಾಗಿ ಎತ್ತಿ ಸೈದ್ಧಾಂತಿಕವಾಗಿ ಚರ್ಚಿಸುವುದಿಲ್ಲ. ಬದಲಾಗಿ ಅವರು ತಮ್ಮ ಲೇಖನಗಳಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಹೆಚ್ಚು ಚಿಂತನೆ ಮಾಡುತ್ತಾರೆ. ಈ ಎಲ್ಲಾ ಚಿಂತನೆಗಳು ಕೂಡ ಒಂದಲ್ಲ ಒಂದು ರೀತಿಯಲ್ಲಿ ವಸಾಹತುಶಾಹಿ ಆಡಳಿತ ಹಾಗೂ ಅದರ ವಿದ್ಯಾಭ್ಯಾಸದ ಮೂಲಕ ನಮ್ಮ ದೇಶದಲ್ಲಿ ಅಡಿ ಇಟ್ಟಂತಹ ವಸಾಹತುಶಾಹಿ ಆಧುನಿಕತೆ ಜತೆ ಸಂಬಂಧ ಏರ್ಪಡಿಸಿಕೊಳ್ಳುತ್ತವೆ”.[೬೧] ಎನ್ನುವ ಮಾತುಗಳ ಮೂಲಕ ಶ್ರೀಯವರ ನಾಡಿನ ಕುರಿತ ಚಿಂತನೆಯನ್ನು ಶಿವರಾಮ ಪಡಿಕ್ಕಲ್ ಅವರು ಸರಿಯಾಗಿಯೇ ಗುರುತಿಸುತ್ತಾರೆ.

**ಕೊನೆ ಟಿಪ್ಪಣಿ:**

೧. ಡಾ.ನಾರಾಯಣ ಕೆ.ವಿ. ೨೦೧೦, ತೊಂಡು ಮೇವು ಕಂತೆ– ಏಳು ಪುಟ– ೪–೫

೨. ಡಾ.ಗೋವಿಂದರಾಜು ಸಿ.ಆರ್. ೧೯೯೮, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ಪುಟ –೧೪೧

೩. ಕುವೆಂಪು ೧೯೫೭, ಸಂಸ್ಕೃತಿ ಕರ್ನಾಟಕ, ಕುವೆಂಪು ಸಮಗ್ರ ಗದ್ಯ ಸಂಪುಟ–೨ (ಸಂ) ಡಾ.ಕೆ.ಸಿ. ಶಿವಾರೆಡ್ಡಿ ಪುಟ– ೧೪೬,

೪. ಕುವೆಂಪು ೧೯೬೬, ಪ್ರಾದೇಶಿಕ ವೈಶಿಷ್ಟ್ಯದ ರಕ್ಷಣೆ, ಕುವೆಂಪು ಸಮಗ್ರ ಗದ್ಯ ಸಂಪುಟ –೨, (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೩೬೩,

೫. ಕುವೆಂಪು ೧೯೫೬, ಕನಸು ನನಸಾಯಿತೆ?, ಕುವೆಂಪು ಸಮಗ್ರ ಗದ್ಯ ಸಂಪುಟ –೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೬೬೬

೬. ಕುವೆಂಪು ೧೯೩೮, ದೇಶ ದೇವಿಯ ಪೂಜೆಗೆ ಬನ್ನಿ, ಕುವೆಂಪು ಸಮಗ್ರ ಗದ್ಯ ಸಂಪುಟ –೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೬೦

೭. ಕುವೆಂಪು ೧೯೬೮, ಬಹುಜಿಹ್ವಾ ಭಾರತಿಗೆ ಐಕ್ಯತೆಯ ಆರತಿ, ಕುವೆಂಪು ಸಮಗ್ರ ಗದ್ಯ ಸಂಪುಟ –೨ (ಸಂ) ಕೆ.ಸಿ.ಶಿವಾರೆಡ್ಡಿ, ಪುಟ– ೩೭೭

೮. ಕುವೆಂಪು ೧೯೩೫, ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ, ಕುವೆಂಪು ಸಮಗ್ರ ಕಾವ್ಯ ಸಂಪುಟ –೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೩೮೫

೯. ಕುವೆಂಪು ೧೯೪೧, ಮೆಟ್ಟುವ ನೆಲ ಕರ್ನಾಟಕ ಕುವೆಂಪು ಸಮಗ್ರ ಕಾವ್ಯ ಸಂಪುಟ –೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ಪುಟ –೩೮೭

೧೦. ಕುವೆಂಪು , ಕರ್ನಾಟಕ ಇಟ್ಟ ಹೆಸರು ಕೊಟ್ಟ ಮಂತ್ರ, ಕುವೆಂಪು ಸಮಗ್ರ ಗದ್ಯ ಸಂಪುಟ –೨, (ಸಂ) ಡಾ.ಕೆ.ಸಿ.ಶಿವಾರೆಡ್ಡಿ, ಪುಟ –೫೦೭

೧೧. ಕುವೆಂಪು ೧೯೩೬ ಕನ್ನಡಮ್ಮನ ಹರಕೆ, ಕುವೆಂಪು ಸಮಗ್ರ ಕಾವ್ಯ ಸಂಪುಟ –೧ (ಸಂ) ಡಾ.ಕೆ.ಸಿ. ಶಿವಾರೆಡ್ಡಿ, ಪುಟ –೩೯೨

೧೨. ಕುವೆಂಪು ೧೯೪೯, ಅಖಂಡ ಕರ್ನಾಟಕ, ಕುವೆಂಪು ಸಮಗ್ರ ಕಾವ್ಯ ಸಂಪುಟ –೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೧೨೪

೧೩. ಅದೇ, ಪುಟ – ೧೨೬

೧೪. ಕುವೆಂಪು ೧೯೫೬, ಕರ್ನಾಟಕ ರಾಜ್ಯೋದಯ ಶ್ರೀಗೀತೆ, ಕುವೆಂಪು ಸಮಗ್ರ ಕಾವ್ಯ ಸಂಪುಟ –೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ, ಪುಟ– ೧೪೭

೧೫. ಕುವೆಂಪು ೧೯೪೧, ಐಕ್ಯೈಕ ಕರ್ನಾಟಕ, ಕುವೆಂಪು ಸಮಗ್ರ ಕಾವ್ಯ ಸಂಪುಟ –೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ – ೧೪೯

೧೬. ಕುವೆಂಪು, ಕರ್ನಾಟಕ ಇಟ್ಟ ಹೆಸರು, ಕೊಟ್ಟ ಮಂತ್ರ , ಕುವೆಂಪು ಸಮಗ್ರ ಗದ್ಯ ಸಂಪುಟ ೨, (ಸಂ) ಡಾ.ಕೆ.ಸಿ. ಶಿವಾರೆಡ್ಡಿ, ಪುಟ – ೫೦೭

೧೭. ಕುವೆಂಪು, ೧೯೫೭, ಸಂಸ್ಕೃತಿ ಕರ್ನಾಟಕ, ಕುವೆಂಪು ಸಮಗ್ರ ಗದ್ಯ ಸಂಪುಟ –೨ (ಸಂ) ಡಾ.ಕೆ.ಸಿ. ಶಿವಾರೆಡ್ಡಿ ಪುಟ – ೧೪೫

೧೮. ಕುವೆಂಪು ೧೯೨೯, ಹಂಪೆಯಲ್ಲಿ, ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ – ೩೯೧

೧೯. ಡಾ.ತಾರಕೇಶ್ವರ ವಿ.ಬಿ. ೨೦೦೫, ಕುವೆಂಪು ಒಂದು ಪುನರನ್ವೇಷಣೆ (ಸಂ) ಡಿ.ಎಸ್. ನಾಗಭೂಷಣ – ಪುಟ ೨೨೩,

೨೦. ಕುವೆಂಪು, ೧೯೨೮, ಜಯಹೇ ಕರ್ನಾಟಕ ಮಾತೆ, ಕುವೆಂಪು ಸಮಗ್ರ ಕಾವ್ಯ ಸಂಪುಟ –೧, (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೧೦೬

೨೧. ಡಾ.ನಾರಾಯಣ ಕೆ.ವಿ.೨೦೧೦, ತೊಂಡು ಮೇವು – ಕಂತೆ ಏಳು, ಪುಟ –೦೫

೨೨. ಕುವೆಂಪು ೧೯೬೬ ತ್ರಿಕಾಲ ಸಾಹಿತ್ಯ ಸಕಾಲ ಸಾಹಿತ್ಯ, ಕುವೆಂಪು ಸಮಗ್ರ ಗದ್ಯ ಸಂ:೨, (ಸಂ) ಡಾ. ಕೆ.ಸಿ.ಶಿವಾರೆಡ್ಡಿ ಪುಟ – ೩೭೩

೨೩. ಡಾ.ನಾರಾಯಣ ಕೆ.ವಿ. ೨೦೧೦, ತೊಂಡು ಮೇವು ಕಂತೆ ಏಳು, ಪುಟ ೨೪೧

೨೪. ಕುವೆಂಪು ೧೯೪೦, ಶಿಲಾಭೇರಿ, ಕುವೆಂಪು ಸಮಗ್ರ ಕಾವ್ಯ ಸಂಪುಟ – ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ – ೩೮೯

೨೫. ಕುವೆಂಪು ೧೯೬೨ ಭಾವೈಕ್ಯತೆ, ಕುವೆಂಪು ಸಮಗ್ರ ಕಾವ್ಯ ಸಂಪುಟ – ೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ– ೪೩೨

೨೬. ಸುಮಾ ಬಿ.ಯು ೨೦೦೭, ಇಂಗ್ಲಿಷ್ ಗೀತಗಳು ಹಾಗೂ ಕನ್ನಡ ಕಾವ್ಯ ಪರಂಪರೆ, ಇಂಗ್ಲಿಷ್ ಗೀತಗಳು: ಸಾಂಸ್ಕೃತಿಕ ಮುಖಾಮುಖಿ ( ಸಂ)ಡಾ. ರಹಮತ್ ತರೀಕೆರೆ, ಪುಟ– ೯೨

೨೭. ಬೇಂದ್ರೆ ದ.ರಾ. ೧೯೭೪, ಸಾಹಿತ್ಯದ ವಿರಾಟ್ ಸ್ವರೂಪ, ಪುಟ –೦೮

೨೮. ಅದೇ – ಪುಟ ೦೯

೨೯. ಅದೇ – ಪುಟ ೬೪

೩೦. ಬೇಂದ್ರೆ ದ.ರಾ. ೧೯೩೮ ಒಡನುಡಿ, ಔದುಂಬರ ಗಾಥೆ – ಸಂಪುಟ– ೨, (ಸಂ) ವಾಮನ ಬೇಂದ್ರೆ, ಪುಟ – ೩೯೫

೩೧. ಬೇಂದ್ರೆ ದ.ರಾ ೧೯೫೭ ದಿವ್ಯಧ್ವನಿ, ಔದುಂಬರ ಗಾಥೆ, ಸಂಪುಟ –೨, (ಸಂ) ವಾಮನಬೇಂದ್ರೆ, ಪುಟ ೩೯೬

೩೨. ಬೇಂದ್ರೆ ದ.ರಾ. ೧೯೫೬ ಪಾರ್ವತಿ ನೀನೇ ಸಲಹು, ಔದುಂಬರ ಗಾಥೆ, ಸಂ: ೨ (ಸಂ) ವಾಮನ ಬೇಂದ್ರೆ, ಪುಟ – ೪೦೨

೩೩. ಬೇಂದ್ರೆ ದ.ರಾ ೧೯೫೧ ಒಂದೇ ಕರ್ನಾಟಕ, ಔದುಂಬರ ಗಾಥೆ– ಸಂಪುಟ – ೨, (ಸಂ) ವಾಮನ ಬೇಂದ್ರೆ, ಪುಟ – ೪೫೬

೩೪. ಬೇಂದ್ರೆ ದ.ರಾ ೧೯೫೭ ಕೇಳಿ ನುಡಿ – ಕಂಡು ನಡೆ, ಔದುಂಬರ ಗಾಥೆ – ಸಂಪುಟ –೨, (ಸಂ) ವಾಮನ ಬೇಂದ್ರೆ, ಪುಟ – ೪೫೬

೩೫. ಬೇಂದ್ರೆ ದ.ರಾ ೧೯೫೭ ಕನ್ನಡದ ಪಾವನ ಪರಂಪರೆ, ಔದುಂಬರ ಗಾಥೆ, ಸಂಪುಟ – ೨, (ಸಂ) ವಾಮನ ಬೇಂದ್ರೆ, ಪುಟ– ೩೯೧

೩೬. ಬೇಂದ್ರೆ ದ.ರಾ ೧೯೩೨ ಹಂಪಿ– ವಿಜಯನಗರ ದರ್ಶನ, ಔದುಂಬರ ಗಾಥೆ, ಸಂಪುಟ– ೨, (ಸಂ) ವಾಮನ ಬೇಂದ್ರೆ, ಪುಟ– ೪೦೫

೩೭. ಬೇಂದ್ರೆ ದ.ರಾ.೧೯೧೮ ತುತ್ತೂರಿ – ಎಚ್ಚರ, ನಾಡಿದಿನ ಕನ್ನಡ ನಾಡು. (ಸಂ.) ವಾಮನ ಬೇಂದ್ರೆ, ಪುಟ– ೦೩

೩೮. ಬೇಂದ್ರೆ ದ.ರಾ ೧೯೨೫ ಏಳು ಶೂರರ ರಾಣಿ, ನಾಡಿದಿನಾ ಕನ್ನಡ ನಾಡು (ಸಂ) ವಾಮನ ಬೇಂದ್ರೆ, ಪುಟ–೦೯

೩೯. ಡಾ.ಗೋವಿಂದರಾಜು ಸಿ.ಆರ್. ೨೦೦೫ ಕನ್ನಡಮ್ಮ, ಪುಟ–೩೫

೪೦. ಬೇಂದ್ರೆ ದ.ರಾ ೧೯೨೫, ಕನಸಿನೊಳಗೊಂದು ಕಣಸು, ನಾಡಿದಿನಾ ಕನ್ನಡ ನಾಡು, (ಸಂ) ವಾಮನ ಬೇಂದ್ರೆ, ಪುಟ– ೧೨

೪೧. ಡಾ.ಶಿವಾರೆಡ್ಡಿ ಕೆ.ಸಿ, ೨೦೦೩, ಕನ್ನಡದ ಹಾಡು ಪಾಡು, ಪುಟ– ೭೪

೪೨. ಡಾ.ಗೋವಿಂದರಾಜು ಸಿ.ಆರ್. ೨೦೦೫, ಕನ್ನಡಮ್ಮ ಪುಟ – ೩೬

೪೩. ಬೇಂದ್ರೆ ದ.ರಾ ೧೯೨೬, ಸೀಮೋಲ್ಲಂಘನ, ನಾಡಿದಿನಾ ಕನ್ನಡ ನಾಡು ಪುಟ – ೧೩

೪೪. ಶ್ರೀಕಂಠಯ್ಯ ಬಿ.ಎಂ. ೧೯೧೧ ಕನ್ನಡ ಮಾತು ತಲೆ ಎತ್ತುವ ಬಗೆ, ಶ್ರೀ ಸಾಹಿತ್ಯ, ಪುಟ ೨೪೫

೪೫. ಅದೇ ಪುಟ– ೨೫೫

೪೬. ಶ್ರೀಕಂಠಯ್ಯ ಬಿ.ಎಂ. ೧೯೪೮ ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಶ್ರೀ ಸಾಹಿತ್ಯ, ಪುಟ – ೨೫೭

೪೭. ಅದೇ ಪುಟ– ೨೮೭

೪೮. ಅದೇ ಪುಟ– ೨೯೫

೪೯. ಅದೇ ಪುಟ– ೩೩೦

೫೦. ಶ್ರೀಕಂಠಯ್ಯ ಬಿ.ಎಂ. ೧೯೩೮ ಕನ್ನಡದ ಬಾವುಟ, ಶ್ರೀ ಸಾಹಿತ್ಯ, ಪುಟ – ೮೬೭

೫೧. ಶ್ರೀಕಂಠಯ್ಯ ಬಿ.ಎಂ. ೧೯೨೧, ಕಾಣಿಕೆ, ಶ್ರೀ ಸಾಹಿತ್ಯ ಪುಟ – ೫೯

೫೨. ಅದೇ – ಪುಟ– ೫೯

೫೩. ಶ್ರೀಕಂಠಯ್ಯ ಬಿ.ಎಂ. ೧೯೩೬ ಕನ್ನಡ ತಾಯನೋಟ, ಶ್ರೀ ಸಾಹಿತ್ಯ, ಪುಟ– ೧೩೪

೫೪. ಶ್ರೀಕಂಠಯ್ಯ ಬಿ.ಎಂ. ೧೯೩೮, ಕನ್ನಡದ ಬಾವುಟ, ಶ್ರೀ ಸಾಹಿತ್ಯ, ಪುಟ– ೧೩೮

೫೫. ನಾಯಕ ಜಿ.ಎಚ್. ೧೯೮೮, ನಿಜದನಿ, ಪುಟ – ೧೬೩

೫೬. ಶ್ರೀಕಂಠಯ್ಯ ಬಿ.ಎಂ. ೧೯೪೦ ಶ್ರೀ ಜಯನ ಬೆಳಕು, ಶ್ರೀ ಸಾಹಿತ್ಯ, ಪುಟ ೧೪೪

೫೭. ಶ್ರೀಕಂಠಯ್ಯ ಬಿ.ಎಂ. ೧೯೨೦ ಮೈಸೂರು ಮಕ್ಕಳು, ಶ್ರೀ ಸಾಹಿತ್ಯ, ಪುಟ –೧೨೮

೫೮. ಶ್ರೀಕಂಠಯ್ಯ ಬಿ.ಎಂ. ೧೯೨೭ ಶ್ರೀ ಕೃಷ್ಣರಾಜ ರಜತೋತ್ಸವ ಪ್ರಗಾಥ, ಶ್ರೀಸಾಹಿತ್ಯ, ಪುಟ –೧೨೯

೫೯. ಶ್ರೀಕಂಠಯ್ಯ ಬಿ.ಎಂ. ೧೯೪೧ ಪಂಪನ ಒರತೆ, ಶ್ರೀ ಸಾಹಿತ್ಯ, ಪುಟ – ೧೪೮

೬೦. ನಾಯಕ್ ಜಿ.ಹೆಚ್. ೧೯೮೮, ನಿಜದನಿ, ಪುಟ– ೧೬೦

೬೧. ಡಾ.ಶಿವರಾಮ ಪಡಿಕ್ಕಲ್, ೨೦೦೭, ವಸಾಹತುಶಾಹಿ ಆಧುನಿಕತೆ ಮತ್ತು ಇಂಗ್ಲಿಷ್ ಗೀತಗಳು, ಇಂಗ್ಲಿಷ್ ಗೀತಗಳು; ಸಾಂಸ್ಕೃತಿಕ ಮುಖಾಮುಖಿ (ಸಂ) ಡಾ.ರಹಮತ್ ತರೀಕೆರೆ ಪುಟ– ೩೨

## ೪. ಕನ್ನಡ ಕವಿತೆಗಳಲ್ಲಿನ ರಾಷ್ಟ್ರ ಪರಿಕಲ್ಪನೆ : ಗ್ರಹಿಕೆ ಮತ್ತು ಅಭಿವ್ಯಕ್ತಿ

೪.೧. ಪ್ರಸ್ತಾವನೆ

೪.೨. ಕುವೆಂಪು ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ

೪.೨.೧. ಕುವೆಂಪು ಕವಿತೆಗಳ ರಾಷ್ಟ್ರೀಯತೆಯ ಒಟ್ಟು ಸ್ವರೂಪ

೪.೩. ಬೇಂದ್ರೆ ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ

೪.೩.೧. ಬೇಂದ್ರೆ ಕವಿತೆಗಳ ರಾಷ್ಟ್ರೀಯತೆಯ ಒಟ್ಟು ಸ್ವರೂಪ

೪.೪. ಬಿ.ಎಂ.ಶ್ರೀ. ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ

೪.೪.೧. ಶ್ರೀಯವರ ಕವಿತೆಗಳ ರಾಷ್ಟ್ರೀಯತೆಯ ಒಟ್ಟು ಸ್ವರೂಪ

# ಅಧ್ಯಾಯ–೪

## ಕನ್ನಡ ಕವಿತೆಗಳಲ್ಲಿನ ರಾಷ್ಟ್ರ ಪರಿಕಲ್ಪನೆ: ಗ್ರಹಿಕೆ ಮತ್ತು ಅಭಿವ್ಯಕ್ತಿ

### ೪.೧ ಪ್ರಸ್ತಾವನೆ:

ವಸಾಹತುಶಾಹಿ ಸನ್ನಿವೇಶದಲ್ಲಿ ಭಾರತದಾದ್ಯಂತ 'ರಾಷ್ಟ್ರೀಯತೆ'ಯ ಕುರಿತು ಎಚ್ಚರ ನಿರ್ಮಾಣವಾಗುತ್ತಿತ್ತು. ಈ ಎಚ್ಚರ ಹಲವು ಸ್ವರೂಪಗಳಲ್ಲಿ ಅಭಿವ್ಯಕ್ತವಾಗುತ್ತಿತ್ತು. ಒಂದೆಡೆ ತನ್ನ ನೆಲದ ಹಿರಿಮೆ, ಸಂಸ್ಕೃತಿಯ ಶ್ರೇಷ್ಠತೆಯನ್ನು ವೈಭವೀಕರಿಸಿ ಹೇಳುವ ಸಾಹಿತ್ಯದ ರೂಪದಲ್ಲಾದರೆ, ಇನ್ನೊಂದೆಡೆ ರಾಷ್ಟ್ರವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವ ವಸಾಹತುಶಾಹಿ ಯಜಮಾನಿಕೆಯ ವಿರುದ್ಧದ ಹೋರಾಟದ ರೂಪದಲ್ಲಿ ಅಭಿವ್ಯಕ್ತವಾಗುತ್ತಿತ್ತು. ದೇಶಾದ್ಯಂತ ಹಲವು ಭಾಷೆಗಳಲ್ಲಿ ಇಂತಹ ಸಾಹಿತ್ಯಿಕ ಅಭಿವ್ಯಕ್ತಿ ಪ್ರಕಟವಾಗಿತ್ತು. ವಸಾಹತುಶಾಹಿಯ ವಿರುದ್ಧದ ಪ್ರತ್ಯಕ್ಷ ಹೋರಾಟ ದೇಶಾದ್ಯಂತ ನಡೆಯುತ್ತಿದ್ದಂತೆ, ಜೊತೆ ಜೊತೆಗೆ ಎಂಬಂತೆ ದೇಶದ ಹಲವು ಭಾಷೆಗಳಲ್ಲಿ ರಾಷ್ಟ್ರೀಯತೆಯ, ಆ ಮೂಲಕ 'ಸ್ವ'ದ ಹುಡುಕಾಟವು ಆರಂಭವಾಗಿತ್ತು. ಈ 'ಸ್ವ'ದ ಹುಡುಕಾಟವು ಪ್ರತಿ ಸಮುದಾಯಗಳೂ ತಮ್ಮನ್ನು ಒಂದು ಶ್ರೇಷ್ಠ ಮೂಲದ ಜೊತೆ ಗುರುತಿಸಿಕೊಂಡು ಅದರ ಜೊತೆಗೆ ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಳ್ಳುತ್ತಿದ್ದವು. ಹೀಗೆ ಗುರುತಿಸಿಕೊಂಡ ಸಮುದಾಯಗಳು ತಮ್ಮ ಮೂಲವೇ ತಮ್ಮ 'ರಾಷ್ಟ್ರೀಯ ಗುರುತು' ಎಂಬ ತಿಳುವಳಿಕೆಯನ್ನು ಹೊಂದುತ್ತಿದ್ದವು.

ರಾಷ್ಟ್ರದ ಅನನ್ಯತೆಯನ್ನು ಗುರುತಿಸುತ್ತಾ ಜನರಲ್ಲಿ ಐಕ್ಯತೆಯ ಮನೋಭಾವವನ್ನು ನಿರ್ಮಾಣ ಮಾಡುವಲ್ಲಿ ಹಾಗೂ ಆ ಮೂಲಕ ರಾಷ್ಟ್ರದ ಮೇಲೆ ಹಿಡಿತ ಸಾಧಿಸಿರುವ ಪರಕೀಯರ ವಿರುದ್ಧ ಜನರು ಏಕಮನಸ್ಸಿನಿಂದ ಹೋರಾಡುವುದಕ್ಕೆ ಬೇಕಾದ ಸ್ಫೂರ್ತಿಯನ್ನು ತುಂಬುವಲ್ಲಿ ಸಾಹಿತ್ಯ ಮಹತ್ವದ ಪಾತ್ರವನ್ನು ವಹಿಸಿತ್ತು. ಹೊಸಗನ್ನಡ ಕವಿತೆಯೂ ಕೂಡ ಆ ಒಂದು ಚಾರಿತ್ರಿಕ ಸಂದರ್ಭಕ್ಕೆ ತಕ್ಕಂತೆ ಅಭಿವ್ಯಕ್ತಗೊಳ್ಳುತ್ತಾ ಬಂದಿತ್ತು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಹೋರಾಟಗಳು ಒಂದು ಬಗೆಯ

ಐತಿಹಾಸಿಕ ವಿದ್ಯಮಾನವಾಗಿದ್ದವು. ಈ ಐತಿಹಾಸಿಕ ವಿದ್ಯಮಾನಗಳನ್ನು ಕನ್ನಡ ಕವಿತೆಗಳು ತಮ್ಮೊಳಗೆ ಅತ್ಯುತ್ತಮವಾಗಿಯೇ ನಿರ್ವಹಿಸಿವೆ.

ವಿಮರ್ಶಕ ಕೀರ್ತಿನಾಥ ಕುರ್ತಕೋಟಿಯವರು ಹೇಳುವಂತೆ "ನವೋದಯ ಕಾವ್ಯದಲ್ಲಿ ರಾಷ್ಟ್ರೀಯ ಪ್ರಜ್ಞೆ ಮುಖ್ಯವಾಗಿ ಬಂಧನ ಮತ್ತು ಸ್ವಾತಂತ್ರ್ಯ ಈ ಎರಡು ಸ್ಥಿತಿಗಳ ವೈಚಾರಿಕತೆಯನ್ನು ಆಶ್ರಯಿಸಿ ನಿಂತದ್ದಾಗಿದೆ. ಐತಿಹಾಸಿಕವಾಗಿ ಭಾರತದ ದಾಸ್ಯ ಮತ್ತು ಬಂಧನಗಳು ನಮ್ಮ ನಾಡಿನ ಸೋಲಿನ ಪರಿಣಾಮವಾಗಿದ್ದರಿಂದ ಸ್ವಾತಂತ್ರ್ಯವನ್ನು ಪಡೆಯುವುದು ನಮ್ಮ ಜನ್ಮ ಸಿದ್ಧವಾದ ಹಕ್ಕನ್ನು ಪಡೆಯುವುದಾಗಿತ್ತು. ನವೋದಯ ಕವಿಗಳು ಬಂಧನ ಮತ್ತು ಸ್ವಾತಂತ್ರ್ಯ ಇವುಗಳ ತಾತ್ವಿಕ ಮೌಲ್ಯಗಳನ್ನು ಮಾತ್ರ ಬಳಸಿಕೊಂಡರು."[೧] ಈ ಮಾತು ನವೋದಯ ಕಾವ್ಯದ ಕಾವ್ಯ ಧರ್ಮವೇ ಆಗಿದ್ದ ರಾಷ್ಟ್ರೀಯತೆಯ ಕುರಿತ ಪ್ರಭಾವವನ್ನು ಹೇಳುತ್ತದೆ.

ವಸಾಹತುಶಾಹಿ ವ್ಯವಸ್ಥೆಯು ಭಾರತವನ್ನು ಕೈವಶ ಮಾಡಿಕೊಂಡಿತ್ತು, ಅದು ಇಲ್ಲಿನ ಭೌತಿಕ ಹಾಗೂ ಬೌದ್ಧಿಕ ಸಂಪತ್ತನ್ನು ದೋಚುತ್ತಿದ್ದಾಗ ಬ್ರಿಟೀಷರ ವಿರುದ್ಧ ಹೋರಾಡಲು ಬೇಕಾದ ಸಂಕಲ್ಪಶಕ್ತಿಯನ್ನು ಕನ್ನಡದ ಕವಿತೆಗಳು ನಿರ್ಮಿಸಿದವು. ಕಳೆದು ಹೋಗಿದ್ದ ಭಾರತೀಯ ಚೈತನ್ಯವನ್ನು ಮರು ಸಂಪಾದಿಸಲು, ಸಂಪಾದಿಸಿ ಕ್ರಿಯಾಶೀಲಗೊಳಿಸಿ ಹೋರಾಟಕ್ಕೆ ಬೇಕಾದಂತೆ ರೂಪುಗೊಳಿಸುವಲ್ಲಿ ಕನ್ನಡದ ಈ ಕವಿಗಳ ಪ್ರಯತ್ನ ಗಂಭೀರವಾದುದು ಮತ್ತು ಗಮನಾರ್ಹವಾದುದು. ಕನ್ನಡದ ಪ್ರಮುಖ ಕವಿಗಳು ತಮ್ಮ ಕವಿತೆಗಳ ಮೂಲಕ ಈ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಕನ್ನಡದ ಕವಿಗಳಿಗೆ ರಾಷ್ಟ್ರೀಯತೆ ಕೇವಲ ಒಂದು ರಾಜಕೀಯ ಸ್ವಾತಂತ್ರ್ಯ ಸಂಪಾದನೆಯ ಪ್ರಕ್ರಿಯೆಯಾಗಿ ಕಂಡಿಲ್ಲ ರಾಷ್ಟ್ರೀಯತೆಯನ್ನು ಅದರ ಸಾಂಸ್ಕೃತಿಕ ಆಯಾಮಗಳೊಂದಿಗೆ ಗ್ರಹಿಸಿಕೊಂಡಿದ್ದರು ಮತ್ತು ತಮ್ಮ ಬರವಣಿಗೆಗಳಲ್ಲೂ ಅದೇ ರೀತಿಯ ಅಭಿವ್ಯಕ್ತಿಯನ್ನು ಮಾಡಿದ್ದಾರೆ. "ಭಾರತೀಯರಿಗೆ ಮತ್ತು ಕನ್ನಡಿಗರಿಗೆ ಲುಪ್ತವಾಗಿದ್ದ ಆತ್ಮಗೌರವವನ್ನು ಮರಳಿ ಸಂಪಾದಿಸಿಕೊಡುವ ಸಲುವಾಗಿ, ದೇಶಭಕ್ತಿ, ಭಾಷಾಪ್ರೇಮಗಳಂತಹ ಭಾವ ನಿರ್ಭರವಾದ ಸಂಗತಿಗಳನ್ನು ಆರಿಸಿಕೊಳ್ಳುವುದು ಅಂದಿನ ಕವಿಗಳಿಗೆ ಅನಿವಾರ್ಯವಾಗಿತ್ತು. ದೇಶದ ರಾಜಕೀಯ ಏಕತೆಯು ಸಾಧ್ಯವಾಗದೆ ಹೋಗಿದ್ದಾಗ, ಸಾಂಸ್ಕೃತಿಕ ಏಕತೆಯು ಹಿಂದೂ ಧರ್ಮದ ಸರ್ವಸಮಾನ ಅಂಶಗಳಿಂದಲೇ ರೂಪಿತವಾಗುತ್ತಿದ್ದಾಗ, ರಾಜಭಕ್ತಿಯ ಸ್ಥಳದಲ್ಲಿ ದೇಶಭಕ್ತಿಯನ್ನು

ಪ್ರತಿಷ್ಠಾಪಿಸುವುದೂ ಕೂಡ ಹೊಸ ಸಾಧನೆಯಾಗಿತ್ತು. .......... ರಾಷ್ಟ್ರಭಕ್ತಿಯನ್ನು ಪ್ರತಿಪಾದಿಸುವುದು ನಮ್ಮನ್ನು ಆಳುತ್ತಿದ್ದ ಸಾಮ್ರಾಜ್ಯಶಾಹಿಯ ವಿರುದ್ಧ ನಡೆಸುವ ರಾಜದ್ರೋಹವೆನಿಸದಂತೆ ನೋಡಿಕೊಳ್ಳುವ ಎಚ್ಚರಿಕೆಯನ್ನೂ ಕೂಡ ಈ ಲೇಖಕರು ವಹಿಸಬೇಕಾಗಿತ್ತು. ಆದ್ದರಿಂದಲೇ ಸಮಕಾಲೀನ ಅಭೀಪ್ಸೆಗಳನ್ನು ಐತಿಹಾಸಿಕ, ಪೌರಾಣಿಕ ವಸ್ತುಗಳಲ್ಲಿ ಆರೋಪಿಸಿರುವ ಪ್ರಯತ್ನಗಳು ಭಾರತದ ಇತರ ಭಾಷೆಗಳಲ್ಲಿ ನಡೆದಂತೆ ಕನ್ನಡದಲ್ಲಿಯೂ ನಡೆದವು ”[೨] ಎನ್ನುವ ಡಾ.ಎಚ್.ಎಸ್.ರಾಘವೇಂದ್ರ ರಾವ್ ಅವರ ಮಾತು ಕನ್ನಡದಲ್ಲಿ ಪ್ರಕಟವಾದ ರಾಷ್ಟ್ರೀಯತೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಕಾರಿಯಾಗಿದೆ.

“ರಾಷ್ಟ್ರ ಅಥವಾ ರಾಷ್ಟ್ರೀಯತೆ ಎನ್ನುವುದು ನಮ್ಮೊಂದಿಗೆ ಇರುವ, ನಮ್ಮ ಬದುಕಿನಲ್ಲಿ ಇಂದು ಹಾಸು ಹೊಕ್ಕಂತಿರುವ ನಮ್ಮ ಅಸಂಖ್ಯ ಗುರುತುಗಳಲ್ಲಿ ಒಂದು. ಅದು ಮೂಲತಃ ಒಂದು ಸಮುದಾಯದ ಕಲ್ಪನೆ. ‘ಇದು ಭಾರತ’ ‘ನಾವೆಲ್ಲ ಭಾರತೀಯರು’ ಎನ್ನುವ ಮಾತುಗಳ ಹಿಂದೆ ಒಂದು ಅಮೂರ್ತವಾದ ಅದರೆ ಚಾರಿತ್ರಿಕವಾಗಿ ರೂಪುಗೊಂಡ ಸಮುದಾಯದ ಕಲ್ಪನೆ ಇದೆ”[೩] ಎಂಬ ಡಾ. ರಾಜಾರಾಮ ತೋಳ್ಪಾಡಿಯವರ ಮಾತುಗಳ ಹಿನ್ನೆಲೆಯಲ್ಲಿ ಕನ್ನಡ ಕವಿಗಳು ಗ್ರಹಿಸಿಕೊಂಡ ರಾಷ್ಟ್ರೀಯತೆಯ ಸ್ವರೂಪವನ್ನು ವಿಶ್ಲೇಷಿಸಬಹುದು. ರಾಷ್ಟ್ರೀಯತೆಯನ್ನು ಚಾರಿತ್ರಿಕವಾಗಿ ರೂಪುಗೊಂಡ ಸಮುದಾಯದ ಕಲ್ಪನೆಯಾಗಿ ಗ್ರಹಿಸಿಕೊಂಡಾಗ, ಕುವೆಂಪು, ದ.ರಾ.ಬೇಂದ್ರೆ, ಬಿ.ಎಂ.ಶ್ರೀ.ಯವರುಗಳು ಕಟ್ಟಿದ ರಾಷ್ಟ್ರೀಯತೆಯ ಸ್ವರೂಪವೂ ಅರ್ಥವಾಗುತ್ತದೆ. ಒಂದು ನಿಶ್ಚಿತ ಗಡಿರೇಖೆಗಳಿರುವ ಭೌಗೋಳಿಕ ಸ್ವರೂಪವನ್ನು ಜಗತ್ತಿನ ಭೂಪಟದಿಂದ ಪ್ರತ್ಯೇಕಿಸಿಕೊಂಡು ನೋಡುವ ಬಗೆಯ ಸ್ವರೂಪದ ರಾಷ್ಟ್ರೀಯತೆಯು ಇದಲ್ಲ. ವಿಶ್ವಭೂಪಟದ ಒಂದು ಭಾಗವಾಗುತ್ತಲೇ ಈ ಪ್ರಕ್ರಿಯೆ ತನ್ನ ‘ಸ್ವ’ ವಿಶಿಷ್ಟತೆಯನ್ನು ಗುರುತಿಸಿಕೊಳ್ಳುವ, ಅದಕ್ಕಿರುವ ರಾಜಕೀಯ ಅಡ್ಡಿಯನ್ನು ನಿವಾರಿಸುತ್ತಾ ಒಂದು ಐತಿಹಾಸಿಕ, ಸಾಂಸ್ಕೃತಿಕ ಘಟಕವಾಗಿ ಗುರುತಿಸಿಕೊಳ್ಳುತ್ತದೆ. ಈ ಅಧ್ಯಯನದಲ್ಲಿ ಕುವೆಂಪು, ದ.ರಾ.ಬೇಂದ್ರೆ, ಮತ್ತು ಬಿ.ಎಂ.ಶ್ರೀಯವರುಗಳು ತಮ್ಮ ಕವಿತೆಗಳಲ್ಲಿ ‘ರಾಷ್ಟ್ರ’ವನ್ನು ಹೇಗೆ ಗ್ರಹಿಸಿದ್ದಾರೆ ಮತ್ತು ಅಭಿವ್ಯಕ್ತಗೊಳಿಸಿದ್ದಾರೆ ಎಂಬುದನ್ನು ವಿವೇಚಿಸಲಾಗುವುದು.

## ೪.೨ ಕುವೆಂಪು ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ:

ಕುವೆಂಪು ಅವರ ಕವಿತೆಗಳಲ್ಲಿ 'ರಾಷ್ಟ್ರ' ಅಥವಾ 'ರಾಷ್ಟ್ರೀಯತೆ' ಪಡೆದಿರುವ ಸ್ವರೂಪವನ್ನು ವಿವೇಚಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶ. ಕುವೆಂಪು ಕನ್ನಡದ ಬಹುಮುಖ್ಯ ಸೃಜನಶೀಲ ಬರಹಗಾರರಾದುದರಿಂದ ಮತ್ತು ಹೊಸಗನ್ನಡ ಸಾಹಿತ್ಯದ ಮೇಲೆ ತನ್ನದೇ ಆದ ಪ್ರಭಾವವನ್ನು ವ್ಯಾಪಕವಾಗಿ ಬೀರಿರುವ ಬಹುಮುಖ್ಯ ಬರಹಗಾರರಾಗಿರುವುದರಿಂದ ಕುವೆಂಪು ಅವರು ರಾಷ್ಟ್ರೀಯತೆಯನ್ನು ಗ್ರಹಿಸಿದ ವಿಧಾನ ಹಾಗೂ ಸ್ವರೂಪವನ್ನು ಕುರಿತು ಅಧ್ಯಯನ ಮಾಡುವುದು ಕನ್ನಡ ಸಾಹಿತ್ಯವು ರಾಷ್ಟ್ರೀಯತೆಯ ವಿಚಾರದಲ್ಲಿ ಪ್ರಕಟಿಸಿದ ಬಹುಮುಖ್ಯ ನಿಲುವಿನ ವಿಶ್ಲೇಷಣೆಯೂ ಆಗುತ್ತದೆ. "ನಮ್ಮ ಹೊಸ ಸಾಹಿತ್ಯಕ್ಕೆ ಪ್ರಕೃತವಾದುದು ಭರತ ಖಂಡದ ರಾಜಕೀಯ ಪರಿಸ್ಥಿತಿ. ಇಲ್ಲಿ ಬಹುಮುಖ್ಯವಾದುದೆಂದರೆ ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿರುವ ತಪಸ್ಸು ........ ಆದರೆ ಅವುಗಳೆಲ್ಲಕ್ಕೂ ಮೂಲವಾದ ಪ್ರಚೋದನೆ ರಾಜಕೀಯಾಸಕ್ತಿಯಿಂದ ಬಂದಿದೆ. ಎಂದರೆ ನಾವೆಲ್ಲರೂ ಭೇದಭಾವವನ್ನಳಿದು ಒಗ್ಗಟ್ಟಾಗಬೇಕು. ಎಲ್ಲರೂ ಕೆಲಸ ಮಾಡಿ ಸ್ವಾತಂತ್ರ್ಯ ಸಂಪಾದನೆ ಮಾಡಬೇಕು. ಬಡತನದಿಂದ ಪಾರಾಗಿ ಎಲ್ಲರೂ ಸುಖಿಗಳಾಗಬೇಕು; ಉತ್ಪತ್ತಿಗೂ ಅನುಭವಕ್ಕೂ ಸರ್ವರೂ ಸಮಾನ ಕಾರಣರೂ ಸಮಾನ ಪಾಲುದಾರರೂ ಆಗಬೇಕು. ಅನ್ಯಾಯವಾದ ಮತ್ತು ಅಧರ್ಮವಾದ ಭಿನ್ನಭಾವಗಳನ್ನೆಲ್ಲ ತೊಡೆದುಹಾಕಿ ಸರ್ವ ಸ್ವತಂತ್ರತೆ ಸರ್ವಸಮಾನತೆ ಸರ್ವಸೋದರತೆ ಇವುಗಳು ಮೂಡುವಂತೆ ಮಾಡಬೇಕು ಎಂಬ ಸದುದ್ದೇಶದಿಂದ ಪ್ರೇರಿತವಾಗಿದೆ. ಈ ಮಹೋದ್ದೇಶದ ಪರಿಣಾಮವಾಗಿ ಹೊಸ ಸಾಹಿತ್ಯದಲ್ಲಿ ದೇಶಭಕ್ತಿಯೂ ಸಮಾಜ ಸುಧಾರಣಾಸಕ್ತಿಯೂ ಹೆಚ್ಚಿದೆ"[೬] ಎಂದು ಕುವೆಂಪು ಅವರು ಹೊಸ ಕಾಲದ ಸಾಹಿತ್ಯದಲ್ಲಿ ರಾಷ್ಟ್ರೀಯತೆಯ ಭಾವ ತುಂಬಿರುವುದಕ್ಕೆ ಕಾರಣವೊಂದನ್ನು ನೀಡುತ್ತಾರೆ. ಈ ಹಿನ್ನಲೆಯಿಂದಲೇ ಅವರ ಕಾವ್ಯಗಳನ್ನು ನೋಡಬಹುದು. ಅಂದರೆ ಇಲ್ಲಿ ರಾಷ್ಟ್ರೀಯತೆಯ ವಿಚಾರ ಸಾಹಿತ್ಯದಲ್ಲಿ ಬಂದಿರುವುದು ಕಾಲಕ್ಷೇಪಕ್ಕಾಗಿ ಅಲ್ಲ, ಅದು ಅನಿವಾರ್ಯ ಅಂಶ. ಆ ಕಾಲದ ಸಾಹಿತ್ಯದ ಜೀವಾಳವೇ ಅಲ್ಲಿದೆ ಎಂಬ ಅರಿವು ಕುವೆಂಪು ಅವರಲ್ಲಿದೆ. 'ಕುವೆಂಪು ಅವರು ರಾಷ್ಟ್ರೀಯತೆಯ ಕುರಿತು ರೂಪಿಸಿಕೊಂಡಿದ್ದ ಚಿಂತನೆಯನ್ನು ಸಮಕಾಲೀನ

ರಾಜಕೀಯ ಹೋರಾಟದ ಅಗತ್ಯಗಳಿಗೆ ತಕ್ಕಂತೆ ರೂಪುಗೊಂಡದ್ದೇ ಹೊರತು ತಮ್ಮದೇ ಆದ ತಾತ್ವಿಕ ನೆಲೆಯಿಂದ ರೂಪಿಸಿಕೊಂಡದ್ದಲ್ಲ' ಎನ್ನುವ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಕಷ್ಟ. ಡಾ.ಕೆ.ವಿ ನಾರಾಯಣ ಅವರು ಕುವೆಂಪು ಅವರಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಗುರುತಿಸುವಾಗ ಹೇಳುವ ಈ ಮುಂದಿನ ಮಾತು ಚರ್ಚಿಸಬೇಕಾದುದು. ಅವರು ಹೇಳುವಂತೆ "ಕುವೆಂಪು ಅವರಾಗಲೀ ಅವರ ಸಮಕಾಲೀನರಾದ ಯಾವ ಲೇಖಕರಾಗಲೀ, ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ತಮ್ಮದೇ ಆದ ತಾತ್ವಿಕ ನೆಲೆಯಿಂದ ರೂಪಿಸಿಕೊಂಡವರಲ್ಲ. ಪ್ರಚಲಿತ ವಿದ್ಯಮಾನಗಳು ಜಾರಿಗೊಳಿಸಿದ ಪ್ರಧಾನ ಧಾರೆಯ ಚಿಂತನೆಗಳಿಗೆ ತಮ್ಮನ್ನು ತಾವು ಒಪ್ಪಿಸಿಕೊಂಡಿದ್ದವರು. ಇದು ಆಗ ಸಹಜವೂ ಆಗಿತ್ತು. ಸಮಕಾಲೀನವಾಗಿ ಇದ್ದ ರಾಜಕೀಯ ಹೋರಾಟಗಾರರು ಮತ್ತು ಸಾಂಸ್ಕೃತಿಕ ಚಿಂತಕರು 'ರಾಷ್ಟ್ರೀಯತೆ' ಎಂಬ ಪರಿಕಲ್ಪನೆಯನ್ನು ಆಗಿನ ಅಗತ್ಯಗಳಿಗೆ ತಕ್ಕಂತೆ ರೂಪಿಸಿಕೊಟ್ಟರು. ಇತರ ವಲಯಗಳಲ್ಲಿ ಇದು ಸ್ವೀಕೃತವಾಗಿ ಪ್ರತಿಷ್ಠಾಪಿಸಲಾಯಿತು"[೨] ಎನ್ನುತ್ತಾರೆ. ಕುವೆಂಪು ತಮ್ಮನ್ನು ಪ್ರಧಾನಧಾರೆಯ ಚಿಂತನೆಗೆ ಒಪ್ಪಿಸಿಕೊಂಡು, ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ತಮ್ಮದೇ ಆದ ತಾತ್ವಿಕ ನೆಲೆಯಿಂದ ರೂಪಿಸಿಕೊಂಡವರಲ್ಲ ಎಂಬ ಮಾತು ಒಪ್ಪಿತವಲ್ಲ. ಕವಿ ತನ್ನ ಗ್ರಹಿಕೆಯ ತಾತ್ವಿಕತೆಯನ್ನು ಪ್ರತ್ಯೇಕವಾಗಿ ಮಂಡಿಸಬೇಕು ಎಂಬ ಅಪೇಕ್ಷೆಯಾಕಿರಬೇಕು? ಕವಿ ಸಾಂಸ್ಕೃತಿಕ ಚಿಂತಕರಾಗಿ ಗುರುತಿಸಿಕೊಂಡ ಅವರ ರಚನೆಯ ಮೂಲಕವೇ ರಾಷ್ಟ್ರೀಯತೆಯನ್ನು ತಾತ್ವಿಕವಾಗಿ ರೂಪಿಸಿಕೊಂಡ ಬಗೆಯನ್ನು ಗುರುತಿಸಬೇಕು. ಪ್ರಚಲಿತ ವಿದ್ಯಮಾನಕ್ಕೆ ಕೇವಲ ಪ್ರತಿಕ್ರಿಯೆಯ ಸ್ವರೂಪದಲ್ಲಿ ತಮ್ಮ ಚಿಂತನೆಗಳನ್ನು ಮಂಡಿಸಿದ್ದಿದ್ದರೆ ಅದು ಅವರ ಸೃಜನಶೀಲತೆಗೆ ತೊಡಕಾಗಿ ಪರಿಣಮಿಸುತ್ತಿತ್ತು. ಇದನ್ನು ಅರ್ಥೈಸಿಕೊಂಡರೆ ಕುವೆಂಪು ರಾಷ್ಟ್ರೀಯತೆಯಲ್ಲಿ ದ್ವಂದ್ವವನ್ನು ಕಾಣುವುದಕ್ಕೆ ಸಾಧ್ಯವಿಲ್ಲ. ಹೊಸಗನ್ನಡ ಸಾಹಿತ್ಯದ ಮೊದಲ ಕಾಲಘಟ್ಟದಲ್ಲಿ ಬರೆಯುತ್ತಿದ್ದ ಕುವೆಂಪು ಅವರ ರಾಷ್ಟ್ರೀಯತೆಯ ಪರಿಕಲ್ಪನೆಯ ತಾತ್ವಿಕತೆಯನ್ನು 'ಪ್ರಧಾನ ಧಾರೆ'ಯ ಚಿಂತನೆಗಳಿಗೆ ತಮ್ಮನ್ನು ಒಪ್ಪಿಸಿಕೊಂಡಿದ್ದರು ಎಂದು ಹೇಳುವುದು ಸರಿಯಾದ ಗ್ರಹಿಕೆಯೆ? ಯಾಕೆಂದರೆ ಕುವೆಂಪು ಅವರಾಗಲಿ, ಅವರ ಕಾಲಘಟ್ಟದ ಇನ್ನಿತರ ಬರಹಗಾರರಾಗಲಿ ಸಮಾಜದ ವರ್ತಮಾನದ ಆಗುಹೋಗುಗಳಿಂದ ಪ್ರತ್ಯೇಕವಾಗಿಸಿ ಕೊಂಡಿದ್ದವರಲ್ಲ. ಅದಕ್ಕಿಂತಲೂ ಮುಖ್ಯವಾಗಿ ಆ ಕಾಲಘಟ್ಟದಲ್ಲಿ ವಸಾಹತು ಆಡಳಿತ, ವಸಾಹತುಶಾಹಿಯ ಪ್ರಭಾವದಿಂದ ಬಂದ ಆಧುನಿಕತೆ,

ಇವೆಲ್ಲದಕ್ಕೂ ವಿದ್ಯಾವಂತ ವರ್ಗ ಪ್ರತಿಕ್ರಿಯಿಸುತ್ತಿದ್ದ ರೀತಿಯನ್ನು ಗಮನಿಸಬೇಕು. ವಸಾಹತು ಆಡಳಿತ ಭಾರತವನ್ನು, ಇದರ ಸಮಾಜವನ್ನು ಹೊಸ ರೀತಿಯಲ್ಲಿ ರೂಪಿಸುತ್ತಿತ್ತು. ಸಾಮಾಜಿಕ ಕಾರಣಗಳಿಂದ ಜಡಗೊಂಡಿದ್ದ ವ್ಯವಸ್ಥೆಯಲ್ಲಿ ಹೊಸ ಚಲನೆಗಳು ಆರಂಭವಾಯಿತು. ಇವೆಲ್ಲವನ್ನು ಕವಿ ಗಮನಿಸುತ್ತಿದ್ದರು. ಆ ಕಾಲದ ಸಾಮಾಜಿಕ ಕಾಳಜಿಗಳು ರಾಜಕೀಯ ಹೋರಾಟಗಳಲ್ಲಿ ವ್ಯಕ್ತವಾಗುತ್ತಿತ್ತು. ಕವಿ ಈ ಎಲ್ಲ ಪ್ರಕ್ರಿಯೆಗಳನ್ನು ತಾತ್ವಿಕವಾಗಿ ಗ್ರಹಿಸದೆ ಹೋಗಿದ್ದರೆ ಕೇವಲ ಘೋಷಣಾ ರೂಪದ, ಪ್ರತಿಕ್ರಿಯಾ ರೂಪದ ಸಾಲುಗಳಷ್ಟೇ ಅವರ ಕಾವ್ಯದ ಸಾಲುಗಳಾಗಿರುತ್ತಿತ್ತು. ಕುವೆಂಪು ಕಾವ್ಯವನ್ನು ನೋಡಿದಾಗ ಅದು ಅಂತಹ ಘೋಷಣಾ ರೂಪದ ಸಾಲುಗಳು ಎಂದು ಅನ್ನಿಸಲಾರವು. ಇದಕ್ಕೆ ಕಾರಣವಾದದ್ದು ಅವರ ಚಿಂತನೆ. ತನ್ನ ಕಾಲದ ಸಾಮಾಜಿಕ ಒತ್ತಡವನ್ನು ಗ್ರಹಿಸುತ್ತಲೇ ಅದನ್ನು ಉದ್ವಿಗ್ನರಾಗದೇ ಎದುರಿಸಿದ್ದು. ಕುವೆಂಪು ತನ್ನ ಕಾಲದ ರಾಜಕೀಯ ಘಟನೆಗಳಿಗಷ್ಟೇ ಪ್ರತಿಕ್ರಿಯಿಸಲಿಲ್ಲ. ಇವೆಲ್ಲದರಿಂದ ಪಾರಾಗಲು ಅವರಲ್ಲಿ ಮತ ತತ್ವಗಳನ್ನು ಮೀರಿದ ಒಂದು ಆಧ್ಯಾತ್ಮದ ದಾರಿ ಇತ್ತು. ಅವರು ರಾಷ್ಟ್ರವನ್ನು ಅದರ ಭೌಗೋಳಿಕ ಸ್ವರೂಪದಲ್ಲಿ ಗ್ರಹಿಸಿ ವಿರಮಿಸಲಿಲ್ಲ. ಅವರು ಸಾಂಸ್ಕೃತಿಕ ನೆಲೆಯ ಭಾರತವನ್ನೇ ಕಣ್ಮುಂದೆ ಇಟ್ಟುಕೊಂಡಿದ್ದರು. "ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಯಾವ ರಾಜ್ಯಕ್ಕೆ ಹೋಗಲಿ, ಯಾವ ಹಳ್ಳಿಗೆ ಹೋಗಲಿ, ಯಾವ ನಗರಕ್ಕೆ ಹೋಗಲಿ ಈ ಮೂಲ ಸಂಸ್ಕೃತಿಯ ಐಕ್ಯತೆಯನ್ನು ಕಾಣುತ್ತೇವೆ. ಔತ್ತರೇಯ ದಾಕ್ಷಿಣಾತ್ಯ, ಆ ಜಾತಿ–ಈ ಜಾತಿ, ಆ ಮತ ಎಂಬ ಭೇದವಿಲ್ಲದೆ ವೇದೋಪನಿಷತ್ತು ಪುರಾಣೇತಿಹಾಸ ದರ್ಶನಗಳೂ ಅಲ್ಲಿ ಪ್ರತಿಪಾದಿತವಾಗಿರುವ ಉದಾತ್ತ ತತ್ವಗಳೂ ಸರ್ವಜನಾದರಣೀಯವಾಗಿದೆ. ಅಲ್ಲಿ ಅಭಿವ್ಯಕ್ತಗೊಂಡಿರುವ ಮಹಾವ್ಯಕ್ತಿಗಳು ಸರ್ವಜನ ಗೌರವ ಭಾಜನರಾಗಿದ್ದಾರೆ. ಅಲ್ಲಿ ಕಾಣುವ ಅಧ್ಯಾತ್ಮಿಕ ವಿಚಾರದಲ್ಲಿ ಎಲ್ಲರೂ ಒಂದೇ ವಿಧವಾದ ಶ್ರದ್ಧಾಭಕ್ತಿ ಗೌರವವುಳ್ಳವರಾಗಿದ್ದಾರೆ. ...... ಯಾವ ಸೈನಿಕ ಶಕ್ತಿಯೂ ರಾಜಕೀಯ ಶಕ್ತಿಯೂ ಮಾಡಲಾರದ ಕೆಲಸವನ್ನು, ರಕ್ಷಿಸಲಾರದ ಸಂಸ್ಕೃತಿ ಭಂಡಾರವನ್ನು ಮಹಾಕವಿಗಳು ಕಲಾಚಾರ್ಯರು ಮಾಡುತ್ತಾ ಬಂದಿದ್ದಾರೆ, ರಕ್ಷಿಸುತ್ತಾ ಬಂದಿದ್ದಾರೆ. ಹಾಗಾಗದಿದ್ದರೆ ಇಂದಿನ ಭೌಗೋಳಿಕ ಐಕ್ಯತೆ ಸಾಧ್ಯವಾಗುತ್ತಿರಲಿಲ್ಲ. ಪ್ರಪಂಚದಲ್ಲಿ ಯಾವ ಸಮಯದಲ್ಲಿ ಏನು ಬೇಕಾದರೂ ಆಗಬಹುದು. ಎಂಥ ವಿನಾಶವಾದರೂ ಒದಗಬಹುದು. ಆದರೆ ಭರತಖಂಡದ ಸಾಂಸ್ಕೃತಿಕ ಐಕ್ಯತೆ ಮಾತ್ರ

ಅವಿನಾಶಿ"[1] ಎನ್ನುತ್ತಾರೆ. ಈ ಮಾತಿನಲ್ಲಿ ಕುವೆಂಪು ಅವರ ಸಾಂಸ್ಕೃತಿಕ ಪ್ರಜ್ಞೆಯ ಸ್ವೋಪಜ್ಞತೆಯುಳ್ಳ ರಾಷ್ಟ್ರ ಚಿಂತನೆಯನ್ನು ಕಾಣಬಹುದಾಗಿದೆ.

ಕುವೆಂಪು ಅವರ ರಾಷ್ಟ್ರೀಯತೆಯ ಕುರಿತ ನಿಲುವು ಸಂಕೀರ್ಣ ಸ್ವರೂಪದ್ದು. ರಾಷ್ಟ್ರೀಯತೆಯ ಭಾವನೆಯ ಭಾಗವಾಗಿ ಸ್ವಾತಂತ್ರ್ಯ ಸಂಪಾದನೆಗೆ ಬೇಕಾದ ಪ್ರೇರಣೆಯನ್ನು ತುಂಬುವುದು ಒಂದು ನಿಲುವಾದರೆ, ಅದಕ್ಕೂ ಮುಂದುವರಿದು ಈ ಸ್ವಾತಂತ್ರ್ಯದ ಫಲ ಸರ್ವೋದಯವಾಗಬೇಕು ಎಂದು ಬಯಸಿದ್ದರು. ಹಾಗಾಗಿ ಅವರು 'ಹೊಸಬಾಳಿನ ಗೀತೆ'ಯಲ್ಲಿ 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎನ್ನುತ್ತಾರೆ. ಸ್ವಾತಂತ್ರ್ಯ ಸಂಪಾದನೆಯಷ್ಟೇ ಕವಿಯ ಗುರಿಯಲ್ಲ. ಸ್ವತಂತ್ರ ಭಾರತದಲ್ಲಿ ಎಲ್ಲರಿಗೂ ಸಮನಾದ ಬದುಕು ಸಿಗುವಂತಾಗಬೇಕು. ಜನ ಮತದ ಮೌಢ್ಯಗಳಿಂದ ಬಿಡುಗಡೆಗೊಂಡು, ಅಜ್ಞಾನದಿಂದ ಬಿಡುಗಡೆಗೊಂಡು ಸುಂದರವಾದ ಬದುಕನ್ನು ನಡೆಸಲು ಸಿದ್ಧಗೊಳ್ಳಬೇಕು ಎಂಬ ವಿಶಾಲವಾದ ಆಶಯವನ್ನು ಹೊಂದಿದ್ದರು.

ಕುವೆಂಪು ಅವರ ಕವಿತೆಗಳಲ್ಲಿ ರಾಷ್ಟ್ರೀಯತೆಯ ಅಭಿವ್ಯಕ್ತಿಯನ್ನು ಕುರಿತು ಅಧ್ಯಯನ ಮಾಡುವಾಗ ಡಾ.ಕೆ.ಸಿ.ಶಿವಾರೆಡ್ಡಿ ಯವರ ಈ ಮುಂದಿನ ಮಾತು ಮಹತ್ವದ ಒಳನೋಟವೊಂದನ್ನು ನೀಡುತ್ತದೆ. "ಸ್ವಾತಂತ್ರ್ಯಕ್ಕೆ ಅತ್ಯಗತ್ಯವಾದ ಮನೋಭೂಮಿಕೆಯನ್ನು ಜನರಲ್ಲಿ ಎಚ್ಚೆತ್ತುಕೊಳ್ಳುವಂತೆ ಪ್ರೇರೆಪಿಸುವುದರ ಕಡೆಗೆ ಕುವೆಂಪು ಅವರ ಕಾವ್ಯ ತುಡಿಯುತ್ತದೆ. ಹಾಗೆ ತುಡಿಯುತ್ತಲೇ ಸ್ವಾತಂತ್ರ್ಯ ಸಂಪಾದನೆಗೆ ಅಗತ್ಯವಾದ ತರುಣಶಕ್ತಿಯ ಗಮನ ಸೆಳೆಯುವಲ್ಲಿ ಕ್ರಿಯಾಶೀಲವಾಗುತ್ತದೆ. ಹಾಗೆ ಕ್ರಿಯಾಶೀಲವಾಗುತ್ತಲೇ ವಸಾಹತು ಸಂಸ್ಕೃತಿಯ ಆಕ್ರಮಣಶೀಲ ನೆಲೆಗಳನ್ನು, ಅದರ ಕ್ರೌರ್ಯದ ಬಗೆಗಳನ್ನು ವಿಶ್ಲೇಷಣೆಗೆ ಗುರಿಪಡಿಸುತ್ತದೆ"[2] ಎನ್ನುತ್ತಾರೆ. ಈ ಮಾತು ಕುವೆಂಪು ಅವರ ಕವಿತೆಗಳ ಅರ್ಥೈಸುವಿಕೆಗೆ ಮುಖ್ಯ ದಾರಿಯೊಂದನ್ನು ಮುಂದಿಡುತ್ತದೆ. ಕುವೆಂಪು ಅವರು ವಸಾಹತುಶಾಹಿ ಸಂಸ್ಕೃತಿಯನ್ನು ಆತಂಕದಿಂದಲೇ ಎದುರುಗೊಂಡವರು. ಅವರ ಇಂಗ್ಲಿಷ್ ಕುರಿತ ಭಾವನೆಗಳು ವಸಾಹತುಶಾಹಿಶಕ್ತಿಯ ಆಕ್ರಮಣಕಾರಿತ್ವದ ನೆಲೆಯನ್ನು, ಕ್ರೌರ್ಯವನ್ನು ಗ್ರಹಿಸುವುದಕ್ಕೆ ಅಡ್ಡಿಯಾಗಲಿಲ್ಲ. ರಾಜಕೀಯವಾಗಿ ಸಂಘಟಿತ ಗೊಳ್ಳುವುದಕ್ಕಿಂತಲೂ ಹೆಚ್ಚಾಗಿ ಸಾಂಸ್ಕೃತಿಕವಾಗಿ ಭಾರತ ಇದರಿಂದ ಕಳೆದುಹೋಗುತ್ತದೆ ಎಂಬ ಆತಂಕ ಅವರಲ್ಲಿತ್ತು. ಹಾಗಾಗಿ ಅವರು ಭಾರತದ ಕುರಿತು ಆಡುವ ಮಾತುಗಳು ರಕ್ಷಣಾತ್ಮಕ ನೆಲೆಯಿಂದ ಅಭಿವ್ಯಕ್ತಗೊಳ್ಳುತ್ತಿತ್ತು. ಭಾರತೀಯರನ್ನು ಅವರು ಕ್ಷಾತ್ರ ಪ್ರವೃತ್ತಿಯನ್ನು ಸ್ವೀಕರಿಸಬೇಕಾದವರು ಎಂಬ ನೆಲೆಯಲ್ಲಿ

ನೋಡುತ್ತಾರೆ. ಸಾಹಿತ್ಯ, ಸಂಸ್ಕೃತಿ, ಮಾನವೀಯತೆಗೆ ವಸಾಹತುಶಾಹಿ ಪ್ರಭುತ್ವ ಅಪಾಯಕಾರಿಯಾಗಿ ಕಾಣುತ್ತದೆ. ಐಕ್ಯತೆಯನ್ನು ಒಡೆಯುವುದಷ್ಟೇ ಅಲ್ಲ, ವೈವಿಧ್ಯತೆಯನ್ನು ನಾಶಮಾಡುವ ಹುನ್ನಾರ ಅವರಿಗೆ ಆ ಪ್ರಭುತ್ವದ ಇರುವಿಕೆಯಲ್ಲಿ ಕಾಣುತ್ತದೆ. ಯಾವ ವೈವಿಧ್ಯತೆ ಭಾರತದ ಸಾಂಸ್ಕೃತಿಕ ಅಸ್ತಿತ್ವದ ಹೆಗ್ಗುರುತೋ ಆ ವೈವಿಧ್ಯತೆಯನ್ನು ಏಕರೂಪದ ಆಡಳಿತದ, ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಕೆಡಿಸುತ್ತಾರೆ ಎಂಬ ಎಚ್ಚರ ಅವರಲ್ಲಿ ಇದ್ದುದರಿಂದಾಗಿಯೋ ಭಾರತೀಯ ಯುವಕರನ್ನು ಸಾಂಸ್ಕೃತಿಕ ಸ್ವರೂಪದಲ್ಲಿಯೇ ಕ್ರಿಯಾಶೀಲರಾಗುವಂತೆ ಅವರು ಪ್ರೇರೇಪಿಸುತ್ತಿದ್ದರು.

ಭಾರತ ಪರಕೀಯ ದಾಸ್ಯದಲ್ಲಿ ಸಿಲುಕಿಕೊಂಡು ತನ್ನತನ, ತನ್ನ ಶೌರ್ಯ-ಪರಾಕ್ರಮಗಳನ್ನು ಕಳೆದುಕೊಂಡು, ನೋವಿಗೆ ಅಂಜಿಕೊಂಡು ದುಃಖಿಸುತ್ತಿದ್ದ ಭಾರತೀಯರಿಗೆ 'ವೀರತ್ವ'ವನ್ನು, 'ಕ್ಷಾತ್ರ'ವನ್ನು ಬೋಧಿಸುವ ಬಗೆಯ, ಭಾರತೀಯರ ಶೌರ್ಯವನ್ನು ಉದ್ದೀಪಿಸುವ ಮಾದರಿಯ ಹಲವು ಕವನಗಳನ್ನು ಕುವೆಂಪು ರಚಿಸಿದ್ದಾರೆ. ಅವರ 'ಪಾಂಚಜನ್ಯ' ಕವನದ ಈ ಸಾಲುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

" ಬೆಚ್ಚ ಬಿಡು, ನೆಚ್ಚನೆಡು
ಕೆಚ್ಚೆದೆಯ ಗುಡಿಯಲ್ಲಿ;
ಸೆರೆಯ ಹರಿ, ಅರಿಯನಿರಿ
ಹುಟ್ಟಳಿಸು ಹುಡಿಯಲ್ಲಿ !
ನಾನಳಿವೆ, ನೀನಳಿವೆ
ನಮ್ಮೆಲುವುಗಳ ಮೇಲೆ
ಮೂಡುವುದು, ಮೂಡುವುದು
ನವ ಭಾರತದ ಲೀಲೆ !"
"ಭರತದ ಖಂಡದ ಹಿತವೆ
ನನ್ನ ಹಿತ ಎಂದು
ಭರತಮಾತೆಯ ಮತವೆ
ನನ್ನ ಮತ ಎಂದು
ಭಾರತಾಂಬೆಯ ಸುತರೆ
ಸೋದರರು ಎಂದು
ಭಾರತಾಂಬೆಯ ಮುಕ್ತಿ
ಮುಕ್ತಿ ನನಗೆಂದು
ನುಗ್ಗು ಮುಂದಕೆ ಧೀರ
ಕಾಳಗದ ಕೊಲೆಗೆ !

ನುಗ್ಗು ಮರಣಕೆ ವೀರ
ಸಗ್ಗದಾ ನೆಲೆಗೆ!"     (ಪಾಂಚಜನ್ಯ)[೮]

ಭಾರತೀಯರನ್ನು ಬಲಿದಾನಕ್ಕಾಗಿ ಆಹ್ವಾನಿಸುವ ದಾಟಿಯಲ್ಲಿದೆ ಈ ಕವನ. ಬಲಿದಾನದ ಮೂಲಕವೇ ಭಾರತಕ್ಕೆ ಮುಕ್ತಿಯನ್ನು ಒದಗಿಸಿಕೊಡುವ ಭರವಸೆ ಇಲ್ಲದೆ. ಕವಿಯ ಆಶಯ 'ನವಭಾರತ' ಮೇಲೆಳಬೇಕು. ಈ ನವಭಾರತದ ಲೀಲೆ ಮೂಡುವುದು ಅಳಿದು ಹೋಗುವ ಅಂದರೆ ಬಲಿಯಾದ ನಮ್ಮ ಎಲುಬುಗಳ ಮೇಲೆ ಎಂಬ ವೀರವಾಣಿ ಇಲ್ಲಿದೆ. ಹೋರಾಟದ ಕೆಚ್ಚನ್ನು ತುಂಬಿಸುವುದರ ಜೊತೆಗೆ ರಾಷ್ಟ್ರದ ಸಮಸ್ತ ಜನರನ್ನೂ ಸಹೋದರತೆಯ ನೆಲೆಯಲ್ಲಿ ಬೆಸೆಯುವ ಆಶಯವಿದೆ. ಯಾವತ್ತೂ ಪರಸ್ಪರರನ್ನು ನೋಡಿಕೊಳ್ಳದಿದ್ದರೂ, ಪರಿಚಿತರಲ್ಲದಿದ್ದಾಗಲೂ 'ರಾಷ್ಟ್ರೀಯತೆ'ಯ ಭಾವ ಪರಸ್ಪರ ಎಲ್ಲರನ್ನೂ ಒಂದು ಉದ್ದೇಶಕ್ಕಾಗಿ ಬೆಸೆಯುತ್ತದೆ. ಹಾಗಾಗಿ ಇಲ್ಲೂ ರಾಷ್ಟ್ರದ ಉಳಿದೆಲ್ಲಾ ಜನಗಳನ್ನು ತನ್ನ ಬಂಧುಗಳು, ಸಹೋದರರು ಎಂಬ ಭಾವನೆಯನ್ನು ಮೂಡಿಸುತ್ತಲೇ ತಾವೆಲ್ಲರೂ ಜೊತೆಗೂಡಿ ತಮ್ಮ ತಾಯ್ನಾಡಿನ ಬಂಧ ಮುಕ್ತಿಗಾಗಿ ದುಡಿಯಬಹುದೆಂಬ ಭಾವನೆ ಇಲ್ಲಿ ಪ್ರಕಟವಾಗುತ್ತದೆ. ವ್ಯಕ್ತಿ ತನ್ನ ವೈಯಕ್ತಿಕ ಮುಕ್ತಿಗಿಂತಲೂ ಭಾರತಾಂಭೆಯ ಮುಕ್ತಿಯನ್ನೇ ತನ್ನ ಪಾಲಿನ ಭಾಗ್ಯವೆಂದು ಭಾವಿಸಿ ಅದಕ್ಕಾಗಿ ತನ್ನನ್ನು ದುಡಿಸಿಕೊಳ್ಳಬೇಕು ಎಂಬ ಉದಾತ್ತತೆ ವ್ಯಕ್ತವಾಗುತ್ತದೆ. ವ್ಯಕ್ತಿಯೊಬ್ಬ ಕೈಗೊಳ್ಳಬಹುದಾದ ಈ ನಿರ್ಧಾರದ ಪ್ರಕ್ರಿಯೆಯ ಸ್ವರೂಪ ಏನು? ಈ ಬಗೆಯ ನಿರ್ಧಾರ ವ್ಯಕ್ತಿಯ ಭಾವುಕ ಆತುರವೆ? ಬಾಹ್ಯ ಒತ್ತಡವೆ? ಎಂದು ಗಮನಿಸಿದರೆ, ರಾಷ್ಟ್ರದ ಬಿಡುಗಡೆಗಾಗಿ ನಡೆಸುವ ಹೋರಾಟವಾಗಲಿ, ಅಗತ್ಯವೆಂದು ಭಾವಿಸಿದಾಗ ವ್ಯಕ್ತಿ ಮಾಡಿಕೊಳ್ಳುವ ಬಲಿದಾನವಾಗಲಿ, ಅದು ವ್ಯಕ್ತಿಯು ಮುಗ್ಧತೆಯಿಂದ, ಭಾವುಕ ಆವೇಶದಿಂದ ಕೈಗೊಳ್ಳಬಹುದಾದ ನಿರ್ಧಾರವಲ್ಲ. ಇದರ ಬದಲಾಗಿ ಈ ದಾಸ್ಯ ವಿಮೋಚನೆಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ವ್ಯಕ್ತಿಯ ಪ್ರತಿ ನಿಲುವಿನ ಹಿಂದೆ ಒಂದು ಬಗೆಯ ಆಳವಾದ ಬೌದ್ಧಿಕತೆ ಇದೆ. ವಿಚಾರ ಪ್ರಬುದ್ಧತೆಯ ಪ್ರಣಾಳಿಕೆಯೊಂದಿದೆ. ಭಾವತೀವ್ರತೆಯ ಮಂತ್ರ ಮುಗ್ಧತೆಗಿಂತ, ದೀರ್ಘ ಚಿಂತನೆಯ ಪ್ರಬುದ್ಧತೆ ಇದೆ. ವ್ಯಕ್ತಿಯಿಂದ ಸಮಷ್ಟಿಯ ಕಡೆಗೆ ಚಲಿಸುವ ಪ್ರಕ್ರಿಯೆಯೊಂದಿದೆ. ಭರತಖಂಡದ ಹಿತದಲ್ಲಿ ತನ್ನ ಹಿತ ಕಾಣುವ, ಭರತ ಮಾತೆಯ 'ಮತ'ವನ್ನೇ ತನ್ನ ಮತವೆಂದು ಭಾವಿಸುವ, ಭಾರತಾಂಬೆಯ ಸುತರನ್ನು ತನ್ನ ಸಹೋದರರೆಂದು ಸ್ವೀಕರಿಸುವ ಬಂಧುತ್ವದ ಆಲೋಚನೆಯಿದೆ. ಬಲಿದಾನವನ್ನು ಒಂದು ಆದರ್ಶ ಎಂದು ಭಾವಿಸಬಹುದೆ? ಎಂಬ

ಪ್ರಶ್ನೆ ಕವಿಯನ್ನು ಅಧ್ಯಯನ ಮಾಡುವ ಈ ಕಾಲಘಟ್ಟದಲ್ಲಿ ಸಹಜವಾಗಿ ನಮಗೆ ಎದುರಾಗುತ್ತದೆ. ಒಂದು ವೇಳೆ ಹೌದು ಎನ್ನುವುದಾದರೆ, ಯಾರಿಗಾಗಿ ಮಾಡಬೇಕು? ಯಾರು ಮಾಡಬೇಕು? ಬಲಿದಾನ ಅಂತಿಮ ಪರಿಹಾರವೇ? ಎಂಬ ಯೋಚನೆಗಳು ಬರುತ್ತದೆ. ಇದನ್ನು 'ಕಾಲ' ಮತ್ತು 'ಹಿತ'ದ ಹಿನ್ನೆಲೆಯಲ್ಲಿಟ್ಟು ನೋಡಬೇಕಾಗುತ್ತದೆ. ಪರಕೀಯ ಪ್ರಭುತ್ವದ ಹಿಡಿತ ವ್ಯಕ್ತಿಯ ಬದುಕಿನ ಪ್ರತಿಕ್ಷಣವನ್ನು ನಿಗ್ರಹಿಸುತ್ತಿದ್ದಾಗ ಅದರಿಂದ ಮುಕ್ತಿಯನ್ನು ಪಡೆಯಲು ಸಮಾಜವೇ ಹುಟ್ಟುಹಾಕುವ ಆದರ್ಶವಿದು. ಈ ಮೌಲ್ಯಕ್ಕೆ ಆ ಕಾಲದಾಚೆಗೆ ಅರ್ಥ ಇರುವುದಿಲ್ಲ. ಹಾಗೆಂದು ಇಲ್ಲಿ ಕವಿ ಸಾವನ್ನು ಉತ್ಪ್ರೇಕ್ಷಿಸುತ್ತಿಲ್ಲ. ಸಮೂಹದ ಹಿತದಲ್ಲಿ ವ್ಯಕ್ತಿ ಗೌಣವಾಗುವ ಮತ್ತು ಹಾಗಾಗುವ ಮೂಲಕ ಸಮುದಾಯ ಮೇಲೆಳುತ್ತದೆ ಎಂಬ ಆಶಯ ಕವಿಗಿದೆ. ಇಲ್ಲಿ 'ಭಾರತ' ಪ್ರಧಾನವಾಗುತ್ತದೆ. ಭಾರತದ ಹಿತದಲ್ಲಿ, ಭಾರತದ ಮತದಲ್ಲಿ, ಭಾರತದ ಸುತರಲ್ಲಿ, ಭಾರತದ ಮುಕ್ತಿಯಲ್ಲಿ ವ್ಯಕ್ತಿ ತನ್ನ ಹಿತವನ್ನು, ಮತವನ್ನು, ಮುಕ್ತಿಯನ್ನು ಕಾಣುವ ಬಗೆಯಿದೆ.

ಸಮಾಜದಲ್ಲಿ ಬೇರುಬಿಟ್ಟಿರುವ ವಿವಿಧ ರೀತಿಯ ಅಂತರ, ತಾರತಮ್ಯಗಳನ್ನು ಮರೆತು ಬದಿಗೊತ್ತಿ, ಭಾರತಮಾತೆಯ ಮುಕ್ತಿಗಾಗಿ ನಡೆಯುವ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಬೇಕಾದ ಅಗತ್ಯವನ್ನು ಕವಿತೆ ಸೂಕ್ಷ್ಮವಾಗಿ ಹೇಳುತ್ತದೆ. ಹೋರಾಟಕ್ಕೆ ಬೇಕಾದ ವ್ಯಕ್ತಿತ್ವಗಳ ನಿರ್ಮಾಣದ ಕಡೆಗೆ ಕವಿತೆ ತನ್ನ ಗಮನ ಸೆಳೆಯುತ್ತದೆ. ಆ ಮೂಲಕ ಬಲಿಯಾದವರಾಗಲಿ, ಬಲಿಯಾದವರ ಬಂಧುಗಳಾಗಲೀ ಇಲ್ಲಿ ಯಾರು ಅನಾಥರಲ್ಲ ಎಂಬ ಬಂಧುತ್ವದ ಪ್ರಜ್ಞೆಯನ್ನು ಪ್ರಕಟಿಸುತ್ತಾರೆ. ಭಾರತದ ಮುಕ್ತಿಯೇ ತನ್ನ ಮುಕ್ತಿ ಎಂದು ಭಾವಿಸುವ ಒಂದು ಬಗೆಯ ದೃಢವಾದ ನಿಲುವು ಈ ಪದ್ಯದಲ್ಲಿ ವ್ಯಕ್ತವಾಗುತ್ತದೆ. 'ಪಾಂಚಜನ್ಯ' ಕವಿತೆ ತರುಣ ಮನಸ್ಸುಗಳನ್ನು ಭಾರತದ ಬಿಡುಗಡೆಯ ಮಹಾಪರ್ವಕ್ಕೆ ಅಣಿಗೊಳಿಸುವ, ಸ್ವತಂತ್ರ ಸಮೃದ್ಧ ಭಾರತದ ನಿರ್ಮಾಣಕ್ಕೆ ಅಗತ್ಯವಾದ ಮನೋಭೂಮಿಕೆಯನ್ನು ಬೆಳೆಸುವ ಉದ್ದೇಶ ಹೊಂದಿದ್ದಾಗಿದೆ. ಈ ಉದ್ದೇಶದಲ್ಲೇ ಕುವೆಂಪು ಅವರ ರಾಷ್ಟ್ರೀಯತೆಯ ಪರಿಕಲ್ಪನೆಯ ಸ್ವರೂಪ ಮತ್ತು ಬಗೆ ಸ್ಪಷ್ಟವಾಗಿ ಪ್ರಕಟವಾಗುತ್ತದೆ. ಇದೇ ಭಾವವನ್ನು ಇನ್ನಷ್ಟು ಪ್ರಖರವಾಗಿ ಮತ್ತು ನಿರ್ದಿಷ್ಟವಾಗಿ ಹೇಳುವ ಕವನ 'ಸತ್ಯಾಗ್ರಹ'

"ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ

ಕಬ್ಬಿಣದ ಸಂಕೋಲೆಗಳ ಕರಿಯ ತೆಕ್ಕೆಯಲಿ
ಜೈಲಿನಲಿ, ಅಧಿಕಾರಿಗಳ ಕ್ರೂರ ದರ್ಪದಲಿ
ಹರಿದೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಹೆಜ್ಜೆ ಹಿಂದೆಗೆಯದಳಿದವನು ಸತ್ಯಾಗ್ರಹಿ!”[೯] (ಸತ್ಯಾಗ್ರಹಿ)

ಸ್ವಾತಂತ್ರ್ಯ ಹೋರಾಟ ನಡೆಯುತ್ತಿದ್ದಾಗ ಗಾಂಧೀ ಮುಂದಿಟ್ಟ ಪರಿಕಲ್ಪನೆ ‘ಸತ್ಯಾಗ್ರಹ’. ಸ್ವಾತಂತ್ರ್ಯ ಹೋರಾಟ ಎಂದರೆ ಗಾಂಧೀಗೆ ಅದು ಸತ್ಯಾಗ್ರಹ ಮಾಡುವುದು ಎಂದೇ ಅರ್ಥ. ಸತ್ಯಾಗ್ರಹ ಎನ್ನುವುದು ಸಾಮಾನ್ಯ ಸರಳ ಸಂಗತಿಯಾಗಿರಲಿಲ್ಲ, ಇಂತಹ ಸತ್ಯಾಗ್ರಹಿಗಳ ದಾರಿ ಸುಲಭದ್ದಾಗಿರಲಿಲ್ಲ. ಕುವೆಂಪು ‘ಸತ್ಯಾಗ್ರಹಿ’ ಕವಿತೆಯ ಮೂಲಕ ಯಾರು ನಿಜವಾದ ‘ಸತ್ಯಾಗ್ರಹಿ’ ಎಂಬುದನ್ನು ಸ್ಪಷ್ಟಗೊಳಿಸುತ್ತಾರೆ. ಬ್ರಿಟಿಷರ ಗುಂಡಿಗೆ, ಬಾಣಕ್ಕೆ, ಬಂಧನದ ಸಂಕೊಲೆಗೆ, ಜೈಲಿನೊಳಗಿನ ಅಧಿಕಾರಿಗಳ ದರ್ಪಕ್ಕೆ, ರಕ್ತವೇ ಹರಿದರೂ ತಾನಿಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆಯದವರಷ್ಟೇ ‘ಸತ್ಯಾಗ್ರಹಿ’ ಎಂದು ಹೇಳುತ್ತಾರೆ. ‘ದೇಶಮಾತೆಯ ಸುಖಕೆ ತನ್ನ ಸುಖವನು ಬೇಳ್ವ ದೇಶದ ಬದುಕಿಗಾಗಿ ತನ್ನ ಬದುಕನು ಸೀಳ್ವ’ ವೀರರೇ ಸತ್ಯಾಗ್ರಹಿಗಳು ಎಂದು ಹೇಳುತ್ತಾರೆ. ಆ ಮೂಲಕ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಾರರಿಗೆ ಕವಿ ತನ್ನ ಕವಿತೆಯ ಮೂಲಕ ಸ್ಫೂರ್ತಿ ತುಂಬುತ್ತಾರೆ. ಭಾರತದ ಬಿಡುಗಡೆಗಾಗಿ ಜನ ತೆರುವ ಬೆಲೆ ಸಾಮಾನ್ಯವಾದುದಲ್ಲ ಎಂಬುದು ಈ ಕವಿತೆಯ ಹಿಂದಿರುವ ಪ್ರಜ್ಞೆ. ‘ಸತ್ಯಾಗ್ರಹ’ ‘ಅಹಿಂಸೆ’ ಹೇಡಿತನದ ಸಂಕೇತವಲ್ಲ. ಗಾಂಧೀಜಿಯೇ ಹೇಳುವಂತೆ “ಅಹಿಂಸೆ ನಮ್ಮ ದೌರ್ಬಲ್ಯಕ್ಕೆ ಒಂದು ಸೋಗಾದರೆ ಅದು ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡುತ್ತದೆ. ನಿರ್ವೀಯತೆಗಿಂತ ಬಲಿಷ್ಠನ ಹಿಂಸೆಯೇ ಎಷ್ಟೋ ಪಾಲು ಉತ್ತಮ”[೧೦]. ಹೇಡಿಯೊಬ್ಬ ಸತ್ಯಾಗ್ರಹಿಯಾಗಲು ಸಾಧ್ಯವೂ ಇಲ್ಲ. ಹೀಗಾಗಿಯೇ ಕುವೆಂಪು ಸತ್ಯಾಗ್ರಹಿಯನ್ನು ‘ಸಮರಲೋಲನೆ ನಮ್ಮ ವೀರ ಸತ್ಯಾಗ್ರಹಿ’ ಎನ್ನುತ್ತಾರೆ. ‘ಸಹನೆಯಿಂ ಗೆಲ್ಲುವ ಪರಾಕ್ರಮಿಯು’ ಎಂದು ಹೇಳುವ ಮೂಲಕ ಪರಾಕ್ರಮಕ್ಕೆ, ವೀರತ್ವಕ್ಕೆ ಹೊಸ ಅರ್ಥವನ್ನು ಕೊಡುತ್ತಾರೆ.

ವ್ಯಕ್ತಿಯೊಬ್ಬ ಸತ್ಯಾಗ್ರಹಿಯಾಗುವುದೇ ದೇಶಕ್ಕೆ ಎರಗಿದ ಬಂಧನವನ್ನು ಹೊಡೆದೊಡಿಸಲು. ಕವಿ ಬಂಧನದ ಸನ್ನಿವೇಶವನ್ನು ವಿವರಿಸುತ್ತಲೇ ಬಂಧಮುಕ್ತವಾಗುವುದಕ್ಕೆ ಬೇಕಾದ ಬೌದ್ಧಿಕ ಸರಕನ್ನು ತನ್ನ ಕವಿತೆಗಳ ಮೂಲಕ

ನೀಡುತ್ತಾರೆ. ಕುವೆಂಪು ಅವರ ರಾಷ್ಟ್ರೀಯತೆಯ ಕುರಿತ ಚಿಂತನೆಯ ಸ್ವರೂಪವನ್ನು ಈ ಕವಿತೆ 'ಪರಾಕ್ರಮ' 'ಪೌರುಷ'ದ ಪರಿಭಾಷೆಯಲ್ಲಿ ಮಂಡಿಸುತ್ತದೆ. ಇಲ್ಲಿ ಸ್ಪಷ್ಟವಾಗಿ ಗುರುತಿಸಬೇಕಾದ ಅಂಶವೆಂದರೆ ಕುವೆಂಪು ಪ್ರತಿಪಾದಿಸುವ ರಾಷ್ಟ್ರೀಯತೆಯು ಪ್ರತಿಕ್ರಿಯಾತ್ಮಕ ಸ್ವರೂಪದ್ದಾಗಿ ಮಾತ್ರ ಕಾಣದೆ ಅದು ಪುನರುತ್ಥಾನವಾದಿ ನೆಲೆಯನ್ನು ಪಡೆದಿತ್ತು. ಈ ಕಾರಣದಿಂದಾಗಿಯೇ ತನ್ನನ್ನು ಅವಲೋಕಿಸಿ ಕೊಳ್ಳುತ್ತಲೇ, ಬಿಡುಗಡೆಗಾಗಿ ನವಮಾರ್ಗವೊಂದನ್ನು ತಾನೆ ಶೋಧಿಸಿಕೊಳ್ಳುವ ಬಗೆಯನ್ನು ಕಾಣಬಹುದಾಗಿದೆ.

ಅವರ 'ಇಂದಿನ ದೇವರು' ಕವಿತೆ ಇಂತಹ ನವಮಾರ್ಗವೊಂದನ್ನು ಮುಂದಿಡುತ್ತದೆ.

"ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಭಾರ!
ಭಾರತಿಯೇ ನಮಗಿಂದು ಜೀವನದ ದೇವತೆಯು
ವಿಶ್ವರೂಪಿಣಿಯವಳು, ವಿಶ್ವ ಮುಖಿಯೈ !
ನಮ್ಮೆಲ್ಲರಂಗಗಳೇ ನಮ್ಮಂಬೆಯಂಗವು
ನಮ್ಮ ಸ್ವಾತಂತ್ರ್ಯದೊಳೆ ನಮ್ಮಮ್ಮ ಸುಖಿಯೈ" [೧೧] (ಇಂದಿನ ದೇವರು)

ಕುವೆಂಪು ಅವರ ಬಹಳ ಜನಪ್ರಿಯ ಕವಿತೆಗಳಲ್ಲಿ 'ಇಂದಿನ ದೇವರು' ಕೂಡ ಒಂದು. ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಜನರಿಗೆ ಹೋರಾಟದ ಗುರಿಯನ್ನು ಸ್ಪಷ್ಟಗೊಳಿಸಬೇಕಾಗಿತ್ತು. ಭಾರತಮಾತೆಯ ಬಿಡುಗಡೆಗಾಗಿ ನಡೆಯುವ ಹೋರಾಟದ ಪ್ರಾಮುಖ್ಯತೆಯನ್ನು ತಿಳಿಸಿಕೊಡಬೇಕಾಗಿತ್ತು. ಈ ಹಿನ್ನೆಲೆಯಿಂದಲೇ ಭಾರತೀಯರಿಗೆ ವರ್ತಮಾನದ ಅವಶ್ಯಕತೆ ಭಾರತಮಾತೆಯ ಬಿಡುಗಡೆಯೇ ಹೊರತು ಇನ್ನುಳಿದ ಯಾವುದೇ ದೇವದೇವಿಯರಲ್ಲ. ಪರಕೀಯ ದಾಸ್ಯದ ಹಿಡಿತದಲ್ಲಿ ನಲುಗುತ್ತಿರುವ ಭಾರತವನ್ನು ದಾಸ್ಯದಿಂದ ಬಿಡುಗಡೆಗೊಳಿಸಬೇಕಾದುದೇ ಮೊದಲ ಆದ್ಯತೆ. ಈ ಉದ್ದೇಶ ಈಡೇರಬೇಕಾದರೆ ಜನರ ಮನಸ್ಸು ಇದರ ಕಡೆಗೆ ಕೇಂದ್ರೀಕರಣವಾಗಬೇಕು. ಅದಕ್ಕಾಗಿಯೇ ಭಾರತೀಯರ ಮನಸ್ಸನ್ನು ಸೆಳೆಯಬಹುದಾಗಿದ್ದ ಉಳಿದೆಲ್ಲಾ ಪೂಜೆಯನ್ನು, ದೇವ-ದೇವಿಯರನ್ನು ಕೆಲ ಕಾಲದ ಮಟ್ಟಿಗೆ ದೂರ ಮಾಡಬೇಕು ಎಂಬುದು ಕವಿಯ ಆಶಯ. ದೇಶ ಮತ್ತು ಧರ್ಮದ ನಡುವೆ ಅನಿವಾರ್ಯ

ಸಂದರ್ಭದಲ್ಲಿ ಮೊದಲ ಆಯ್ಕೆ ದೇಶವೇ ಎಂಬುದು ಇಲ್ಲಿನ ಆಶಯ. ಹಾಗಾಗಿ ಕವಿ 'ಭಾರತಿಯೇ ನಮಗಿಂದು ಜೀವನದ ದೇವತೆಯು' ಎಂದು ಹೇಳುತ್ತಾರೆ. ಉಳಿದ ನೂರು ದೇವತೆಗಳನ್ನು ದೂರ ನೂಕಿ ಎನ್ನುವುದು ಸದ್ಯದ ಸಂದರ್ಭದಲ್ಲಿ ಭಾರತದ ಬಿಡುಗಡೆಗಿಂತ ಬೇರೆ ಯಾವುದೂ ಮುಖ್ಯವಲ್ಲ ಎನ್ನುವುದನ್ನು ಸೂಚಿಸುತ್ತದೆ. 'ಇಂದಿನ ದೇವರು' ಕವಿತೆಗೆ ಒಂದು ಸಾಮಾಜಿಕ ಪ್ರಾಮುಖ್ಯತೆಯೂ ಇದೆ. ಮಧ್ಯಯುಗದ ಭಾರತದ ಸಾಮಾಜಿಕ ಇತಿಹಾಸದ ಅವಲೋಕನ ಮಾಡಿದರೆ ಅಲ್ಲಿ ಕಾಣುವ ಒಂದು ಸಂಗತಿ ಎಂದರೆ ಭಾರತೀಯರಲ್ಲಿನ ಆಂತರಿಕ ಕಚ್ಚಾಟ. ಅದು ಅಧಿಕಾರದ ರಾಜಕಾರಣದ ಕಚ್ಚಾಟವಲ್ಲ. ಮತಗಳ ನಡುವೆ, ದೇವರ ಹೆಸರಿನ ನಡುವೆ ನಡೆದ ಕಚ್ಚಾಟ. ಭಾರತ ಆಕ್ರಮಣಕಾರಿಗಳ ಕೈವಶವಾಗುವಲ್ಲಿ ಭಾರತೀಯರ ಇಂತಹ ದೌರ್ಬಲ್ಯಗಳ ಪಾತ್ರವೂ ಇತ್ತು. ಇದರ ಅರಿವಿದ್ದ ಕವಿಗೆ ಭಾರತೀಯರನ್ನು ಹತ್ತಿರ ತರಲು ಅಡ್ಡಿಯಾಗಿರುವ ಸಂಗತಿಗಳಲ್ಲಿ ಈ ನೂರಾರು ದೇವರುಗಳ ಕಲ್ಪನೆಯು ಒಂದು ಮುಖ್ಯ ಸಂಗತಿಯಾಗಿದ್ದು, ಈ ವೈರುಧ್ಯ, ಭೇದಗಳನ್ನು ಮೀರಿ ಜನ ಒಂದಾಗಬೇಕಾದರೆ ಈ ಹಲವು ದೇವರುಗಳನ್ನು ಮೀರಿದ, ಅದಕ್ಕೆ ಮಿಗಿಲಾದ ಒಂದು ದೇವತೆಯ ಕಲ್ಪನೆಯೂ ಅಗತ್ಯವಾಗಿತ್ತು. ಹಾಗೆಂದು ಇದು ಸಂಕುಚಿತ ನೆಲೆಯ ಗ್ರಹಿಕೆ ಅಲ್ಲ. ಆ ಭಾರತಮಾತೆ ವಿಶ್ವರೂಪಿಣಿಯೂ, ವಿಶ್ವಮುಖಿಯೂ ಹೌದು. ಇಲ್ಲಿ ಭಾರತಮಾತೆ ತಾಯಿಯೂ ಹೌದು. ದೇವಿಯೂ ಹೌದು. ಪೋಷಕಿಯೂ ಹೌದು, ರಕ್ಷಕಿಯೂ ಹೌದು. ತಾಯಿಯ ಸುಖ ಅದು ಮಕ್ಕಳ ಸ್ವಾತಂತ್ರ್ಯದಲ್ಲಿದೆ. ಅಂತಹ ಸ್ವಾತಂತ್ರ್ಯದ ಸಂಪಾದನೆ ಎಂದರೆ, ಅದು ತಾಯಿಯನ್ನು ಸುಖಿಯಾಗಿಡುವ ಮಾರ್ಗವೂ ಹೌದು. ಈ ಅರ್ಥದಲ್ಲಿ ಇದು ಕವಿಯ ಬಹುಮುಖ್ಯ ಕವಿತೆಗಳಲ್ಲಿ ಒಂದು.

ಇದು ಸದ್ಯದ ಭಾರತೀಯ ಸಂದರ್ಭದಲ್ಲಿ ಒಂದು ನವಮಾರ್ಗ. ಒಂದು ವೇಳೆ, ಜಗತ್ತಿನ ಅನೇಕ ದೇಶಗಳಂತೆ ಇಲ್ಲಿಯೂ ಏಕದೇವತೆಯ ಕಲ್ಪನೆ ಇದ್ದಿದ್ದರೆ ಹೀಗೆ ಹೇಳಬೇಕಾದ ಪ್ರಸಂಗ ಬರುತ್ತಿರಲಿಲ್ಲ. ಬಹು ದೇವತಾ ಆರಾಧನೆ ಎನ್ನುವುದು ನಮ್ಮ ಅನೈಕ್ಯತೆಗೂ ಕಾರಣವಾಗಿದ್ದು, ಇಂತಹ ಸಂದರ್ಭದಲ್ಲಿ ಸರ್ವರಿಗೂ ಸಮ್ಮತವಾದ ಒಂದು ದೇವತೆಯ ಕಲ್ಪನೆಯು ಅಗತ್ಯವೆಂದು ಭಾವಿಸಿದ ಕವಿ, ಈ ಒಂದು ದೇವತೆಯನ್ನು ಆ ನೂರಾರು ದೇವತೆಗಳ ಸರದಿಯಿಂದ ಒಂದನ್ನು ಆಯ್ದು ಕೊಳ್ಳದೆ ದೇಶವನ್ನು ದೇವರನ್ನಾಗಿ ಮುಂದಿಡುವುದು ವಿಶಿಷ್ಟವಾಗಿದೆ. ದೇಶವೇ ಪ್ರಧಾನ ಸ್ಥಾನದಲ್ಲಿ

ನಿಲ್ಲುವುದರ ಮೂಲಕ ನಮ್ಮ ಒಳಗಿನ ಒಡಕು, ಅನೈಕ್ಯತೆಯನ್ನು ಇದರ ಎದುರು ಪರಿಹರಿಸಿಕೊಳ್ಳಬಹುದು ಎಂಬ ಆಶಯ ಇಲ್ಲಿ ವ್ಯಕ್ತವಾಗಿದೆ.

'ರಾಷ್ಟ್ರ ಪುನರ್ ನಿರ್ಮಾಣ' ಎನ್ನುವುದು ೧೯ನೇ ಶತಮಾನದ ಬಹಳ ಮುಖ್ಯ ಘೋಷಣೆಯಾಗಿತ್ತು. ಗುಲಾಮಿತನದಿಂದ ಬಿಡುಗಡೆಗೊಳ್ಳುವುದೇ 'ರಾಷ್ಟ್ರ ಪುನರ್ ನಿರ್ಮಾಣ'ದ ಪ್ರಕ್ರಿಯೆಯ ದಾರಿಯಾಗಿತ್ತು. ಕನ್ನಡದ ಸಂದರ್ಭದಲ್ಲಿ 'ರಾಷ್ಟ್ರ' 'ರಾಷ್ಟ್ರೀಯತೆ'ಯ ಸಮಗ್ರ ನಿರೂಪಣೆಯು ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದ ಹಿನ್ನೆಲೆಯಿಂದಲೇ ನಡೆದಿರುವುದನ್ನು ಗಮನಿಸಬೇಕು. ರಾಷ್ಟ್ರೀಯ ಪ್ರಜ್ಞೆಯ ಅರಿವಾಗಲಾರಂಭಿಸಿದ್ದೆ ಗುಲಾಮಿತನದ ಕಾಲಘಟ್ಟದಲ್ಲಿ. ತಮ್ಮದೇ ನೆಲದಲ್ಲಿ ಅನುಭವಿಸಿದ ಪರಕೀಯತೆಯ ಅನುಭವದಿಂದ ಈ ವಸಾಹತುಶಾಹಿಯಿಂದ ಬಿಡುಗಡೆಗೊಳ್ಳಬೇಕಾದರೆ ಅದರ ವಿರುದ್ಧ ತೀವ್ರ ಸ್ವರೂಪದ ಹೋರಾಟ ಅನಿವಾರ್ಯವಾಗಿತ್ತು. ವಸಾಹತುಶಾಹಿ ಶಕ್ತಿ ಎನ್ನುವುದು ಅಮಾನುಷ ಕ್ರೌರ್ಯದ ಪ್ರತಿರೂಪವೇ ಆಗಿರುವುದರಿಂದ ಇಂತಹ ಕ್ರೂರ ಹಿಡಿತದಿಂದ ಪಾರಾಗಬೇಕಾದರೆ ಹೋರಾಟಗಾರರು ತಮ್ಮ ಆತ್ಮಾರ್ಪಣೆಗೂ ಸಿದ್ದವಾಗಿರಬೇಕಾದ ಅನಿವಾರ್ಯತೆ ಇತ್ತು. ಈ ಹಿನ್ನಲೆಯಿಂದಲೇ ಕುವೆಂಪು ಅವರ 'ರಕ್ತತರ್ಪಣ' ಕವಿತೆಯನ್ನು ನೋಡಬೇಕು. ಇಲ್ಲಿ 'ರಕ್ತತರ್ಪಣ' ಎನ್ನುವುದು ಕೇವಲ ಸಾಂಕೇತಿಕವಷ್ಟೇ ಅಲ್ಲ. ಅನಿವಾರ್ಯವೂ ಹೌದು.

"ತನಿಯೆರೆಯಿರೈ ನಿಮ್ಮ ಎದೆ ನೆತ್ತರನು ಬಸಿದು
ಸ್ವಾತಂತ್ರ್ಯ ದೇವತೆಯ ತೃಷಿತ, ಮುಖಕೆ
ಇಂದು ಭಾರತಿ ಹಡೆದಳಲ್ತು ನಿಮ್ಮನು ಸುಖಕೆ
ಪಶುಗಳೈ ನೀವೆಲ್ಲರ ಮೃತ ಮಖಕೆ!" [೧೨] (ರಕ್ತತರ್ಪಣ)

ರಾಷ್ಟ್ರ ವಾಸಿಗಳನ್ನು ಹೋರಾಟಕ್ಕೆ ಸ್ಫೂರ್ತಿಗೊಳ್ಳುವಂತೆ ಮಾಡುವ ಅನಿವಾರ್ಯತೆ ಆಗ ಇತ್ತು. ಇದಕ್ಕಾಗಿ ಬೇರೆ ಬೇರೆ ರೂಪದಲ್ಲಿ ಹೋರಾಟದ ಕೆಚ್ಚನ್ನು, ವೀರಾವೇಶವನ್ನು ಮೂಡಿಸಲಾಗುತ್ತಿತ್ತು. 'ರಕ್ತತರ್ಪಣ' ಕವಿತೆ ಈಗಾಗಲೇ ರಾಷ್ಟ್ರಕ್ಕಾಗಿ ಬಲಿದಾನ ಮಾಡಿದ ವೀರರ ಆತ್ಮಗಳು ತಮ್ಮ ಸಹೋದರರಂತಿರುವ ದೇಶವಾಸಿಗಳನ್ನು ಉದ್ದೇಶಿಸಿ ಹೋರಾಟಕ್ಕೆ ಕರೆಯುವ ಮಾದರಿಯಲ್ಲಿದೆ. ತಮ್ಮ ಬಲಿದಾನ ವ್ಯರ್ಥವಾಗದಿರಬೇಕಾದರೆ, ತಮ್ಮ ನಂಬುಗೆ ಸುಳ್ಳಾಗದಿರಬೇಕಾದರೆ. ಎಲ್ಲರೂ

ಹೋರಾಟಕ್ಕೆ ಸಿದ್ಧರಾಗಬೇಕು ಎಂಬ ಆಗ್ರಹ ಇಲ್ಲಿದೆ. ಸ್ವಾತಂತ್ರ್ಯ ದೇವತೆಗೆ ತನಿಯನ್ನು ಎರೆಯಬೇಕಾಗಿದ್ದು ಅದು ಹೋರಾಟಗಾರರ ಎದೆಯ ನೆತ್ತರಿನಿಂದಲೇ ಆಗಬೇಕು ಎನ್ನುತ್ತಾರೆ. ಭಾರತದಲ್ಲಿ ಈ ಹೊತ್ತಿನಲ್ಲಿ ನಿಮಗೆ ಸಿಕ್ಕಿದ ಜನ್ಮ ನಿಮ್ಮ ಸುಖಕ್ಕಾಗಿ ಅಲ್ಲ, ಎಂಬ ಮಾತು ಹೋರಾಟದ ಕಾಲಘಟ್ಟದಲ್ಲಿ ತಮ್ಮ ಸ್ವಂತ ಬದುಕಿನ ಸುಖವನ್ನಷ್ಟೇ ಬಯಸುತ್ತಾ ಹೋರಾಟದಿಂದ ಹೊರಗುಳಿದಿದ್ದ ಜನಗಳನ್ನು ಚುಚ್ಚುತ್ತಿದೆ. 'ರಕ್ತ ಹೃದಯದ ಬಿಸಿಯ ರಕ್ತತರ್ಪಣವಿತ್ತು ತಣಿಸಿರೈ ಸತ್ತರಾ ಬಯಕೆ ತೆತ್ತು' ಎಂದು ಹೇಳುವಾಗ ಸತ್ತವರ ಬಯಕೆಯನ್ನು – ಈಡೇರಿಸಬೇಕು ಎಂಬ ಅಪೇಕ್ಷೆ ಇದೆ. ವ್ಯಕ್ತಿ ಸುಖ ಮತ್ತು ಸಮಷ್ಟಿ ಹಿತ ಈ ಪ್ರಶ್ನೆ ಸಮುದಾಯದ ಸಂಕಷ್ಟದ ಕಾಲದಲ್ಲಿ ಪ್ರಧಾನ ನೆಲೆಗೆ ಬಂದು ನಿಲ್ಲುತ್ತದೆ. ಆಯ್ಕೆ ಯಾವುದಿರಬೆಕು? ಎಂಬ ಪ್ರಶ್ನೆಯಾಗಿ ಮುಂದೆ ಬರುತ್ತದೆ. ಸಮಾಜವು ಕಷ್ಟದಲ್ಲಿರುವ ಸಂದರ್ಭದಲ್ಲಿ ವ್ಯಕ್ತಿಗತ ಸುಖವನ್ನು ನಿರಾಕರಿಸಿ ಸಮಷ್ಟಿಯ ಹಿತವನ್ನು ಬಯಸುವವರಾಗಬೆಕು. ಹಾಗಾಗದಿದ್ದರೆ ಅದು ಪಶುಸದೃಶ ಬದುಕಾಗುತ್ತದೆ. ಕವಿ ಇಲ್ಲಿ ರಾಷ್ಟ್ರ ಸ್ವಾತಂತ್ರ್ಯವನ್ನು ಪಡೆಯುವ ಹೊತ್ತಿನಲ್ಲಿ ವ್ಯಕ್ತಿಯ ಬದುಕಿನ ಆಯ್ಕೆಯ ಬಗೆಗೆ ಮಾತನಾಡುತ್ತಾರೆ. ಕವಿಭಾವವನ್ನು ಇಲ್ಲಿ ಸರಿಯಾಗಿ ಗ್ರಹಿಸಿಕೊಳ್ಳಬೇಕು. ಇಲ್ಲವಾದರೆ ನಮ್ಮ ಸಂದರ್ಭದಲ್ಲಿ ಸಂಘಟನೆಗಳ ಹಿತವನ್ನೇ ಸಮುದಾಯದ ಹಿತವೆಂಬಂತೆ ಬಿಂಬಿಸಿ, ಆಧುನಿಕ 'ಹುತಾತ್ಮ'ರನ್ನು ಸೃಷ್ಟಿಸಿ ಬಿಡುವ ಹುನ್ನಾರಗಳಿಂದ ಭಿನ್ನವಾಗಿ ನೋಡಲು ಸಾಧ್ಯವಾಗದು.

ವಸಾಹತುಶಾಹಿಯ ವಿರುದ್ಧ ಹೋರಾಡುವುದು ಆ ಸಂದರ್ಭದ ಅವಶ್ಯಕತೆಯಾಗಿತ್ತು. ಈ ಬಗೆಯ ಹೋರಾಟಕ್ಕೆ ಬೇಕಾದ ಮನಸ್ಥಿತಿಯನ್ನು ಜನರಲ್ಲಿ ಮೂಡಿಸಲು ಈ ಕವಿತೆ ಒಂದು ಸಾಧನವಾಗಿದೆ. ರಾಷ್ಟ್ರದ ಬಿಡುಗಡೆಯ, ಆ ಮೂಲಕ ರಾಷ್ಟ್ರ ಪುನರ್ ನಿರ್ಮಾಣದ ಕಾರ್ಯದಲ್ಲಿ ಎಲ್ಲರೂ ಕೈ ಜೋಡಿಸಬೇಕಾಗಿದೆ. ಹಾಗೂ ಆಗ ಮಾತ್ರ ಈ ಹಿಂದಿನ ಹೋರಾಟಗಾರರು ಮಾಡಿದ ಬಲಿದಾನ, ತ್ಯಾಗಗಳಿಗೆ ಅರ್ಥ ಬರುವುದು ಎಂಬ ಸಂಗತಿಯನ್ನು ಈ ಕವಿತೆಯೊಳಗೆ ಹೇಳುತ್ತಾರೆ.

ವಸಾಹತುಶಾಹಿಯ ದಮನಕಾರಿ ಪ್ರವೃತ್ತಿಯ ವಿರುದ್ಧ ಆತ್ಮಾರ್ಪಣೆಗೂ ಹಿಂಜರಿಯದೆ ಹೋರಾಟಕ್ಕೆ ಸಿದ್ಧಗೊಳ್ಳುತ್ತಿದ್ದುದು ಅಸಹಜವೇನಲ್ಲ. "ತನ್ನ ರಾಷ್ಟ್ರ ,ತನ್ನ ಬದುಕು, ತನ್ನ ಸಾಂಸ್ಕೃತಿಕ ಅನನ್ಯತೆಗಳಿಗೆ ಧಕ್ಕೆ ಒದಗಬಾರದೆಂಬ ಸ್ವಾಭಿಮಾನ ಎಲ್ಲರಿಗೂ ಇರುವುದು ಸ್ವಾಭಾವಿಕ. ತನ್ನ ಸಾಂಸ್ಕೃತಿಕ ಅನನ್ಯತೆಗಳಿಗೆ ಮಾರಕವಾಗುವ

ಯಾವುದೇ ಶಕ್ತಿಯ ವಿರುದ್ಧ ಅಂಥ ಸ್ವಾಭಿಮಾನ ಮುಖಾಮುಖಿಯಾಗುವುದು ಕೂಡ ಸಹಜವೆ ."[೧೩] ಅಂದರೆ ಈ ಸ್ವಾಭಿಮಾನಕ್ಕಾಗಿಯೇ ಬಲಿದಾನವು ಹೋರಾಟದ ಕಾಲದಲ್ಲಿ ಒಂದು ಮೌಲ್ಯವಾಗಿ, ವೈಭವಿಕರಿಸಲ್ಪಡುವುದು. ಕವಿಯೂ ಈ ಭಾವದಿಂದ ಹೊರತೇನಲ್ಲ. ಸಮಾಜದಲ್ಲಿ ಇಂತಹ ಮೌಲ್ಯಗಳನ್ನು ಬಿತ್ತುವ ಪ್ರಕ್ರಿಯೆಯಲ್ಲಿ ಕವಿಗಳೂ ಭಾಗಿಯಾಗಿರುತ್ತಾರೆ. ಕುವೆಂಪು ಕವಿತೆಗಳನ್ನು ನೋಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಹೋರಾಟಕ್ಕೆ ಅಗತ್ಯವಾದ ಒಂದು ಬೌದ್ಧಿಕ ಸ್ತರದ ಸಿದ್ಧತೆಯಾಗಿ ಈ ಕವನಗಳು ಮೂಡಿ ಬಂದಿವೆ.

ಕನ್ನಡಿಗರಿಗೆ 'ಹಂಪಿ'ಯು ಸಾಂಸ್ಕೃತಿಕ ಕೇಂದ್ರಸ್ಥಾನದಂತಿದೆ. ವಿಜಯನಗರ ಮರೆಯಲಾಗದ ಸಾಮ್ರಾಜ್ಯವಾಗಿದೆ. ಈ ಸಾಮ್ರಾಜ್ಯದ ಸ್ಮರಣೆಯು ಮತ್ತೆ ಕಟ್ಟಬೇಕಾದ ಭಾರತ ಸ್ವರಾಜ್ಯದ ಹಿಂದಿನ ಪ್ರೇರಣೆಯಾಗುತ್ತದೆ. ಈ ಸಾಮ್ರಾಜ್ಯದ ನಿರ್ಮಾಣದ ಹಿಂದೆ ಒಂದು ಬಗೆಯ ನಿರ್ದಿಷ್ಟ ಧಾರ್ಮಿಕ ಹಾಗೂ ಚಾರಿತ್ರಿಕ ಕಾರಣಗಳಿವೆ. ಹೀಗಾಗಿಯೇ ಕರ್ನಾಟಕದ ಸಂದರ್ಭದಲ್ಲಿ ಜನರನ್ನು ಜಾಗೃತಗೊಳಿಸಲು ಇಲ್ಲಿನ ಸಂಕೇತ, ಪ್ರತೀಕಗಳನ್ನು ಬಳಸಿ ಕೊಳ್ಳಲಾಗುತ್ತದೆ.

ವಿಮರ್ಶಕರಾದ ಡಾ. ಡಿ.ಆರ್.ನಾಗರಾಜ್ ಅವರು ಗುರುತಿಸುವಂತೆ "ಆಧುನಿಕ ರಾಷ್ಟ್ರ ನೆನಪುಗಳ ನಿರ್ಮಿತಿ. ನೆನಪುಗಳ ಸಂಘಟನೆಯಿಂದಾಗಿ 'ರಾಷ್ಟ್ರ' ಹುಟ್ಟುತ್ತದೆ. ಭಾಷೆ, ಧರ್ಮ, ಸಂಸ್ಕೃತಿಗಳ ನೆಲೆಗಳಲ್ಲಿ ಜನಾಂಗವೊಂದರ ನೆನಪುಗಳನ್ನು ಆಯುವ ಮತ್ತು ಪುನರ್ ಸಂಘಟಿಸುವ ಒಂದು ಮಹಾನ್ ಪ್ರಕ್ರಿಯೆಯಾಗಿ 'ರಾಷ್ಟ್ರ' ನಿರ್ಮಾಣವಾಗುತ್ತದೆ. ಹೀಗೆ 'ರಾಷ್ಟ್ರ'ದ ಕಟ್ಟುವಿಕೆಯು ಎಲ್ಲೊ ಬಿಡಿಬಿಡಿಯಾಗಿ, ಬೇರೆ ಬೇರೆ ಚೌಕಟ್ಟು ಮತ್ತು ಹಂದರಗಳಲ್ಲಿ ಮತ್ತು ವ್ಯವಸ್ಥೆಗಳಲ್ಲಿ ಅಡಕವಾಗಿದ್ದ ಹಾಗೂ ಚದುರಿಹೋಗಿದ್ದ ನೆನಪುಗಳನ್ನು ಒಂದು ನಿರ್ದಿಷ್ಟ ಸೂತ್ರಕ್ಕೆ ಪೋಣಿಸಲಾಗುತ್ತದೆ. ಹಳೆಯ ಸಂಗತಿಗಳನ್ನು ಹೊಸ ಅರ್ಥ ಮತ್ತು ಆಶಯಗಳಿಗೆ ತಕ್ಕಂತೆ ಜೋಡಿಸಿದಾಗ ಆಕಾರಗಳು ಹುಟ್ಟುತ್ತವೆ. ಹಳೆಯ ಸಾಂಸ್ಕೃತಿಕ, ಧಾರ್ಮಿಕ ನೆನಪುಗಳು ಹೊಸ ರಾಜಕೀಯ ಉದ್ದೇಶಗಳಿಗೆ ಅನುಗುಣವಾಗಿ ದುಡಿಯುತ್ತದೆ. ಹೀಗಾಗಿ ಆಧುನಿಕ ಸಮಾಜಗಳ ಎಲ್ಲ ಸಾಂಸ್ಕೃತಿಕ ಐಡೆಂಟಿಟಿಗಳೂ ನೆನಪುಗಳ ಪುನರ್ ಸಂಘಟನೆಯೇ. ಭಾರತ ರಾಷ್ಟ್ರೀಯತೆಯ ಉಗಮವೂ ಹೀಗೆಯೆ. ಕನ್ನಡ ರಾಷ್ಟ್ರೀಯತೆಯ ಉಗಮವೂ ಹೀಗೆಯೇ ."[೧೪] ಡಾ.ಡಿ.ಆರ್. ನಾಗರಾಜ್ ಆಧುನಿಕ ಪೂರ್ವದ ರಾಷ್ಟ್ರಕ್ಕಿಂತ ಆಧುನಿಕ

ರಾಷ್ಟ್ರ ಹೇಗೆ ಭಿನ್ನವಾಗಿ ಪ್ರಭುತ್ವದ ರೂಪವನ್ನು ತಳೆಯುತ್ತದೆ ಎನ್ನುವುದರ ಕುರಿತು ಚರ್ಚಿಸಿದ್ದಾರೆ. 'ನೆನಪುಗಳ ನಿರ್ಮಿತಿ' ಯಾಗುವ ಅನಿವಾರ್ಯತೆ ಏನು? ಎನ್ನುವುದನ್ನು ಗಮನಿಸಿಬೇಕು. ವರ್ತಮಾನ ಆತ್ಮಹೀನವಾಗಿ, ಕುಸಿದುಹೋಗಿರುವಾಗ ಅದೇ ನೆನಪಿನಲ್ಲಿ ರಾಷ್ಟ್ರವೊಂದು ಮೇಲೆಳಲಾರದು. ಅಂತಹ ಸಂದರ್ಭದಲ್ಲಿ ವರ್ತಮಾನದ ಬೇಸರವನ್ನು ಮರೆಸಬಲ್ಲ, ಕಾರ್ಯೋನ್ಮುಖರಾಗುವುದಕ್ಕೆ ಪ್ರೇರಣೆ ನೀಡಬಲ್ಲ ಸಂಗತಿಗಳು ಯಾವುದು ಎಂಬ ಹುಡುಕಾಟ ಬುದ್ಧಿಯ ಸ್ತರದಲ್ಲಿ ನಡೆಯುತ್ತದೆ. ವಸಾಹತುಶಾಹಿ ಪ್ರಭುತ್ವದ ಶಕ್ತಿಯನ್ನು ಮೀರಿಸಬಹುದಾದ ರಚನೆಗಳು ತಮ್ಮ ಗತದಲ್ಲಿವೆಯೋ ಅದನ್ನು ಮುಂದುಮಾಡಿ ವಸಾಹತುಶಾಹಿಯನ್ನು ಎದುರಿಸುವ ತಂತ್ರವಿದು. ಇಲ್ಲಿ 'ಆಯ್ಕೆ' ಮತ್ತು 'ಜೋಡಣೆ'ಯ ಪ್ರಕ್ರಿಯೆಯೊಂದಿದೆ. ಸಮೂಹದ ಸ್ಮೃತಿಯಿಂದ ನಷ್ಟವಾಗಿ ಹೋದ ಒಂದು 'ಭಾವಿತ ಚರಿತ್ರೆ' ಯನ್ನು ಕಟ್ಟಿ ಅದನ್ನು ಸಮೂಹದ ಮುಂದೆ 'ನಿಜ ಚರಿತ್ರೆ'ಯಾಗಿ ಮಂಡಿಸಲಾಗುತ್ತದೆ. ಕನ್ನಡ ಕಾವ್ಯದೊಳಗೆ ಇಂತಹ ಕ್ರಿಯೆ-ಪ್ರಕ್ರಿಯೆಗಳ ಅನೇಕ ನಿದರ್ಶನವಿದೆ. ಹೀಗೆ ಮಾಡುವ ಮೂಲಕ ಪೂರ್ವದ ಗತದೊಳಗೆ ವರ್ತಮಾನದ ಪಶ್ಚಿಮವನ್ನು ಮೀರಿಸಬಲ್ಲ ಅನೇಕ ಜೀವಂತ ಸಂಗತಿಗಳಿವೆ ಎಂಬ ಅರಿವೊಂದು ಕೆಲಸ ಮಾಡುತ್ತಿರುತ್ತದೆ. ಕುವೆಂಪು ಅವರಲ್ಲಿ 'ಹಂಪಿ'ಯು ಇಂತಹ ಅನೇಕ ನೆನಪುಗಳನ್ನು ಹುಟ್ಟುಹಾಕುತ್ತದೆ. 'ಹಂಪಿ'ಯೇ ಯಾಕೆ ಈ ಸ್ಮೃತಿಯ ಭಾಗವಾಗುವುದು? ಎಂಬ ಪ್ರಶ್ನೆ ಉಂಟಾಗಬಹುದು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಹಂಪಿಗೆ ಒಂದು ಸಾಮ್ರಾಜ್ಯದ ಮುಖ ಇದೆ, ಒಂದು ಸಾಂಸ್ಕೃತಿಕ ಮುಖ ಇದೆ, ಹಂಪಿಗೆ ಒಂದು ಧಾರ್ಮಿಕ ಮುಖವೂ ಇದೆ. ಬ್ರಿಟಿಷ್ ಸಾಮ್ರಾಜ್ಯವನ್ನು ಎದುರಿಸುವುದಕ್ಕೆ ಭಾರತೀಯರ ಒಂದು ಸಾಮ್ರಾಜ್ಯವಾಗಿ 'ಹಂಪಿ'ಯನ್ನು ಬಳಸಲಾಗುತ್ತದೆ. ವಸಾಹತುಶಾಹಿಯನ್ನು ಎದುರಿಸುವುದಕ್ಕೆ ಸಾಮ್ರಾಜ್ಯದ ಮುಖವಾಡವೂ ಬೇಕಾಗಿತ್ತು. ಸಾಂಸ್ಕೃತಿಕ ಮುಖವಾಡವೂ ಬೇಕಾಗಿತ್ತು. ಇವು ಹಂಪಿಯಲ್ಲಿ ಇತ್ತು ಎಂದು ಭಾವಿಸಿ ಅದನ್ನು ಕವಿ ವರ್ತಮಾನದ ನಿಷ್ಕ್ರಿಯತೆಯನ್ನು ಮೀರಲು ಒಂದು ಮಾಧ್ಯಮವಾಗಿ ಬಳಸುತ್ತಾರೆ. ವರ್ತಮಾನದ ಸವಾಲಿಗೆ ಗತದಿಂದ ಉತ್ತರವನ್ನು ಪಡೆದು ಮಂಡಿಸುವ ಬಗೆಯಿದು. ಸಾಮ್ರಾಜ್ಯವಾಗಿದ್ದ ಹಂಪಿ ಕಾಲದ ಹೊಡೆತಕ್ಕೆ ಸಿಕ್ಕಿ ಹಾಳಾಗಿ ಹೋಗಿತ್ತು. ಹಂಪಿಯನ್ನು ನೋಡಲು ಬರುವ ಯಾತ್ರಿಕರ ಪಾಲಿಗೆ ಅದು ಸಾಮ್ರಾಜ್ಯವೇನಲ್ಲ. ಹಂಪಿ ಅಷ್ಟೇ. ವಸಾಹತುಶಾಹಿಯ ಪ್ರವೇಶ ಇಲ್ಲಿನ ಅನೇಕ ವಸ್ತು ಸಂಗತಿಗಳಿಗೆ ಹೊಸ ಅರ್ಥವನ್ನು ನೀಡಲಾರಂಬಿಸಿತು. ಹಂಪಿ ಅಷ್ಟೇ

ಆಗಿ ಉಳಿದಿದ್ದ ಸ್ಥಳ ವಸಾಹತುಶಾಹಿ ಅನುಭವದ ಎದುರು ಮರೆತುಹೋದ ಸಾಮ್ರಾಜ್ಯವಾಗುತ್ತದೆ. ಈ ಮರೆವನ್ನು ಕಳೆದುಕೊಂಡು ಮತ್ತೆ ಸ್ಮೃತಿಗೆ ಬರುವಾಗ ಅದು ಹೊಸ ನೆನಪಾಗಿ ದಾಖಲಾಗುತ್ತದೆ. ಕೇವಲ ಒಂದು ಐತಿಹಾಸಿಕ ಸ್ಥಳವಾಗಿದ್ದುದು ಪತನಗೊಂಡ ರಾಷ್ಟ್ರದ ಸಂಕೇತವಾಗಿ, ವಸಾಹತುಶಾಹಿ ಪ್ರಭುತ್ವವನ್ನು ಎದುರಿಸಲು ಸಾಂಸ್ಕೃತಿಕ ಅಸ್ತ್ರವಾಗಿ ಬಳಕೆಯಾಗುತ್ತದೆ. ಬರಿದೇ ಯಾತ್ರಿಕರಾಗಿ ಹೋಗಿ ಬರುವ ಜನಗಳನ್ನೇ 'ಹೋರಾಟದ ವೀರರನ್ನಾಗಿಸಲು', ಅವರಲ್ಲಿ ರಾಷ್ಟ್ರದ ನೆನಪುಗಳನ್ನು ಹುಟ್ಟಿಸಲು ಸಂಕೇತವಾಗುತ್ತದೆ. ಮುರಿದು ಬಿದ್ದ ಹಂಪಿ, ಹಾಳಾದ ಅದರ ಸಂಪತ್ತು ಯಾತ್ರಿಕರ ಮನಸ್ಸಲ್ಲಿ ನೋವಿನ ಅನುಭವವನ್ನು ಉಂಟುಮಾಡುತ್ತಲೇ, ಈ ಹಿಂದೆ ಒಂದು ಅಭೂತ ಪೂರ್ವ ಸುವರ್ಣಯುಗವೊಂದಿತ್ತು ಎಂಬ ನೆನಪಿನೊಂದಿಗೆ ಮರಳುವಂತೆ ಮಾಡುತ್ತದೆ.

ಕನ್ನಡದ ಸಂದರ್ಭದಲ್ಲಿ ಗತದ ನೆನಪುಗಳನ್ನು ಪುನರ್ ಸಂಯೋಜಿಸಿಕೊಳ್ಳುತ್ತಲೇ 'ರಾಷ್ಟ್ರ' ಪುನರ್ ನಿರ್ಮಾಣಗೊಳ್ಳುತ್ತದೆ. ಕನ್ನಡದ ಸೃಜನಶೀಲ ಬರಹಗಾರರನ್ನು ಗಂಭೀರವಾಗಿ ಕಾಡಿದ ನೆನಪುಗಳಲ್ಲಿ ಒಂದು ಹಂಪಿಯ ವಿಜಯನಗರ ಸಾಮ್ರಾಜ್ಯದ ಗತ ವೈಭವದ್ದು. ಕುವೆಂಪು ಅವರಲ್ಲೂ ಹಂಪಿಯ ನೆನಪು ಕನ್ನಡಿಗರ ಸ್ಫೂರ್ತಿಯಾಗಿ, ಸಾಹಸದ ಪ್ರೇರಣೆಯಾಗಿ ಕೆಲಸಮಾಡಿದೆ. ಕುವೆಂಪು ಅವರು ಬರೆದ 'ಹಂಪೆಯ ಭೀಮ' ಕವಿತೆಯು ಪರಕೀಯ ದಾಸ್ಯಕ್ಕೆ ತಮ್ಮನ್ನು ಒಪ್ಪಿಸಿಕೊಂಡು ಅದನ್ನು ಅವಮಾನವೆಂದು ಭಾವಿಸದೆ ಬದುಕುತ್ತಿರುವ ಸ್ವಾಭಿಮಾನಹೀನ ನಾಗರಿಕನನ್ನೂ ಎಚ್ಚರಿಸುವ, ಆತ್ಮಾಭಿಮಾನವನ್ನು ಕೆಣಕುವ ಕವಿತೆಯಾಗಿದೆ.

> "ಇಲ್ಲಿಗೈತರ ಯಾತ್ರಿಕರ ಎದೆಯ ಮೂಷೆಯಲ್ಲಿ
> ಹಾಳಾದ ಐಸಿರಿಯ ಕಿಚ್ಚ ಮರುಕೊಳಿಸು!
> ಅಣಕಿಸೆಮ್ಮನು, ವೀರ, ಹೆಂಬೇಡಿಗಳು ನಾವು
> ನಿನ್ನ ಗದೆಯಾಘಾತದಿಂದೆಚ್ಚರುವೆವು!
> ಹೇ ವೀರಮೂರ್ತಿಯೇ, ಹಂಪೆಯೀ ಮಸಣದಲಿ
> ಬೈರವಾಶ್ರುವ ಚೆಲ್ಲಿ ಮೌನದಲಿ ನಿಲ್ಲು!
> ಯಾತ್ರಿಕರ ಹೃದಯದಲಿ ಕೆಚ್ಚೂರಿ, ನೆಚ್ಚೂರಿ,
> ಹೆಂಬೇಡಿಗಳನೆಲ್ಲ ನಿನ್ನೆಡೆಗೆ ಗೆಲ್ಲು!" (ಹಂಪೆಯ ಭೀಮ)[೧೫]

ಇಲ್ಲಿಯೂ ಹಂಪೆ ವರ್ತಮಾನದ ದುಃಸ್ಥಿತಿಯನ್ನು ಮೀರಿ ಸ್ಫೂರ್ತಿ ಪಡೆಯುವ ಸಂಕೇತವಾಗಿ ಬಳಸಲಾಗಿದೆ. ಈ ಕವಿತೆಯಲ್ಲಿ ಹಂಪೆಯ ವೈಭವವು ಕಳೆದು ಹೋಗುತ್ತಿರುವ ಜೊತೆಗೆ ಸಾಹಸಿ ಭೀಮನು ಅಳುತ್ತಿರುವ ಚಿತ್ರಣ ಇದೆ. ಕವಿತೆಯಲ್ಲಿ ಕವಿ ಹಂಪೆಯನ್ನು ನೋಡುವುದಕ್ಕೆ ಆಗಮಿಸುವ 'ಯಾತ್ರಿಕರ ಎದೆಯಲ್ಲಿ ಹಾಳಾಗಿ ಹೋಗಿರುವ ಐಸಿರಿಯ ಕುರಿತು ಕೆಚ್ಚು ಮರುಕಳಿಸುವಂತೆ ಮಾಡು, ನಮ್ಮಂತಹ ಹೇಡಿಗಳು ನಿನ್ನ (ಭೀಮನ) ಗದೆಯ ಆಘಾತದಿಂದ ಎಚ್ಚರಗೊಳ್ಳುವಂತೆ ಮಾಡು' ಎಂಬ ಕೋರಿಕೆ ಇದೆ. ಈ ಮೂಲಕ ರಾಷ್ಟ್ರವನ್ನು ಮರೆತು ವಿಸ್ಮೃತಿಗೆ ಸರಿದಿರುವ ಮನಸ್ಸುಗಳಿಗೆ ತಮ್ಮ ಗತವನ್ನು ನೆನಪಿಸಿಕೊಡುವ ಮತ್ತು ವರ್ತಮಾನದಲ್ಲಿ ಇಂತಹ ಉನ್ನತ ಪರಂಪರೆಯೊಂದು ಅಸಹನೀಯ ವೇದನೆಯನ್ನು ಅನುಭವಿಸುತ್ತಿರುವ ಸಂಗತಿಯನ್ನು ಈ ಕವಿತೆ ಮುನ್ನೆಲೆಗೆ ತರುತ್ತಿದೆ.

'ಗೋಮಟೇಶ್ವರ' ಕುವೆಂಪು ಬರೆದ ಪ್ರಮುಖ ಕವಿತೆಗಳಲ್ಲಿ ಒಂದು. ಗೋಮಟೇಶ್ವರ ಶಾಂತಿಯ, ಮೌನದ ಮಹಾಮೂರ್ತಿ. ಈ ಗೋಮಟೇಶ್ವರನನ್ನು ಕುವೆಂಪು ಭಾರತದ ಮೇಲೆ ನಡೆದ ದಾಳಿಗೆ, ಭಾರತೀಯರ ಪರಕೀಯತೆಯ ಆಳ್ವಿಕೆಗೆ ಕಾರಣವಾದ ಸಂಗತಿಗಳ ಹುಡುಕಾಟಕ್ಕೆ ಮತ್ತು ಭಾರತದ ಪತನಕ್ಕೆ ಸಾಕ್ಷಿಯಾಗಿ ಪರಿಭಾವಿಸುತ್ತಾರೆ.

" ಭಾರತಿಗೆ ಪರಕೀಯರೆಸಗಿದನ್ಯಾಯಮಂ
ಕಣ್ಣಾರ ಕಂಡ ನೀಂ ನಿತ್ಯ ಸಾಕ್ಷಿ.
ಆಕೆಯಾಭರಣಮಂ ಮೋಸದಿಂ ಸುಲಿದುದಕೆ
ಬ್ರಹ್ಮನಾಸ್ಥಾನದೊಳು ನೀನೆ ಸಾಕ್ಷಿ.
ಬಲಗೈಯ ಖಡ್ಗದಿಂದೆಡಗೈ ಕೊರಾನಿನಿಂ
ಭಾರತಿಯ ಪೀಡಿಸಿದ ಮುಸಲದಳಮಂ,
ಮೇಲೆ ಕ್ರಿಸ್ತನನಿರಿಸಿಯೊಳಗೆ ಸೈತಾನನಂ
ಮರೆಮಾಡಿ ಹೇಮಾಭಿಲಾಷೆಯಿಂದ
ವಾರಿಧಿಯ ದಾಂಟಿ ಬೇಹಾರಕೈತಂದರಂ,
ಕ್ರಿಸ್ತವೇಷವನಾಂತ ಸೈತಾನನಾಚಾರದಿಂ
ಭಾರತಿಯ ಪಣೆಯಿಂದ ಪದಕಿಳಿದ ಶೋಣಿತಮುಮಂ

ನೋಡಿರುವೆಯದರಿಂದ ಭಾರತಿಗೆ ನೀನೆ ಸಾಕ್ಷಿ !" (ಗೋಮಟೇಶ್ವರ)[೧೬]

ಮತ ಧರ್ಮಗಳನ್ನು ಮುಂದಿಟ್ಟುಕೊಂಡು ಭಾರತವನ್ನು ಆಕ್ರಮಿಸಿಕೊಂಡ ವಿದೇಶಿಯರು ಇಲ್ಲಿ ಬಂದು ಸಂಪತ್ತನ್ನು ದೋಚಿದ್ದರು. ಸಂಪತ್ತನ್ನು ಕೊಳ್ಳೆಹೊಡೆಯುತ್ತಲೇ ಆಡಳಿತಾತ್ಮಕವಾಗಿ ಕೂಡ ಭಾರತವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡರು. ಆ ಮೂಲಕ ಇಡೀ ಭಾರತವೇ ಪರಕೀಯ ವಶವಾಗಬೇಕಾಯಿತು. ಇದೆಲ್ಲದಕ್ಕೂ ಗೋಮಟೇಶ್ವರನನ್ನು ಕವಿ ಸಾಕ್ಷಿಯನ್ನಾಗಿಸುತ್ತಾರೆ. ಈ ಕವಿತೆಯ ಮೂಲಕ ಕವಿ ಭಾರತದ ಪಾರತಂತ್ರ್ಯದ ಕಾರಣವನ್ನು ಶೋಧಿಸಿಕೊಳ್ಳುತ್ತಲೇ ಭಾರತೀಯರ ಮೇಲೆ ಇಂತಹ ಆಕ್ರಮಣಗಳು ಉಂಟುಮಾಡಿದ ಭೀಕರ ಪರಿಣಾಮದ ಕಡೆಗೆ ಗಮನ ಸೆಳೆಯುತ್ತಾರೆ. ಆದರೆ ಇದೆಲ್ಲದಕ್ಕೂ ಸಾಕ್ಷಿಯಾದದ್ದು ಮೌನದ ಮೂರ್ತಿ ಗೋಮಟೇಶ್ವರ. "ಗೋಮಟೇಶ್ವರನ ಶತಮಾನಗಳ ಮೌನ ಮತ್ತು ಅವನ ಮಂದಸ್ಮಿತವು ಏಕೆಂಬ ಪ್ರಶ್ನೆಗಳೊಂದಿಗೆ ಭಾರತಾಂಬೆಯ ಚಾರಿತ್ರಿಕ ಘಟನೆಗಳನ್ನು ಕವಿ ಸಂವೇದನೆ ಮುಂದುಮಾಡುತ್ತದೆ. ಭೂಮಿ ಮತ್ತು ಆಕಾಶಗಳ ಮಧ್ಯೆ ನಡೆದ ನಿತ್ಯ ಸತ್ಯಗಳಿಗೆ ಸಾಕ್ಷಿಯಂತಿರುವ ಗೊಮಟೇಶ್ವರನಿಗೆ, ಆತನ ಮಂದಹಾಸದ ಅರ್ಥಗಳೇನು? ಅಥವಾ ನೆಲದ ಬದುಕಿನ ಅವಿವೇಕವನ್ನು ಕಂಡ ಕರುಣೆಯ ಪರಿಹಾಸವೋ ಅವನ ನಗೆ? ಎಂದು ಪ್ರಶ್ನಿಸುತ್ತಾರೆ. ಅಂಥ ಪ್ರಶ್ನೆಗಳೊಂದಿಗೆ ಪರಕೀಯರ ಆಗಮನದಿಂದಾದ ತಲ್ಲಣಗಳಿಗೆ ಒಳಗಾದ ಸಂವೇದನೆಯು, ಆತನ ಶತಮಾನಗಳ ಅಚಲತೆಯಲ್ಲಿ ಸ್ವಲ್ಪವನ್ನಾದರೂ ನೀಡೆಂದು ಅವನನ್ನು ಪ್ರಾರ್ಥಿಸುತ್ತದೆ. ಚಕ್ರಾದಿಪತ್ಯಗಳ ಮಾತ್ಸರ್ಯದಿಂದ ಸಾಮ್ರಾಜ್ಯಗಳು ಅವನತಿ ಹೊಂದಿ, ಶಾಂತಿಯ ವಾಣಿಗಳೆಲ್ಲ ಮರೆಯಾಗಿ ಲೋಕವೆಲ್ಲ ಕೋಲಾಹಲದಲ್ಲಿ ತುಂಬಿದ ಬಗೆಯನ್ನು ಮೌನದಿಂದ ವೀಕ್ಷಿಸುತ್ತಿರುವ ಗೋಮ್ಮಟನನ್ನು ನೀನಾರು ಮೌನಿವರ್ಯ ಎಂಬ ಪ್ರಶ್ನೆಯನ್ನು ಕೇಳುವ ಮೂಲಕ ಚಾರಿತ್ರಿಕ ಸತ್ಯಗಳಿಗೆ ಕನ್ನಡಿ ಹಿಡಿಯಲಾಗಿದೆ". [೧೭] ಗೋಮಟೇಶ್ವರನನ್ನು ಭೌತಿಕವಾಗಿ ಸಾಕ್ಷಿ ಎಂದು ಹೇಳುತ್ತಲೇ, ಅದೇ ಸಂದರ್ಭದಲ್ಲಿ ಭಾರತೀಯರ ನಿಷ್ಕ್ರೀಯತೆಯನ್ನೂ ಹೇಡಿತನವನ್ನೂ ವ್ಯಂಗ್ಯವಾಗಿ ಹೇಳುತ್ತಾರೆ.

ವಸಾಹತುಶಾಹಿಯಿಂದಾಗಿ ಭಾರತ ಅನುಭವಿಸಿದ ದುಃಸ್ಥಿತಿಯನ್ನು, ಭಾರತ ಎದುರಿಸಿದ ತಲ್ಲಣಗಳನ್ನು ಹಲವು ಕವಿತೆಗಳು ಚಿತ್ರಿಸುತ್ತವೆ. ಈ ತಲ್ಲಣಗಳ ನಡುವೆಯೂ ಕಾವು ಪಡೆಯುತ್ತಿರುವ ಹೋರಾಟದ ಮನೋಭಾವಗಳನ್ನು ಕವಿತೆ ಚಿತ್ರಿಸುತ್ತದೆ. 'ಭಾರತ ತಪಸ್ವಿನಿ' ಕವಿತೆಯಲ್ಲಿ ಭಾರತ ತಪಸ್ವಿನಿಯಾಗಿ ತನಗೊದಗಿರುವ ದುಸ್ಥಿತಿಯಿಂದ

ಮುಕ್ತಿ ಪಡೆದು ಸ್ವತಂತ್ರ ಚಕ್ರವರ್ತಿಣಿಯಾಗಿ ಮೆರೆಯುತ್ತಾಳೆ ಎಂಬ ಆಶಯ ವ್ಯಕ್ತವಾಗುತ್ತದೆ.

" .......ನಾಗರಿಕತೆಯ
ನಾಗಿನಿಯು ಪ್ರಗತಿನಾಮಕ ಫಣೆಯ ಮೇಲೆತ್ತಿ
ಚುಂಬಿಸಿಯೆ ಕೊಲ್ಲಲೆಳಸುತಿದೆ ......
......... ಇಂದಿನ ಮಹಾತಪಸ್ಸಿನ ಚಿತೆಯ
ರಕ್ತಿಮ ವಿಭೂತಿಯೊಳೆ ಮುಂದಿನ ನವೋದಯದ
ದವಳಿಮ ಪಿನಾಕಧರನೈತಹನು; ಮತ್ತೊಮ್ಮೆ
ಭಾರತಾಂಬೆಯು ಜಗದ ಬೆಳಕಾಗುವಳು; ಹೆಮ್ಮೆ
ಗೌರವಗಳಿಂದ ಜನಗಣದ ಕಟು ನಿರ್ದಯದ
ಲೋಭಬುದ್ಧಿಯ ಹೀನ ಕುಟಿಲತೆಯನುರೆ ನೀಗಿ
ಮೆರೆಯುವಳು ತಪಸ್ವಿನಿಯೆ ಚಕ್ರವರ್ತಿನಿಯಾಗಿ" (ಭಾರತ ತಪಸ್ವಿನಿ) [೧೮]

ನಾಗರಿಕತೆಯ ವಿಷಸರ್ಪ ಪ್ರಗತಿಯ ಹೆಸರಲ್ಲಿ ಭಾರತವನ್ನು ಕೊಲ್ಲುವುದಕ್ಕೆ ಯತ್ನಿಸುತ್ತಿದೆ. ತಪಸ್ವಿನಿಯಾದ ಭಾರತಿಯು ವಸಾಹತುಶಾಹಿ ಪ್ರಭುತ್ವವು ನಾಗರಿಕತೆಯ ಹೆಸರಿನಲ್ಲಿ ಸೃಷ್ಟಿಸುತ್ತಿರುವ ಆಕರ್ಷಣೆಗಳಿಗೆ ಬಲಿಯಾಗುತ್ತಿದ್ದಾಳೆ. ನಾಗರಿಕತೆಯ ಹೆಸರಿನಲ್ಲಿಯೇ ತನ್ನ ಆಡಳಿತವನ್ನು ಸಮರ್ಥಿಸುತ್ತಿದ್ದ ಬ್ರಿಟಿಷ್ ಪ್ರಭುತ್ವ, ಭಾರತೀಯರಿಗೆ ಇಲ್ಲವಾಗಿರುವ ಈ ನಾಗರಿಕತೆಯನ್ನು ನೀಡುವುದಕ್ಕಾಗಿಯೇ ಬಂದವರು ಎಂಬ ಸ್ವ ಸಮರ್ಥನೆಯನ್ನು ಮಾಡುತ್ತಿದ್ದರು. ಅವರು ಹುಟ್ಟುಹಾಕಿದ ತಂತ್ರಕ್ಕೆ ಭಾರತದ ಜನತೆ ಬಲಿಯಾದರು. ಬ್ರಿಟಿಷರ ನಾಗರಿಕತೆಯ ಭೇದದ ಕ್ರೌರ್ಯಕ್ಕೆ ತುತ್ತಾದ ಭಾರತೀಯರು ತಮ್ಮ ಸಂಸ್ಕೃತಿ- ನಂಬಿಕೆಗಳಿಂದ ದೂರವಾಗುತ್ತಿದ್ದರು. ಇದನ್ನು ಕಂಡೇ ಕವಿ ಭಾರತೀಯರನ್ನು ಮತ್ತೆ ತಪಸ್ಸಿನ ಕಡೆ ಮರಳುವುದೊಂದೇ ದಾರಿ ಎನ್ನುವುದು. ಇಂದಿನ ಮಹಾತಪಸ್ಸಿನಲ್ಲಿ ಮುಂದಿನ ನವೋದಯದ ಹೊಸ ಬೆಳಕಿದೆ. ಆ ಬೆಳಕಿನಿಂದಲೇ ಭಾರತ ಮತ್ತೆ ಜಗತ್ತಿನ ಬೆಳಕಾಗುತ್ತದೆ. ಭಾರತಮಾತೆ ಎಲ್ಲಾ ರೀತಿಯ ಗೌರವಗಳಿಗೆ ಪಾತ್ರಳಾಗುತ್ತಾಳೆ.ಸದ್ಯದ ಸಂಕಟದಿಂದ ಪಾರಾಗಿ ಭಾರತಾಂಬೆ ಮತ್ತೆ ಜಗದ ಬೆಳಕಾಗುತ್ತಾಳೆ. ಚಕ್ರವರ್ತಿನಿಯಾಗಿ ಮೆರೆಯುತ್ತಾಳೆ ಎಂಬ ಆಶಾವಾದವನ್ನು ಕವಿ ವ್ಯಕ್ತಪಡಿಸುತ್ತಾರೆ. ಕವಿ ಇಲ್ಲಿ ಭಾರತವನ್ನು ತಪಸ್ವಿನಿಯಾಗಿ ನೋಡುವುದು ವಿಶಿಷ್ಟ ಸಂಗತಿ. ಸದ್ಯದಲ್ಲಿ ಭಾರತವನ್ನು ಕವಿದಿರುವ ಕತ್ತಲೆಯನ್ನು ಹೊಡೆದೋಡಿಸುವ ಬಯಕೆ

ಇದೆ. ಈ ಎಲ್ಲ ಬಯಕೆಗಳು ಭಾರತಮಾತೆಯೇ ಮತ್ತೆ ಚಕ್ರವರ್ತಿನಿಯಾಗಿ ಮೆರೆಯುವುದರ ಮೂಲಕ ಈಡೇರುತ್ತದೆ ಎಂದು ಭಾವಿಸಲಾಗಿದೆ.

ಭಾರತ ತಪಸ್ವಿನಿಯಾಗಿ ಚಕ್ರವರ್ತಿನಿಯಾಗಿ ಮೇಲೇಳಬೇಕಾದರೆ ರಾಷ್ಟ್ರದ ಸಮಸ್ತ ಅವಯವಗಳು ಏಕಪ್ರಕಾರವಾಗಿ ಮೇಲೆದ್ದು ನಿಲ್ಲಬೇಕು. ರಾಷ್ಟ್ರ ನಾಯಕರಿಂದ ತೊಡಗಿ ಜನಸಾಮಾನ್ಯರವರೆಗೆ ರಾಷ್ಟ್ರದ ಕುರಿತು ತುಂಬು ಅಭಿಮಾನ ಬೆಳೆಸಿಕೊಳ್ಳಬೇಕು. ಕುವೆಂಪು ಅವರು ಮೌಢ್ಯಗಳನ್ನು ಕಳೆದು ವೈಜ್ಞಾನಿಕ ಮತಿಯನ್ನು ಹೊಂದಿದ ರಾಷ್ಟ್ರವನ್ನು ಕಟ್ಟಲು ಆಶಿಸಿದವರು. ಮತದ ಮೋಹದ ಅಜ್ಞಾನಕ್ಕೆ ಸಿಲುಕದೆ ಜನ ಸ್ವತಂತ್ರ ಬುದ್ಧಿಯವರಾಗಬೇಕು. ಮತಗಳ ಸಹವಾಸವನ್ನು ಬಿಟ್ಟು ವಿಶ್ವಪಥದ ಕಡಗೆ ಸಾಗಬೇಕಾಗಿದೆ. ಇದಕ್ಕೆ ಅಡ್ಡಿಯಾಗಿರುವ ಎಲ್ಲಾ ಶಾಸ್ತ್ರಗಳನ್ನು ನಿರಾಕರಿಸಿ ವಿಜ್ಞಾನ ಬುದ್ಧಿಯನ್ನು ಪ್ರತಿಪಾದಿಸಿದರು. ಅವರ 'ಹೊಸಬಾಳಿನ ಗೀತೆ' ಕವನ 'ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು' ಎಂಬ ಸಂದೇಶವನ್ನು ಸಾರುತ್ತಿದೆ.

" ಇಂದು ನೆತ್ತರು ಚೆಲ್ಲಿ ಮುಂದೆ ಬಹ ಮಕ್ಕಳಿಗೆ
ಹೊಟ್ಟೆಗನ್ನವ, ಮೈಗೆ ಬಟ್ಟೆಯನು ನೀಡಿ
ಇಂದು ನೋವಾದರೂ ಇಂದು ಸಾವಾದರೂ
ಮುಂದೆ ಬಾಳಿಗೆ ಸೊಗಸು ನೆಮ್ಮದಿಯ ಮಾಡಿ
ಇಂದು ನಿವೇಳದಿರೆ ಕೆಚ್ಚೆದೆಯ ತಾಳದಿರೆ
ನಿಮ್ಮವರ ಬಾಳು ಎಂದೆಂದಿಗೂ ಹೇಡಿ!
'ಇಂದು ರಕ್ತದ ಬಿಂದು ಮುಂದೆ ಸೌಖ್ಯದ ಸಿಂಧು!'
ಎಂದು ಸಾಹಸ ಕೇಳಿ, ಹಿಂಜರಿಯಬೇಡಿ! " (ಹೊಸಬಾಳಿನ ಗೀತೆ)[೧೯]

ಒಂದು ಕ್ರಾಂತಿಗಾಗಿ ರಕ್ತಚೆಲ್ಲಬೇಕಾಗಿದೆ. ಅದರ ಪರಿಣಾಮವಾಗಿ ಹಸಿದ ಹೊಟ್ಟೆಗಳಿಗೆ ಅನ್ನ, ಮೈಗೆ ಬಟ್ಟೆ ಸಿಗುವಂತಾಗಬೇಕು. ಇದನ್ನು ಸಾಧಿಸುವುದಕ್ಕಾಗಿ ಸಾಧಕರು ಸಾವು-ನೋವನ್ನು ಎದುರಿಸಬೇಕಾಗಿ ಬರಬಹುದು. ರಕ್ತದ ಬಿಂದು ಚೆಲ್ಲಬೇಕಾಗಬಹುದು. ಆದರೆ ಅದರ ಪರಿಣಾಮ ಮುಂದೆ ಎಲ್ಲರಿಗೂ ಸುಖ, ನೆಮ್ಮದಿ ಸಿಗಲಿರುವುದು. ಮುಂದಿನವರ ಬಾಳಿನಲ್ಲಿ ಸೊಗಸು ಮೂಡುವುದು ಎನ್ನುತ್ತಾರೆ. ಮೌಢ್ಯವನ್ನು ನೀಗುತ್ತಲೆ, ಬದುಕಿನ ವಿವಿಧ ಆಯಾಮಗಳನ್ನು ಕಟ್ಟಿಹಾಕಿರುವ ವಸಾಹತು

ಪ್ರಭುತ್ವವನ್ನು ತೊಡೆದು ಹಾಕುವುದೇ ಈ ಎಲ್ಲಾ ಸೌಖ್ಯಕ್ಕೆ ದಾರಿ ಎನ್ನುವುದು ಕವಿಯ ಭಾವನೆ.

ಗತದ ನೆನಪುಗಳು ಪುನರ್ ಸಂಘಟಿತಗೊಳ್ಳುವುದರ ಮೂಲಕವೇ ರಾಷ್ಟ್ರ ಮೂರ್ತ ರೂಪವನ್ನು ಪಡೆಯುತ್ತದೆ. ಹೀಗೆ ಮೂರ್ತತೆಯನ್ನು ಪಡೆಯಲು ಬೇಕಾದ ಪೂರಕ ಸಂಗತಿಗಳನ್ನು ತನ್ನ ಹತ್ತಿರದ ಇತಿಹಾಸದಿಂದ ಆಯ್ದುಕೊಳ್ಳುತ್ತದೆ. ಈ ಆಯ್ಕೆ ಒಂದರ್ಥದಲ್ಲಿ ರೂಪುಗೊಳ್ಳುತ್ತಿರುವ ರಾಷ್ಟ್ರಕ್ಕೆ ಬೇಕಾದ ಜೀವ ಪೋಷಕ ಸಂಗತಿಯೂ ಆಗಿರುತ್ತದೆ. ಹಾಗಾಗಿ ಹಂಪೆಯ ನೆನಪು ಹೇಗೆ ವಸಾಹತುಶಾಹಿಯಿಂದ ಭಾರತಕ್ಕೆ ಬಿಡುಗಡೆ ಹೊಂದುವ ಹೋರಾಟದ ಮನಸ್ಥಿತಿಗೆ ಬೇಕಾದ ಪೋಷಕ ಸಂಗತಿಯಾಗುತ್ತದೋ ಹಾಗೆಯೇ ಭಾರತೀಯ ಇತಿಹಾಸದಲ್ಲಿ ದಾಖಲಾದ ವೀರ ರಾಜ 'ಪ್ರತಾಪಸಿಂಹ'ನನ್ನೂ ಕುವೆಂಪು ನೆನಪಿಸಿಕೊಳ್ಳುತ್ತಾರೆ. ಪ್ರತಾಪಸಿಂಹನ ಹೋರಾಟದ ವ್ಯಕ್ತಿತ್ವವನ್ನು ಹೇಳುತ್ತಲೇ ಸಾಹಸಿ ಮಾನಸಿಕತೆಯನ್ನು ಕಳೆದುಕೊಂಡು ದುರ್ಬಲರಾಗಿರುವ ವರ್ತಮಾನದ ಭಾರತೀಯರಿಗೆ ಸಾಹಸಿಗಳಾಗುವ ಪ್ರೇರಣೆಯನ್ನು ತುಂಬುತ್ತಾರೆ.

"ಸಿಂಹದ ಮರಿಗಳೆ ಗರ್ಜಿಸಿರೇಳಿ!
ಕುರಿಗಳ ಭಾವವ ತೆಗೆದೊಗೆದೇಳಿ!
ಕೇಸರವಿದೆ! ಕೇಸರಿಗಳು ನೀವು
ಎಳೆವುಲ್ಲಲ್ಲವು ನಿಮ್ಮಯ ಮೇವು!
ಕನ್ನಡಿಯಿದೋ ತೋರುವೆ ನೋಡಿ
ನಿಮ್ಮಯ ನೆಳಲಿನ ಮೈಮೆಯ ನೋಡಿ
ಪ್ರತಾಪಸಿಂಹಾದರ್ಶವಿದು,
ಭಾರತಾಂಬೆಯ ಹರ್ಷವಿದು ನಿಮ್ಮಾದರ್ಶವಿದು! " (ಪ್ರತಾಪ ಸಿಂಹ)[೨೦]

ಸ್ವದೇಶ ರಕ್ಷಣೆಗಾಗಿ ಶತ್ರುಗಳೊಡನೆ ಹೋರಾಡಿ ಅದಕ್ಕಾಗಿ ಅನೇಕ ಬಗೆಯ ಕಷ್ಟಗಳನ್ನು ಸಹಿಸಿಕೊಂಡವ ಪ್ರತಾಪಸಿಂಹ. ಕಷ್ಟಗಳು ಬಂದಾಗಲೂ ಶತ್ರುವಿಗೆ ತಲೆಬಾಗದ ಸಾಹಸಿ. ಅಂತಹ ವೀರನ ಶೌರ್ಯ-ಸಾಹಸಗಳನ್ನು ವರ್ಣಿಸುವ ಸಂದರ್ಭವನ್ನು ಬಳಸಿಕೊಂಡು ಕವಿ ತನ್ನ ಕಾಲದ ದೇಶಭಕ್ತರನ್ನು ಜಾಗೃತಗೊಳಿಸುತ್ತಾರೆ. ದೇಶ ದ್ರೋಹಿಯಾದವರ ಪಾಡನ್ನು ಚಿತ್ರಿಸುತ್ತಲೇ ದೇಶಭಕ್ತರ

ಮೇಲ್ಮೆಯನ್ನು ಸಾರುತ್ತಾರೆ. "ದೇಶದ್ರೋಹಿಯ ಹೆಣವನ್ನು ಬೆಂಕಿಯೂ ಮುಟ್ಟುವುದಿಲ್ಲ, ನಾಯಿನರಿಯು ತಿನ್ನುವುದಿಲ್ಲ. ದೇಶದ್ರೋಹಿಗೆ ಗತಿಯಿಲ್ಲ! ಮಲಗಲು ಚಿತೆಯಲ್ಲ!" ಎಂದು ಹೇಳುತ್ತಾರೆ. ಈ ಮೂಲಕ ಪ್ರಕೃತಿಯ ಸಾಮಾನ್ಯ ಜೀವ ಜಂತುಗಳೂ ಕೂಡ ದೇಶದ್ರೋಹಿಯನ್ನು ತಿರಸ್ಕರಿಸುತ್ತದೆ ಎಂಬ ಸಂಗತಿಯನ್ನು ಜನತೆಯ ಮುಂದಿಡುತ್ತಾ, ಆ ಮೂಲಕ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶದ ಜನಗಳು ದೇಶಭಕ್ತರಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿಸಿಕೊಳ್ಳಬೇಕು, ಒಂದು ವೇಳೆ ಹೋರಾಟದಲ್ಲಿ ಪಾಲ್ಗೊಳ್ಳದಿದ್ದರೂ ದೇಶದ್ರೋಹಿಗಳಾಗದಿರಿ ಎಂಬ ವಿವೇಚನಾಯುಕ್ತ ಸಂದೇಶ ಇಲ್ಲಿ ಇದೆ. ಭಾರತೀಯರನ್ನು ಎಚ್ಚರಿಸುವುದಕ್ಕೆ ಬಳಸುವ ಪ್ರಾಣಿ ರೂಪಕಗಳನ್ನು ಇಲ್ಲಿ ಗಮನಿಸಬೇಕು. ಸಿಂಹದ ಮರಿಗಳು ನೀವು, ಕುರಿಯ ಭಾವವನ್ನು ತೆಗೆದುಹಾಕಿ, ಕೇಸರಿಗಳು ನೀವು ಎಂಬ ಸಾಲುಗಳು ಭಾರತೀಯರಿಗೆ ಬೇಕಾದ ಪೌರುಷವನ್ನು ಹೇಳುತ್ತಾ, ಕುರಿಗಳ ಹಾಗಿರುವ ಹೇಡಿತನದಿಂದ ಬಿಡಿಸಿಕೊಳ್ಳುವ ಅಗತ್ಯವನ್ನು ಹೇಳುತ್ತಿದೆ. ಪ್ರತಾಪ ಸಿಂಹನ ಆದರ್ಶ ಭಾರತೀಯರ ಆದರ್ಶವಾಗಬೇಕು. ಅದೇ ಭಾರತಾಂಬೆಗೆ ಹರ್ಷ ಎಂದು ಹೇಳುತ್ತಾ, ಪರಕೀಯ ಗುಲಾಮಿತನದಿಂದ ಬಿಡುಗಡೆಯಾಗುವುದಕ್ಕೆ ಬೇಕಾದ ಸ್ವಾತಂತ್ರ್ಯದ ಕೆಚ್ಚನ್ನು ಈ ಕವಿತೆಯ ಮೂಲಕ ಹೇಳುತ್ತಾರೆ. ಅವರ 'ಮಹಾದರ್ಶನ' ಎಂಬ ಖಂಡಕಾವ್ಯ ಸಾವಿರಾರು ವರ್ಷಗಳ ಭಾರತೀಯ ಪರಂಪರೆಯ ಹಲವು ಮಗ್ಗುಲುಗಳ ಚಿತ್ರಣವನ್ನು ನೀಡುತ್ತದೆ. ಇಲ್ಲಿ ಹುಟ್ಟಿದ ಸಂಸ್ಕೃತಿಯ ವಿಸ್ತಾರ, ಮಹಾಕವಿ, ಯೋಗಿಗಳು ಸಾರಿದ ದರ್ಶನಗಳು, ಮೌಢ್ಯಕ್ಕೆ ಕಾರಣವಾದ ಪುರೋಹಿತಶಾಹಿಗಳು ಹಾಗೂ ಇವೆಲ್ಲವನ್ನು ತನ್ನೊಡಲಲ್ಲಿ ಮರೆ ಮಾಡುವಂತೆ ಪ್ರವೇಶಿಸಿದ ವಸಾಹತುಶಾಹಿ ವ್ಯವಸ್ಥೆ ಇವುಗಳ ಕುರಿತು ಈ ಕಾವ್ಯ ವಿವರಿಸುತ್ತಿದೆ.

"ಭಾರತಿಯ ಕೆಡಹಿದರು ಪಂಜರದೊಳವಳ ಕೈ ಕಾಲು ಕಟ್ಟಿ
ಜನನಿಯೆದೆಯನು ಮೆಟ್ಟಿಯವಳ ಬೆನ್ನನು ತಟ್ಟಿ ನೆತ್ತಿಯನು ಕುಟ್ಟಿ
ಮಿಂಚಿದವು ಯೋಗಿಶನೆದುರಿನಲಿ ನೋಡಬಾರದ ನೋಟಮಾಲೆ

.............................................................

ಪಾಶ್ಚಾತ್ಯ ಸಂಸ್ಕೃತಿಯ ಕಡಲುಕ್ಕಿಬಂದು,ಭಾರತಿಯ ಮುಳುಗಿಸಿತು
ತೇಲಿಸಿತು ನಮ್ಮ ಕಳೆಗೆಟ್ಟ ಪೂರ್ವಾಚಾರಗಳನೆಲ್ಲ ಕೊಚ್ಚಿ

ಆ ಹೊನಲ ರಭಸದಲಿ ಹಿಂದಿನ ಸದಾಚಾರಗಳು ಸಿಕ್ಕಿಬಿದ್ದು
ಕರಗಿದುವು,ತೇಲಿದುವು,ಮುಳುಗಿದುವು  ಕಳೆಯ ಕೂಡಿಹ ಪೈರಿನಂತೆ
ಭಾರತಾಂಬೆಯ ಸುತರು ಪಾಶ್ಚಾತ್ಯ ಸಂಸ್ಕೃತಿಯ ವೈಭವವ ಕಂಡು
ಹಿಗ್ಗಿದರು,ಕಾಂತಿಯಲಿ ಮನಸೋತು,ಸಂಪದವ ಕಂಡು ಬೆರಗಾಗಿ,

.................................................................

ಅವರ ತಾಳಕೆ ನಾವು ನರ್ತನವ ಮಾಡಿದೆವು ನಮ್ಮದನು ಮರೆತು
ಅವರ ಸೊಗಸಿಗೆ ನಾವು ವೇಷಗಳ ಧರಿಸಿದೆವು ನಾಟ್ಯನಟರಂತೆ
ಅವರಿತ್ತ ವಿಷಗಳನು ಹಾಲೆಂದು ನುಂಗಿದೆವು ಬಾಯ್ದೆರೆದು ತೆರೆದು
ಅವರ ಗುಣಗಳ ತೊರೆದು ಹೀರಿದೆವು ದುರ್ಗುಣಗಳೆಲ್ಲವನು ಕರೆದು"

(ಮಹಾದರ್ಶನ)[೨೧]

ವಸಾಹತುಶಾಹಿಯು ತನ್ನೆಲ್ಲಾ ಕುತಂತ್ರಗಳನ್ನು ಬಳಸಿ ಭಾರತವನ್ನು ತನ್ನ ಆಡಳಿತದ ತೆಕ್ಕೆಗೆ ತೆಗೆದುಕೊಂಡು, ಎಲ್ಲಾ ಬಗೆಯಿಂದ ಶೋಷಿಸಿದ ಬಗೆಯನ್ನು, ಅವರು ಹುಟ್ಟುಹಾಕಿದ ಹೊಸ ಶಿಕ್ಷಣ ವ್ಯವಸ್ಥೆಯ ಮೋಹಕ್ಕೆ ಭಾರತೀಯರು ಮೋಹಗೊಂಡು ಪಾಶ್ಚಾತ್ಯ ಸಂಸ್ಕೃತಿಯ ವೈಭವಕ್ಕೆ ಮನಸೋತು ತಮ್ಮತನವನ್ನು ಮರೆತು ಹೋದದ್ದು, ವಸಾಹತುಶಾಹಿ ಪ್ರಭುತ್ವದ ತಾಳಕ್ಕೆ ಭಾರತೀಯರು ಕುಣಿದು, ಅವರು ನೀಡಿದ ಕೆಡುಕುಗಳನ್ನೇ ಸ್ವೀಕರಿಸಿದ ಬಗೆಯನ್ನು ಈ ಖಂಡ ಕಾವ್ಯ ಭಾವ ತುಂಬಿ ವರ್ಣಿಸುತ್ತದೆ. ಭಾರತದ ವೈಭವ, ಅದರ ಪತನಗಳೆಲ್ಲದರ ಸಾಕ್ಷಿಯಾಗಿ ಈ ಕಾವ್ಯ ನಿಲ್ಲುತ್ತದೆ. ಪಶ್ಚಿಮದ ಮೋಹಕ್ಕೆ ಭಾರತೀಯರು ಮನಸೋತಿದ್ದು, ಅದರ ಮೂಲಕವೇ ಪಶ್ಚಿಮ ಭಾರತವನ್ನು ತನ್ನ ಪದಕ್ಕೆ ಕೆಡಹಿಕೊಂಡು ಪಂಜರದಲ್ಲಿ ಬಂಧಿಸಿಟ್ಟ ಬಗೆಯನ್ನು ಇಲ್ಲಿ ನಿರೂಪಿಸುತ್ತಾರೆ. ಕೊನೆಯಲ್ಲಿ ಒಂದು ಬದಲಾವಣೆಯ ಆಶಯ ಯೋಗಿಗಳ ಮೂಲಕ ನಡೆಯುವುದನ್ನು ಕಾವ್ಯದಲ್ಲಿ ಚಿತ್ರಿಸುತ್ತಾರೆ. ಶತಮಾನಗಳ ಕಾಲದ ಸಾಮಾಜಿಕ, ಸಾಂಸ್ಕೃತಿಕ ರಾಜಕೀಯ ಬದುಕಿನ ಪಲ್ಲಟಗಳನ್ನು ಕಾವ್ಯ ಸೂಕ್ಷ್ಮವಾಗಿ ಧ್ವನಿಸುತ್ತದೆ.

ವಸಾಹತು ಪ್ರಭುತ್ವ ತೋರುವ ಕ್ರೌರ್ಯ, ಅದು ಹೊಂದಿದ ಶಕ್ತಿ, ಈ ಪ್ರಭುತ್ವ ಅಟ್ಟಹಾಸಗಳನ್ನು ಮಣಿಸಬೇಕಾದರೆ. ಅದನ್ನು ಸಮಬಲದೊಂದಿಗೆ ಎದುರಿಸಬೇಕು.

ಕುವೆಂಪು ಅವರ 'ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ' ಎಂಬ ಕವಿತೆ ಆಕ್ರಮಣಕಾರಿಯಾಗಿ ಬಂದ ಪ್ರಭುತ್ವ ಯಾವ ರೀತಿಯಲ್ಲಿ ಭಾರತವನ್ನು ಕಟ್ಟಿಹಾಕಿದೆ ಎನ್ನುವುದನ್ನು ಹೇಳಿ ಅದರಿಂದ ಬಿಡುಗಡೆ ಪಡೆಯಬೇಕಾದರೆ ತ್ಯಾಗದ ಶಕ್ತಿಯು ಬೇಕಾಗಿದೆ ಎನ್ನುತ್ತದೆ.

" ಬೆಳ್ಳಿ ನಾಲಗೆ ಸಾಲದಯ್ಯ, ವಜ್ರದ ಮುಷ್ಟಿ
ಬೇಕಿಂದೆಮಗೆ; ಸೆರೆಯ ಕಬ್ಬಿಣ ಸರಳನೊಡೆಯೆ
ನುಣ್ಬು ನಾಯಕರಲ್ಲ, ಬೇಕೆಮಗೊರಟು ಮಂದಿ
ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ !
ನೋಯಿಸಲು ಮನಸುಂಟು, ಕೆಚ್ಚು ಸಾಲದು ಹೊಡೆಯೆ!
ಸಮರ ಸಾಹಸರಾಹ! ಮಾತೆತ್ತಿದರೆ 'ಸಂಧಿ'!" ೨೨

(ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ)

ಈ ದುಷ್ಟಪ್ರಭುತ್ವವನ್ನು ಎದುರಿಸಲು ವಾಗ್ಮಿತೆಯು ಬೇಕು, ವಜ್ರದ ಮುಷ್ಟಿಯೂ ಬೇಕು. ತಮ್ಮನ್ನು ಕಟ್ಟಿಹಾಕಬಹುದಾದ ಎಲ್ಲಾ ಬಂಧನಗಳನ್ನು, ಸೆರೆಯನ್ನು ಮೀರಿ ಸ್ವಾತಂತ್ರ್ಯವನ್ನು ಸಾರುವ ವೀರನಾಯಕರು ಬೇಕೇ ಹೊರತು, ಹೋರಾಟದ ಧೈರ್ಯ ಸಾಲದ 'ಸಂಧಿ'ಯ ಮಾತನ್ನಾಡುವ ಹೇಡಿಗಳಲ್ಲ. ನುಣುಪಾದ ನಾಯಕತ್ವವಲ್ಲ. ಒರಟು ಮಂದಿಯ ನಾಯಕತ್ವಬೇಕು ಎನ್ನುತ್ತಾರೆ. ರಾಷ್ಟ್ರಕ್ಕಾಗಿ, ಅದರ ಬಿಡುಗಡೆಗಾಗಿ ಯಾವುದೇ ರೀತಿಯ ಹೋರಾಟಕ್ಕೂ ಸಿದ್ಧವಾದ, ದೇಶಭಕ್ತರು ಬೇಕು. ಕ್ಲೈಬ್ಯತನವನ್ನು ಮೀರುವಂತಿರಬೇಕು ಎಂಬ ಆಶಯ ಈ ಕವಿತೆಯಲ್ಲಿದೆ. ಸ್ವಾತಂತ್ರ್ಯದ ಹೋರಾಟ ನಡೆಯುತ್ತಿದ್ದ ಕಾಲಘಟ್ಟದಲ್ಲಿ ಅನೇಕರು ತಮ್ಮನ್ನು ನಾಯಕರೆಂದು ಬಿಂಬಿಸಿಕೊಂಡು ಹೋರಾಟಕ್ಕೆ ಯಾವುದೇ ಬಗೆಯಿಂದಲೂ ಸಿದ್ಧರಿಲ್ಲದೇ ಇದ್ದ ಜನರನ್ನು ಮೊನಚು ಮಾತುಗಳಿಂದ ಚುಚ್ಚುತ್ತಾರೆ.

'ಕ್ರಾಂತಿ ಕಾಳಿ' ಕವಿತೆಯು ಕವಿಯ ಕರ್ತವ್ಯವನ್ನು ಎಚ್ಚರಿಸುವ ಕವಿತೆ. ಕೇವಲ ಶುಕ, ಪಿಕ, ವಸಂತ, ಲತೆ, ತಂಗಾಳಿಗಳ ಕುರಿತು ಕವಿತೆಯನ್ನು ಬರೆಯುತ್ತಿರುವ ಕವಿಯನ್ನು ಎಚ್ಚರಿಸಿ, ಕರ್ತವ್ಯವನ್ನು ನೆನಪಿಸುತ್ತದೆ.

"ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ
ಬೆವರು, ನೆತ್ತರ್ಗಳಂ ಗಾನಗೈವುದು ನಿನ್ನ
ಕರ್ತವ್ಯವೆಂದು ಹಾ! ಹೊಟ್ಟೆಗಿಲ್ಲದೆ ಅನ್ನ
ಬಡಜನರು ಸಾಯುತಿರೆ, ರಸಗಂಧವನು ತೋರೆ
ತಣಿವಹುದೆ? ಕ್ರಾಂತಿ ಕಾಳಿಯು ನಾನು, ಕೈ ಬೀಸಿ
ಕರೆಯೆ, ಬಾ, ಪೂಜೆಗೈ ಹೃದಯ ರಕ್ತವ ಸೂಸಿ!" [೨೩](ಕ್ರಾಂತಿಕಾಳಿ)

ಕ್ರಾಂತಿಕಾಳಿಯು ಕವಿಗೆ ಬಡತನ, ಗೊಬ್ಬರ, ಕತ್ತಿ, ಗುದ್ದಲಿ, ಹಾರೆ, ನೆತ್ತರು, ಬೆವರುಗಳ ಕುರಿತು ಕವಿತೆಯನ್ನು ಬರೆಯುವಂತೆ ಆದೇಶಿಸುತ್ತದೆ. ಬಡಜನರು ಹಸಿವಲ್ಲಿ ಸಾಯುತ್ತಿರುವಾಗ ಕೇವಲ ರಸಗಂಧದಿಂದ ಹೊಟ್ಟೆ ತುಂಬಿಸಲಾಗದು. ಇಲ್ಲಿ ಕ್ರಾಂತಿಕಾಳಿಯ ಆದೇಶದಲ್ಲಿ ಶ್ರಮವನ್ನು ಗುರುತಿಸುವ, ಗೌರವಿಸುವ ಬಗೆಯಿದೆ. ಅದನ್ನು ಮರೆತು ಕೇವಲ ಪ್ರಕೃತಿಯ ರಮಣೀಯತೆಯನ್ನು ಹಾಡುವುದು ದ್ರೋಹವಾಗಿ ಕಾಣುತ್ತದೆ. ಕಾಳಿಯ ಪೂಜೆಗೆ ಹೃದಯದ ರಕ್ತವನ್ನೆ ಸೂಸಿ ಬರಬೇಕಾಗಿದೆ. ಇದು ಕವಿಗಿತ್ತ ಆಣತಿ.

ರಾಷ್ಟ್ರದೆಲ್ಲೆಡೆ ಸ್ವಾತಂತ್ರ್ಯ ಹೋರಾಟದ ಕಾವು ಹಬ್ಬಿರುವಾಗ, ಬ್ರಿಟಿಷರು ಕೂಡ ಹೋರಾಟಗಾರರನ್ನು ನಿರ್ದಾಕ್ಷಿಣ್ಯವಾಗಿ ಬಲಿತೆಗೆದುಕೊಳ್ಳುತ್ತಿದ್ದರು. ಗಾಂಧಿ ಮಾರ್ಗದ ಅಹಿಂಸಾ ಸತ್ಯಾಗ್ರಹದಷ್ಟೇ ಭರದಲ್ಲಿ ಕ್ರಾಂತಿಕಾರಿಗಳ ಹೋರಾಟವೂ ನಡೆಯುತ್ತಿತ್ತು. ಬಲಿಯಾಗಲು ಹೊರಟವರು ಇವರು ಸಾವನ್ನು ಮತ್ತೊಂದು ಹುಟ್ಟು ಎಂದೇ ಭಾವಿಸಿದ್ದರು. 'ದೇಶಭಕ್ತನ ಉತ್ತರವಾಣಿ' ಕವಿತೆಯಲ್ಲಿ ಕ್ರಾಂತಿಕಾರಿಗಳ ಸಾವಿನ ಉತ್ತರವಿದೆ.

"ಸ್ವಾತಂತ್ರ್ಯವನು ಕೊಲ್ಲುವರೆ ಒಬ್ಬನನು ಕೊಂದು?
ನನ್ನ ಮೃತ್ಯುವೆ ನನ್ನ ವೈರಿಗೆ ಪತನವಾಯ್ತು
ಶತಮಾನಗಳು ಬದುಕಿ ಬಾಳಿರುವ ಭಾರತಿಗೆ,
ಲೋಕಕ್ಕೆ ನೂರಾರು ಜೀವಮಣಿಗಳ ಹೆತ್ತು
ದಾನ ಮಾಡಿಹ ಮಾತೃ ದೇವತೆಯ ಸದ್ಗತಿಗೆ
ನನ್ನ ನಿಧನದಲಿ ಕುಂದಹುದೆ." [೨೪](ದೇಶಭಕ್ತನ ಉತ್ತರವಾಣಿ)

ಭಾರತಮಾತೆ ಶತಮಾನಗಳ ಕಾಲ ಬಾಳಿ ಬದುಕಿದ ತಾಯಿ. ನೂರಾರು ಮಕ್ಕಳನ್ನು ಹೆತ್ತುಕೊಟ್ಟ ಈ ಮಹಾತಾಯಿಗೆ ತನ್ನೊಬ್ಬನ ಸಾವಿನಿಂದ ಕುಂದಾಗಲಾರದು. ತನ್ನೊಬ್ಬನನ್ನು ಕೊಂದು ಬ್ರಿಟಿಷರು ಸ್ವಾತಂತ್ರ್ಯವನ್ನಾಗಲೀ ಸ್ವಾತಂತ್ರ್ಯದ ಕನಸುಗಳನ್ನಾಗಲೀ ಕೊಲ್ಲಲಾಗದು. ಇಲ್ಲಿ ಕವಿ ವ್ಯಕ್ತಪಡಿಸುವ ಆಶಯ ಆ ದಿನಗಳ ಸಾಮಾನ್ಯ ಹೋರಾಟಗಾರರ ಮನಸ್ಸಿನಲ್ಲಿದ್ದ ಭಾವನೆಯು ಹೇಗಿತ್ತು ಎಂಬುದನ್ನು ತೋರಿಸುವುದು. ಒಬ್ಬೊಬ್ಬ ಹೋರಾಟಗಾರರ ಸಾವು ಮತ್ತೆ ಹಲವರನ್ನು ಈ ಹೋರಾಟದಂಗಣಕ್ಕೆ ಸೆಳೆಯುತ್ತಿತ್ತು. ಹಾಗಾಗಿ ಶತಮಾನಗಳ ಕಾಲ ಹೋರಾಡಿದರೂ ಹೋರಾಟ ಬರಿದಾಗಲಿಲ್ಲ. ಹೋರಾಟದ ಕಡಲಿಗೆ ಹೊಸ ಹೊಸ ತೊರೆಗಳು ಸೇರುತ್ತಲೇ ಇತ್ತು.

ಗುಲಾಮಿತನವನ್ನು ಕಳೆದುಕೊಂಡು ಪುನರ್ ಸಂಘಟಿತಗೊಳ್ಳುತ್ತಿರುವ ಹೊತ್ತಿನಲ್ಲಿ ರಾಷ್ಟ್ರದ ಅಂಗಾಂಗಗಳನ್ನು ಬಲಪಡಿಸುವುದರ ಕಡೆಗೆ ವಿಶೇಷವಾದ ಗಮನವನ್ನು ನೀಡಬೇಕಾಗುತ್ತದೆ. ರಾಷ್ಟ್ರವು ಪರಿಪೂರ್ಣವಾಗಿ ಬಲಗೊಳ್ಳುವುದು ವೀರಾವೇಶದಿಂದ ಹೋರಾಡಬಲ್ಲ ಸೈನಿಕರಿಂದಲೋ, ಜ್ಞಾನ ಪ್ರಸರಣ ಮಾಡುವ ಬುದ್ಧಿಜೀವಿಗಳಿಂದಲೋ ಮಾತ್ರ ಅಲ್ಲ. ಇಲ್ಲಿ ಅಪರಿಚಿತರಾಗಿಯೇ ಉಳಿದ, ಉಳಿಯಬಲ್ಲ ಹೆಸರಿಲ್ಲದೆ ದುಡಿಯಬಲ್ಲ ನೂರಾರು ಕೈಗಳು ಇರುತ್ತವೆ. ಸಾಮಾನ್ಯವಾಗಿ ಇಂತಹ ದುಡಿಯುವ ಕೈಗಳನ್ನು ಗುರುತಿಸುವ, ಸ್ಮರಿಸುವ ಕಾರ್ಯ ಹೆಚ್ಚಾಗಿ ನಡೆಯಲಾರದು. ಕುವೆಂಪು ಅವರ ' ಕುಳದ ಕಲಿಗೆ' ಕವಿತೆಯು ಈ ಹಿನ್ನೆಲೆಯಿಂದ ವಿಶಿಷ್ಟವಾಗಿದೆ.

"ಬರಿಯ ಉಳುವ ಕುಳದ ಗೆರೆಯೆ?
ನಾಡ ಹಣೆಯ ಬರೆಹ ಬರೆವೆ!
ಹೊಲದ ಗಾಂಧಿ, ನೆಲವ ನಾಂಧಿ
ನೀನೇ ರಾಷ್ಟ್ರಶಕ್ತಿ
ನೆಹರುಗೇನು ಕಡಮೆಯೇನು
ನಿನ್ನ ದೇಶಭಕ್ತಿ
ಅವರೊ ಹೆಸರು, ನೀನೋ ಉಸಿರು
ನಾಡ ದೇವಿಗೆ

ನಂದದೆಂದೂ ಕುಂದದಿರುವ

ನಂದಾದೀವಿಗೆ " (ಕುಳದ ಕಲಿಗೆ) [೨೫]

ಈ ಕವಿತೆಯಲ್ಲಿ ಕವಿ ಲೋಕದ ಕಣ್ಣಿಗೆ ಅಪರಿಚಿತನಾಗಿಯೇ ಉಳಿಯಬಲ್ಲ, ಆದರೆ ರಾಷ್ಟ್ರವನ್ನು ತಳಮಟ್ಟದಲ್ಲೇ ಸದೃಢಗೊಳಿಸುವ ಮಹಾನ್ ಕರ್ಮಯೋಗಿ ರೈತನನ್ನು ಪರಿಚಯಿಸುತ್ತಾರೆ. ಈ ರೈತ ಕೇವಲ ನೇಗಿಲು ಹಿಡಿದು ಉಳುವುದಷ್ಟೇ ಅಲ್ಲ. ಆತನ ನೇಗಿಲು ಎಳೆದದ್ದು ಕೇವಲ ಉಳುಮೆಯ ಗೆರೆಗಳನ್ನಷ್ಟೇ ಅಲ್ಲ. ಆ ಮೂಲಕ ಆ ರೈತ ನಾಡಿನ ಹಣೆ ಬರಹವನ್ನು ಅಂದರೆ ನಾಡಿನ ವರ್ತಮಾನ, ಭವಿಷ್ಯವನ್ನು ನಿಜವಾದ ಅರ್ಥದಲ್ಲಿ ಬರೆಯಬಲ್ಲವನಾಗಿದ್ದಾನೆ ಎಂಬುದನ್ನು ಈ ಕವಿತೆ ಚಿತ್ರಿಸುತ್ತವೆ. ಕವಿ ಈ ರೈತನನ್ನು ಸಂಬೋಧಿಸಿದ ರೀತಿಯೇ ವಿಶಿಷ್ಟವಾಗಿದೆ. "ಹೊಲದ ಗಾಂಧಿ, ನೆಲದ ನಾಂಧಿ ನೀನೇ ರಾಷ್ಟ್ರ ಶಕ್ತಿ" ಎನ್ನುತ್ತಾರೆ. ಹೊಲದಲ್ಲಿ ದುಡಿಯುವ ಆತನ ಕಾಯಕ ನಿಷ್ಠೆಯೇ ಆತನನ್ನು ಗಾಂಧಿಯ ತತ್ವಾನುಯಾಯಿಯನ್ನಾಗಿಸುತ್ತದೆ. ರಾಷ್ಟ್ರದ ಮುಂಚೂಣಿಯ ನೇತಾರನಾದ ನೆಹರೂವಿಗಿಂತ ಈ ರೈತನ ಪರಿಶ್ರಮ, ಶಕ್ತಿ ಕಡಿಮೆಯೇನಲ್ಲ. ಈ ನಾಯಕರು ರಾಷ್ಟ್ರದ ಹೋರಾಟಕ್ಕೆ ಹೆಸರಷ್ಟೇ. ಆದರೆ ನಾಡಿನ ಉಳಿವಿಗೆ ಬೇಕಾದ ಪ್ರಾಣಧಾತುವಾದ ಅನ್ನವನ್ನು ಬೆಳೆಯುವ ರೈತ ಕೇವಲ ಹೆಸರಲ್ಲ, ಆತ ನಾಡಿನ ಉಸಿರು ಎಂದು ಕವಿ ಗುರುತಿಸುತ್ತಾರೆ. ಆ ಮೂಲಕ ರಾಷ್ಟ್ರದ ಶಕ್ತಿ ಬಲಗೊಳ್ಳುವುದು ಅದರ ನಾಯಕರಿಂದ, ಬಲಿಯಾಗಲು ಸಿದ್ಧಗೊಂಡ ಸೈನಿಕರಿಂದ ಅಷ್ಟೇ ಅಲ್ಲ, ಆ ನೆಲದ ಜನಕ್ಕೆ ಬೇಕಾದ ಅವಶ್ಯಕ ಆಹಾರವನ್ನು ಬೆಳೆದು ಪೂರೈಸುವುದರಲ್ಲೇ ತನ್ನ ನಿಷ್ಠೆಯನ್ನು ತೋರಿಸುವ ಈ ಅನ್ನದಾತನ ಕಾಯಕ ನಿಷ್ಠೆಗಿಂತ ದೇಶಭಕ್ತಿ ಬೇರೆ ಅಲ್ಲ ಎಂಬುದನ್ನು ಕವಿ ಇಲ್ಲಿ ಸ್ಪಷ್ಟಪಡಿಸುತ್ತಾರೆ. ರೈತನ ಕಾಯಕದ ಶ್ರೇಷ್ಠತೆಯಲ್ಲೇ ಎಲ್ಲದರ ಅಸ್ತಿತ್ವ ಇದೆ. ಒಂದು ಹಂತದಲ್ಲಿ ಗಾಂಧಿ, ನೆಹರೂಗಿಂತಲೂ ಅನ್ನದಾತನು ಯಾವ ರೀತಿಯಿಂದಲೂ ಕಡಿಮೆಯಲ್ಲ ಎಂಬುದನ್ನು ಕವಿ ಬಲವಾಗಿಯೇ ಪ್ರತಿಪಾದಿಸುತ್ತಾರೆ. ಈ ಕವಿತೆಯ ಮೂಲಕ ಕುವೆಂಪು ಅವರ ರಾಷ್ಟ್ರೀಯತೆಯ ಕುರಿತ ಗ್ರಹಿಕೆಯನ್ನು ಅರ್ಥೈಸಿಕೊಳ್ಳಬಹುದು ಕೂಡ. ವಸಾಹತುಶಾಹಿಯ ಹಿಡಿತದಲ್ಲಿದ್ದ ಭಾರತವನ್ನು ಬಿಡುಗಡೆಗೊಳಿಸುವ ಹೋರಾಟದ ಸಂದರ್ಭದಲ್ಲಿ ಬಿಡುಗಡೆಗಾಗಿ ನಡೆದ ಕದನದ ಸಂದರ್ಭದಲ್ಲಿ ವೀರಾವೇಷದ ಹೋರಾಟವನ್ನು, ಜನಸಾಮಾನ್ಯರೂ ಕೂಡ ಹೋರಾಡುತ್ತಾ ಬಲಿದಾನ ಮಾಡಿಕೊಳ್ಳಬೇಕಾಗಿದ್ದ ಅನಿವಾರ್ಯತೆಯನ್ನೂ, ಶೌರ್ಯದ, ಪರಾಕ್ರಮದ ಭಾಷೆಯಲ್ಲೇ ಹೇಳಿದ ಕುವೆಂಪು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ

ರಾಷ್ಟ್ರಭಕ್ತಿಯನ್ನು ದುಡಿಮೆಯ, ನಾಡಿನ ಸ್ಥಿರತೆಯ ಪರಿಭಾಷೆಯಲ್ಲಿ ಮಂಡಿಸುತ್ತಾರೆ. ಹಾಗಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ದೇಶಕ್ಕಾಗಿ ಬಲಿದಾನ ಮಾಡಬಲ್ಲ ಸತ್ಯಾಗ್ರಹಿ, ರಕ್ತತರ್ಪಣ ನೀಡಬಲ್ಲ ವೀರ ರಾಷ್ಟ್ರದ ಶಕ್ತಿಯಾಗಿ ಕಂಡರೆ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ರಾಷ್ಟ್ರವನ್ನು ಸ್ಥಿರತೆಯತ್ತ ಕೊಂಡೊಯ್ಯಬಲ್ಲ ಅನ್ನದಾತನೇ ರಾಷ್ಟ್ರಶಕ್ತಿ ಎಂದು ಪ್ರತಿಪಾದಿಸುತ್ತಾರೆ. ಬಲಿದಾನದಿಂದ ಪುನರ್ ರೂಪಿತವಾಗುವ ರಾಷ್ಟ್ರ ಸ್ಥಿರತೆ ಸಾಧಿಸುವ ಸಮೃದ್ಧ ರಾಷ್ಟ್ರವೂ ಆಗಬೇಕಾಗಿದೆ. ಈ ಸಮೃದ್ಧಿಯ ಹಿಂದೆ ಅನ್ನದಾತನ ಪಾಲ್ಗೊಳ್ಳುವಿಕೆಯ ಮಹತ್ವವನ್ನು ಕವಿ ಹೇಳುತ್ತಾರೆ.

**೪.೩ ಕುವೆಂಪು ಕವಿತೆಗಳ ರಾಷ್ಟ್ರೀಯತೆಯ ಒಟ್ಟು ಸ್ವರೂಪ:**

ಭಾರತೀಯ ಸಂದರ್ಭದಲ್ಲಿ ರಾಷ್ಟ್ರ ಪರಿಕಲ್ಪನೆಯ ಆಕರ, ಮೂಲದ್ರವ್ಯ ರಾಜಕೀಯ ಹಂತದಲ್ಲಿ ಪ್ರಬಲವಾಗಿ ವಿರೋಧಿಸುತ್ತಿದ್ದ ವಸಾಹತು ವ್ಯವಸ್ಥೆಯ ಮಾದರಿಯಿಂದಲೇ ಆಯ್ದುಕೊಂಡ ಕಲ್ಪನೆಗಳಾಗಿತ್ತು. ವಸಾಹತುಶಾಹಿ ಶಕ್ತಿಕೇಂದ್ರವು ತಂದೊಡ್ಡಿದ್ದ ಬಾಹ್ಯದ ರಾಜಕೀಯ ಹತೋಟಿಯ ವಿರೋಧವೇ ಪ್ರಧಾನವಾಗಿತ್ತು. ಕುವೆಂಪು ಅವರ ಕವಿತೆಗಳಲ್ಲೂ ಇದನ್ನು ನಾವು ಸ್ಪಷ್ಟವಾಗಿ ನೋಡಬಹುದು. ವಸಾಹತುಶಾಹಿಯು ಹೇರಿದ ರಾಜಕೀಯ ಪಾರತಂತ್ರ್ಯವನ್ನು ವಿರೋಧಿಸಿ, ಅವರ ವಿರುದ್ಧ ಹೋರಾಡುವಂತೆ ಹೋರಾಟಕ್ಕೆ ಬೇಕಾದ ಮನಸ್ಥಿತಿಯನ್ನು ರೂಪಿಸುವ ಹಲವು ಕವಿತೆಗಳನ್ನು ನೋಡಬಹುದು. ಕುವೆಂಪು ಕವಿತೆಗಳಲ್ಲಿನ ಒಟ್ಟು ರಾಷ್ಟ್ರೀಯತೆಯ ಸ್ವರೂಪವನ್ನು ಗುರುತಿಸುವುದಾದರೆ, ಅವರು ವಸಾಹತುಶಾಹಿಯ ವಿರೋಧವನ್ನು ತೀವ್ರತರವಾಗಿ ಮಾಡಿದರು. ಭಾರತವನ್ನು ಕಟ್ಟಿಹಾಕಿದ್ದು, ಅದರ ಸಹಜತೆಯನ್ನು ನಾಶಮಾಡಿರುವುದು ವಸಾಹತು ಪ್ರಭುತ್ವವೇ. ತನ್ನ ದುರಾಕ್ರಮಣದಿಂದ ಭಾರತೀಯ ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಬದುಕಿನ ಮೇಲೆ ನಿಯಂತ್ರಣವನ್ನು ಸಾಧಿಸಿದ್ದ ವಸಾಹತುಶಾಹಿಯನ್ನು ಕುವೆಂಪು ಅವರ ಕಾವ್ಯ ಬಹು ಆಯಾಮಗಳಿಂದ ಮುಖಾಮುಖಿಯಾಗಿ ಪ್ರತಿಕ್ರಿಯಿಸಿತು.

ವಸಾಹತು ಪ್ರಭುತ್ವ ಭಾರತದ ಮೇಲೆ ಹೇರಿದ್ದ ರಾಜಕೀಯ ಪ್ರಭುತ್ವವನ್ನು ವಿರೋಧಿಸಿದರೂ ಕುವೆಂಪು ಅವರು ಎಲ್ಲೂ ಭೌಗೋಳಿಕವಾದ ನೆಲೆಯಲ್ಲಿ ರಾಷ್ಟ್ರವನ್ನು ಗ್ರಹಿಸಲಿಲ್ಲ. ಅವರದ್ದು ಪ್ರಭುತ್ವ ಕೇಂದ್ರಿತವಾದ ರಾಷ್ಟ್ರೀಯತೆ

ಅಲ್ಲ. ಸಾಂಸ್ಕೃತಿಕ ರಾಷ್ಟ್ರೀಯತೆಯ ಕಲ್ಪನೆಯೇ ಕುವೆಂಪು ಅವರಲ್ಲಿ ಉದ್ದಕ್ಕೂ ಕಂಡು ಬರುವುದು.

ಬಿಡುಗಡೆಯ ಆಶಯವನ್ನು ಹೊಂದಿದ್ದ ಕವಿತೆಗಳು ಜನತೆಯನ್ನು ಪ್ರಭುತ್ವದ ವಿರುದ್ಧ ಕ್ರಿಯಾಶೀಲಗೊಳ್ಳುವಂತೆ ಪ್ರೇರೇಪಿಸುತ್ತಿದ್ದವು. ಭಾರತೀಯರ ಪತನದ ಹಿಂದಿರುವ ಮುಖ್ಯಕಾರಣವೇ ಅವರ ಜಡತೆ, ನಿಷ್ಕ್ರಿಯತೆ. ಇದನ್ನು ಅರಿತೇ ಕವಿ ಸಮುದಾಯದ ಕ್ರಿಯಾಶೀಲತೆಯೇ ರಾಷ್ಟ್ರೀಯತೆಯ ಅಭಿವ್ಯಕ್ತಿಯ ಮುಖ್ಯ ದಾರಿ ಎಂದು ಕೊಂಡಿದ್ದರು.

ಬ್ರಿಟಿಷರಿಂದ ಬಿಡುಗಡೆಗೊಳ್ಳುವ ರಾಷ್ಟ್ರ ಹೇಗಿರಬೇಕು ಎಂಬುದರ ಬಗ್ಗೆ ಕುವೆಂಪು ಅವರಲ್ಲಿ ಸ್ಪಷ್ಟ ಯೋಚನೆಗಳಿತ್ತು. ಅವರ ಕವಿತೆಗಳಲ್ಲಿ ವ್ಯಕ್ತವಾದಂತೆ, ಅವರು ವಿಜ್ಞಾನ ಮತಿಯುಳ್ಳ ಜನರಿಂದ, ಮೌಢ್ಯತೆಯನ್ನು ಕಳೆದ ಜನರಿಂದ ರಾಷ್ಟ್ರ ರೂಪುಗೊಳ್ಳಬೇಕು ಎಂದು ಯೋಚಿಸುತ್ತಿದ್ದರು. ಹೊಸಯುಗದಲ್ಲಿ ರೂಪುಗೊಳ್ಳುವ ಹೊಸ ರಾಷ್ಟ್ರದಲ್ಲಿ 'ಸರ್ವರಿಗೂ ಸಮ ಬಾಳು ಸರ್ವರಿಗೂ ಸಮಪಾಲು' ಸಿಗುವಂತಾಗಬೇಕು. ಬಡತನ ನಿವಾರಣೆಗೊಂಡು ಜಾತಿ–ಮತಗಳ ಕಚ್ಚಾಟದಿಂದ ಮುಕ್ತಗೊಂಡ ಸುಂದರ ರಾಷ್ಟ್ರವು ತಲೆ ಎತ್ತುವಂತಾಗಬೇಕು ಎಂದು ಬಯಸಿದ್ದರು. ಅವರಿಗೆ ರಾಷ್ಟ್ರೀಯತೆಯ ಭಾವ ಕಾವ್ಯಕ್ಕೆ ಒಂದು ವಸ್ತು ಅಷ್ಟೇ ಆಗಿರಲಿಲ್ಲ. ಆ ಮೂಲಕ ಮಾನವತೆಗೆ ಬಂಧನದಿಂದ ಅಂಟಿದ್ದ ಕಳಂಕವನ್ನು ನಿವಾರಿಸುವ, ಸ್ವಾತಂತ್ರ್ಯ ಸಹಜ ಸಂಗತಿಯಾಗುವಂತೆ ಮಾಡುವ ಆಸೆ ಹೊಂದಿದ್ದರು. ಸಮಷ್ಟಿಯ ಬದುಕಿನ ಹಿತಕ್ಕಾಗಿ ವ್ಯಕ್ತಿಯ ಬದುಕಿನ ತ್ಯಾಗವನ್ನು ಒಂದು ಮೌಲ್ಯವಾಗಿ ಪ್ರತಿಪಾದಿಸುತ್ತಾ, ರಾಷ್ಟ್ರವನ್ನು ಯಾವುದೋ ಬಗೆಯ ನಿರ್ಜೀವ ಭೂಪಟದ, ಭೂಖಂಡದ ರಚನೆಯಾಗಿ ಪರಿಭಾವಿಸಿ ಅದಕ್ಕಾಗಿ ಶೋಕಿಸದೆ, ಜೀವನ ಮಾನವರ, ಮಾನವೀಯ ಸಂಬಂಧದ ಸಂಸ್ಕೃತಿಯ ತವರಾಗಿ, ಸೌಖ್ಯದ ನೆಲೆಯಾಗಿ ಕಂಡವರು. ವಸಾಹತುಶಾಹಿಯನ್ನು ಅಷ್ಟೊಂದು ತೀವ್ರವಾಗಿ ವಿರೋಧಿಸಿದ್ದು ಅದು ಉಂಟು ಮಾಡುವ ಕ್ರೌರ್ಯಕ್ಕಾಗಿ, ಹಿಂಸೆಗಾಗಿ. ಸ್ವತಂತ್ರವಾದ ಬದುಕೇ ಶ್ರೇಷ್ಠವಾದುದು. ಬಲಿದಾನದ ಆದರ್ಶ ಬದುಕಿಗೆ ಅಂಟಿದ ಬಂಧನವನ್ನು ಕಳೆಯಲು. ಬಂಧನ ಕಳೆದ ಮೇಲೆ ಬದುಕೇ ಮುಖ್ಯ ಎಂಬ ಭಾವನೆಯನ್ನು ಕವಿ ಹೊಂದಿದ್ದರು. ಒಟ್ಟಿನಲ್ಲಿ ದಾಸ್ಯ ಪರಿಹಾರವಾಗಿ, ಪಾರತಂತ್ರ್ಯದಿಂದ ಬಿಡುಗಡೆಗೊಂಡು–ವಿಜ್ಞಾನದ ದೃಷ್ಟಿಯನ್ನು ಪಡೆದು ಜನರು ಸುಂದರವಾಗಿ

ಬಾಳುವಂತಾಗಲಿ, ಈ ಭಾರತದಲ್ಲಿ ದಾಸನು- ಈಶನಾಗಲಿ, ಆಗ ಭಾರತವೇ ಸ್ವರ್ಗವಾಗುವುದು ಎಂಬ ನಂಬಿಕೆಯನ್ನು ಹೊಂದಿದ್ದರು. ಕುವೆಂಪು ಅವರ ವೈಚಾರಿಕತೆಯು ಅರವಿಂದ, ರಾಮಕೃಷ್ಣ ಪರಮಹಂಸ, ವಿವೇಕಾನಂದರ ದಾರ್ಶನಿಕ ತತ್ವಾಧಾರಿತವೂ ಆಗಿದ್ದುದರಿಂದ ಕವಿತೆಗಳ ಕೇಂದ್ರ ಆಶಯ ಇತರೆಲ್ಲ ಕವಿಗಳಿಗಿಂತ ಭಿನ್ನವಾಗಿ ನಿಲ್ಲುವುದನ್ನು ಗುರುತಿಸಲು ಸಾಧ್ಯವಿದೆ. ದಾರ್ಶನಿಕ ತತ್ವಾದರ್ಶದ ಹಿನ್ನೆಲೆಯಲ್ಲಿ ರೂಪಿತಗೊಂಡ ಕುವೆಂಪು ಅವರ ರಾಷ್ಟ್ರ ನಿರ್ವಚನದ ಕವಿತೆಗಳು ಯುವಜನರನ್ನು ಎಚ್ಚರಿಸುವಂತೆ ರಾಷ್ಟ್ರ ಕಟ್ಟಲು ಹೋರಾಟಕ್ಕೆ ಮುಂದಾಗುವಂತೆ ಜಾಗೃತಿಯನ್ನು ಬಡಿದೆಬ್ಬಿಸುವ ಆಶಯವನ್ನು ವ್ಯಕ್ತ ಪಡಿಸುತ್ತವೆ.

### ೪.೪ ಬೇಂದ್ರೆ ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ:

ಕನ್ನಡದ ಕವಿಗಳು ತಮ್ಮ ರಚನೆಯೊಳಗೆ ರಾಷ್ಟ್ರದ ಕುರಿತು, ನಾಡಿನ ಕುರಿತು ನಡೆಸಿದ ಚಿಂತನೆಗಳು ಕೇವಲ ಭಾವುಕ ನುಡಿಗಳಲ್ಲ. ಅದು ಆ ಕವಿ ನಡೆಸಿದ ಒಂದು ಬಗೆಯ ವೈಚಾರಿಕ ಆಕೃತಿಯ ಶೋಧವೇ ಆಗಿದೆ. ಕವಿಯ ಅನುಭವಕ್ಕೆ ಬಂದ ಈ ಸಂಗತಿಗಳನ್ನು ಒಂದು ಭಾವ ಜಗತ್ತಿನ ಶ್ರೇಷ್ಠ ಅನುಭವ ಎಂದು ಗ್ರಹಿಸಬೇಕೇ ಹೊರತು ಸರಳೀಕರಣದ ನೆಲೆಯಲ್ಲಿ ಇದು ಕೇವಲ ಪ್ರತಿಕ್ರಿಯೆ ಎಂದು ನೋಡುವುದಲ್ಲ. ತನ್ನ ಸುತ್ತಲಿನ ಜಗತ್ತಿನ ಅನುಭವ ಸತ್ಯ ವಾಸ್ತವಕ್ಕೆ ಮುಖಾಮುಖಿಯಾದ ಕವಿ ತನ್ನೊಳಗಿನ ಹಲವು ಬಗೆಯ ಭಾವ ಸಂವೇದನೆಯಲ್ಲಿ ನಾಡಿಗೆ, ರಾಷ್ಟ್ರಕ್ಕೆ ಕವಿ ಧ್ವನಿಯಾದ ಬಗೆಯಾಗಿ ನೋಡಬೇಕು.

ಈ ಮಾತುಗಳ ಹಿನ್ನೆಲೆಯಲ್ಲಿ ನಾವು ಬೇಂದ್ರೆಯವರ ಕವಿತೆಗಳನ್ನು ನೋಡಬಹುದು. ಬೇಂದ್ರೆಯವರು ತಮ್ಮ ಕವಿತೆಗಳಲ್ಲಿ 'ರಾಷ್ಟ್ರ' 'ರಾಷ್ಟ್ರೀಯತೆ'ಯನ್ನು ಅಭಿವ್ಯಕ್ತಿಸಿದ ಬಗೆಯನ್ನು ಮತ್ತು ಅದರ ಸ್ವರೂಪವನ್ನು ಈ ಭಾಗದಲ್ಲಿ ನೋಡಬಹುದಾಗಿದೆ. ಬೇಂದ್ರೆಯವರ ಕಾವ್ಯದಲ್ಲಿ ಪ್ರಕಟಗೊಳ್ಳುವ ವಸಾಹತುಶಾಹಿ ಸಂಸ್ಕೃತಿಯ ಪ್ರತಿರೋಧದ ನೆಲೆಗಳು ಆ ಸಂದರ್ಭದಲ್ಲಿ ವಸಾಹತುಶಾಹಿ ಸಂಸ್ಕೃತಿಯ ಆಗಮನದಿಂದ ಕನ್ನಡನಾಡಿನ ಸಂಸ್ಕೃತಿಯ ಮೇಲೆ ಉಂಟಾದ ಪರಿಣಾಮಗಳ ಹಿನ್ನೆಲೆಯಿಂದಲೇ ರೂಪುಗೊಂಡದ್ದಾಗಿದೆ.

ಬೇಂದ್ರೆಯವರ ಕವಿತೆಗಳಲ್ಲಿ ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿಯ ಪ್ರಕಟೀಕರಣ ಮುಖ್ಯ ಆಶಯವಾಗಿ ಕಾಣಬಹುದಾಗಿದೆ. "ಬೇಂದ್ರೆಯವರ ಕಾವ್ಯ ವಸಾಹತು ಸಂಸ್ಕೃತಿಗೆ ತೋರಿದ ಪ್ರತಿರೋಧ, ರಾಷ್ಟ್ರೀಯತೆ, ಅಖಂಡ ಕರ್ನಾಟಕದ ಕಲ್ಪನೆ, ಕನ್ನಡದ ಅನನ್ಯತೆಯ ಪ್ರಶ್ನೆಗಳು, ದೇವರು –ಧರ್ಮಗಳ ಪಾರಂಪರಿಕ ದೃಷ್ಟಿಗೆ ಎದುರಾದ ಕ್ರಮ, ನೆಲ ಮತ್ತು ಮನುಷ್ಯ ಸಂಬಂಧಗಳು, ಗಂಡು–ಹೆಣ್ಣುಗಳ ಪ್ರೀತಿ, ಪ್ರೇಮ, ಹಸಿವು, ಅನ್ನ, ಐಂದ್ರಿಯಿಕ ಹಾಗೂ ಅತೀಂದ್ರಿಯ ಸಂಬಂಧಗಳು ಹೀಗೆ ವಿಭಿನ್ನ ನೆಲೆಗಳಲ್ಲಿ ಪ್ರಕಟವಾಗುತ್ತದೆ. ...... ಬೇಂದ್ರೆಯವರ ಕಾವ್ಯದ ಪ್ರಮುಖ ನೆಲೆಯೆಂದರೆ, ರಾಷ್ಟ್ರೀಯತೆ ಹಾಗೂ ಅಖಂಡ ಕರ್ನಾಟಕದ ಕಲ್ಪನೆ. ೧೯೧೮ರಿಂದ ೧೯೩೨ರ ವರೆಗೆ ಬರೆದ ಗರಿ ಸಂಕಲನದಲ್ಲಿನ ಪದ್ಯಗಳಲ್ಲಿ ಸ್ವಾತಂತ್ರ್ಯ ಹೋರಾಟದ ಕನಸು ಹಾಗೂ ಕರ್ನಾಟಕ ಏಕೀಕರಣವಾಗಬೇಕೆಂಬ ಅಭೀಪ್ಸೆಯೂ ಗಾಢವಾಗಿ ಪ್ರಕಟವಾಗುತ್ತದೆ "[೨೬] ಎಂಬ ಡಾ. ಕೆ.ಸಿ. ಶಿವಾರೆಡ್ಡಿಯವರ ಮಾತು ಅರ್ಥಪೂರ್ಣವಾಗಿದೆ. ಮುಂದುವರಿದು "ಬೇಂದ್ರೆಯವರ ಕಾವ್ಯದಲ್ಲಿ ಪ್ರಕಟಗೊಳ್ಳುವ ವಸಾಹತುಶಾಹಿ ಸಂಸ್ಕೃತಿಗೆ ತೋರಿದ ಪ್ರತಿರೋಧದ ಸ್ವರೂಪ ಅತ್ಯಂತ ಸಂಕೀರ್ಣವಾದುದು. ವಸಾಹತು ಸಂಸ್ಕೃತಿಯ ಆಗಮನದಿಂದ ಎದುರಾದ ತಲ್ಲಣಗಳಿಂದಲೂ ಅಂಥ ಸಂಸ್ಕೃತಿಯ ಪ್ರವೇಶದ ಪರಿಣಾಮವಾಗಿ ದೇಶಿಯ ಸಾಂಸ್ಕೃತಿಕ ಬದುಕಿಗೆ ಅನ್ಯರಾಗಿ ಬದುಕಿದ್ದರಿಂದಲೂ ಉಂಟಾದ ಗೊಂದಲಗಳು ತಮ್ಮ ಸುತ್ತಣ ಪರಿಸರದ ಶೋಧನೆಗೆ ಮುಖ ಮಾಡಿದ್ದು ಬೇಂದ್ರೆಯವರ ಕಾವ್ಯದ ಮುಖ್ಯ ಧೋರಣೆ" ಎನ್ನುತ್ತಾರೆ. ಒಟ್ಟಿನಲ್ಲಿ ಬೇಂದ್ರೆಯವರ ಕಾವ್ಯದ ಬಹುಮುಖ್ಯವಾದ ಆಯಾಮವಾಗಿ ರಾಷ್ಟ್ರೀಯತೆ ಹಾಗೂ ಕರ್ನಾಟಕದ ಏಕೀಕರಣದ ಕುರಿತ ಚಿಂತನೆಗಳನ್ನು ನೋಡಬಹುದಾಗಿದೆ.

ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟವು ಭಾರತೀಯ ಸಂದರ್ಭದಲ್ಲಿ ರಾಷ್ಟ್ರೀಯತೆಯ ಭಾವ ಪ್ರಕಟೀಕರಣದ ಅವಕಾಶವಾಗಿ ಒದಗಿಬಂದಿತು. ಈ ಬಿಡುಗಡೆಯ ಹಂಬಲದ ಜೊತೆಗೆ ರಾಷ್ಟ್ರವನ್ನು ಅದರ ಸಾಂಸ್ಕೃತಿಕ ಆಯಾಮದ ಮೂಲಕವೇ ತಾತ್ವೀಕರಿಸುವ ಬಗೆಯಲ್ಲಿ ಬೇಂದ್ರೆ ಕವಿತೆಗಳಿವೆ. ರಾಷ್ಟ್ರ ಎನ್ನುವುದು ಕೇವಲ ಒಂದು ಭೂ ಪ್ರದೇಶದ ಭೌತಿಕ ವಿವರಗಳಾಗದೇ ಮಾನವ ಉದಾತ್ತತೆಯು ಹರಳು ಗಟ್ಟುವ ಪ್ರಕ್ರಿಯೆಯ ಭಾಗವಾಗಿಯೇ ರಾಷ್ಟ್ರವನ್ನು ಮೂರ್ತೀಕರಿಸಿಕೊಳ್ಳುತ್ತಾರೆ.

ರಾಷ್ಟ್ರ ತನ್ನೊಳಗೆ ಎಲ್ಲಾ ಬಹುತ್ವದ, ವೈವಿಧ್ಯತೆಯ ನೆಲೆಯೇ ಆಗಿದ್ದು, ಅನ್ಯವನ್ನು ಕಲ್ಪಿಸಿ ತನ್ನ ರಾಷ್ಟ್ರವನ್ನು ಭಿನ್ನವಾಗಿಸಿ ಕಲ್ಪಿಸಿಕೊಳ್ಳುವ ಬದಲು ಬೇಂದ್ರೆ ಭೂಮಂಡಲವನ್ನೇ ಏಕರಾಷ್ಟ್ರವಾಗಿ ಪರಿಭಾವಿಸುತ್ತಾರೆ. ಇದು ಬೇಂದ್ರೆ ಕಲ್ಪನೆಯ ರಾಷ್ಟ್ರದ ವಿಶಿಷ್ಟ ಸ್ವರೂಪವೂ ಹೌದು. ಇದಕ್ಕೆ ಅವರ 'ಮಾತೃವಂದನ' ಕವಿತೆ ನಿದರ್ಶನವಾಗುತ್ತದೆ.

"ಭೂಮಂಡಲ ಏಕರಾಷ್ಟ್ರ
ಸರ್ವ ವರ್ಣ ಮಾನವ
ಕೃತಯುಗದ ಪರ್ವದಲ್ಲಿ
ಕಲಿತನೋ ನವೋನವಾ" (ಮಾತೃವಂದನ) [೨೭]

ಈ ಪದ್ಯದಲ್ಲಿ ಬೇಂದ್ರೆಯವರು 'ರಾಷ್ಟ್ರ' ಕಲ್ಪನೆಯ ಪರಿಧಿಯನ್ನು ವಿಸ್ತರಿಸುತ್ತಾರೆ. ಇಲ್ಲಿ 'ರಾಷ್ಟ್ರ' ಭಾಷೆಯಿಂದ, ಗಡಿಯಿಂದ, ಪ್ರಭುತ್ವದಿಂದ ಮಿತಗೊಳ್ಳುವುದಿಲ್ಲ. ಯಾವುದು ಆಧುನಿಕ ರಾಷ್ಟ್ರದ ಮಿತಿಯೋ, ಅಂದರೆ ಗಡಿಗಳು ರಾಷ್ಟ್ರದ ಗುರುತಿನ ಚೌಕಟ್ಟೋ, ಅದನ್ನು ಇಲ್ಲಿ ಕವಿ ಮೀರುತ್ತಾರೆ, ವಿಸ್ತರಿಸುತ್ತಾರೆ. 'ಏಕರಾಷ್ಟ್ರ' ಇಲ್ಲಿ ಪಶ್ಚಿಮ ಸೃಷ್ಟಿಸಿದ ವಸಾಹತಿನ ಪರಿಭಾಷೆಯಾಗಲಿ, ನಮ್ಮ ಕಾಲದ ಬಂಡವಾಳಶಾಹಿ ಕಲ್ಪನೆಯ ಜಾಗತಿಕರಣದ ಪರಿಭಾಷೆಯಾಗಲೀ ಆಗದೆ ಭಾವೈಕ್ಯದ ನೆಲೆಯಲ್ಲಿ ರೂಪುಗೊಂಡದ್ದಾಗಿದೆ. ಇದರ ಹಿಂದೆ ಸರ್ವ ಮಾನವರ ಒಳಿತನ ಆಕಾಂಕ್ಷೆಯಿದೆ. ಪರಸ್ಪರರಲ್ಲಿ ಮಾನವೀಯತೆಯು ಆವಿರ್ಭಾವವಾದಾಗ ವಿಶ್ವವೇ ರಾಷ್ಟ್ರವಾಗಬಲ್ಲದು. ಎಲ್ಲಾ ಮಾನವರನ್ನು ಅವರ ಜಾತಿ, ಭಾಷೆ, ಬಣ್ಣಗಳನ್ನು ಬದಿಗೆ ಸರಿಸಿ ಏಕಭಾವದಿಂದ ನೋಡುವ ಭಾವನೆಯನ್ನು ಬೆಳೆಸಬೇಕಾಗಿದೆ ಎನ್ನುವುದು ಇದರ ಹಿಂದಿರುವ ಆಶಯವೂ ಹೌದು. ಬೇಂದ್ರೆ ಬಯಸಿದ್ದು ಅಸಮಾನ ಸಂಬಂಧವನ್ನು ಹಾಗೆಯೇ ಉಳಿಸುವ ವಸಾಹತುಶಾಹಿ ನೆಲೆಯ ಅಥವಾ ಬಂಡವಾಳಶಾಹಿ ನೆಲೆಯ ಭೌತಿಕತೆಯನ್ನು ಹಂಚಬಲ್ಲ, ಹಂಚಲು ಅನುಕೂಲ ಕಲ್ಪಿಸಬಲ್ಲ ರಾಷ್ಟ್ರ ಪರಿಭಾಷೆಯನ್ನಲ್ಲ. ಈ ಪದ್ಯಭಾಗ ಬೇಂದ್ರೆಯ ರಾಷ್ಟ್ರ ಪರಿಕಲ್ಪನೆಯ ತಾತ್ವಿಕತೆಯನ್ನು ಪ್ರಸ್ತುತ ಪಡಿಸುತ್ತದೆ.

ಬಿಡುಗಡೆಯ ಹಂಬಲ ಭಾರತೀಯ ರಾಷ್ಟ್ರೀಯತೆಯ ಮುಖ್ಯ ಸ್ವರೂಪ. ಬೇಂದ್ರೆಯವರ "ಇಗೋ ಹೊರಟೆವು ಬಿಡುಗಡೆಗಾಗಿ" ಕವಿತೆ ಇಂಥ ಭಾವವನ್ನೇ ವ್ಯಕ್ತಪಡಿಸುತ್ತದೆ.

" ಮುಗಿಲೊಳಗೂ ಹಕ್ಕಿಗೆ ಹಾದಿ
ಕಡಲೊಳಗೂ ಮೀನಕೆ ಬೀದಿ
ಮಲೆಗಳೊಳೂ ಹೊಳೆಗೂ ಕೂಡಿ
ನಮಗಷ್ಟೇ ಏಕೀ ಬೇಡಿ?
ಅದಕಾಗಿ ತಾಗಿ ಸಾಗಿ
ಇಗೋ ಹೊರಟೆವು ಬಿಡುಗಡೆಗಾಗಿ !"

(ಇಗೋ ಹೊರಟೆವು ಬಿಡುಗಡೆಗಾಗಿ)[೨೮]

ಬೇಂದ್ರೆ 'ರಾಷ್ಟ್ರ'ವನ್ನು ಪರಕೀಯ ದಾಸ್ಯದಿಂದ ಬಿಡುಗಡೆಗೊಳಿಸುವುದಕ್ಕಾಗಿ ಹಂಬಲಿಸಿದವರು. ದಾಸ್ಯದ ನೊಗವು ದೇಶವಾಸಿಗಳ ಸ್ವಾಭಿಮಾನವನ್ನು ನಾಶಗೊಳಿಸುತ್ತಿದೆ. ಹೀಗಾಗಿ ಜನ ಶಕ್ತಿಯನ್ನು ಕಳೆದುಕೊಂಡಂತವರಾಗಿದ್ದಾರೆ. ಪ್ರಕೃತಿ ಸ್ವಾತಂತ್ರ್ಯಕ್ಕೆ ಪೂರಕ. ಹಾಗಾಗಿ ದಾಸ್ಯ, ಪಾರತಂತ್ರ್ಯ ಪ್ರಕೃತಿಗೆ ವಿರುದ್ಧವಾದುದು. ಹಕ್ಕಿಯಂತೆ, ಮೀನಂತೆ, ಹೊಳೆಯಂತೆ ಸ್ವಂತಿಕೆಯ ಬದುಕು ನಮಗೇಕಿಲ್ಲ? ಎಂಬ ಪ್ರಶ್ನೆಯಲ್ಲೇ, ಬಿಡುಗಡೆಯ ಒಂದು ಕೂಗಿದೆ. ರಾಷ್ಟ್ರಕ್ಕೆ ತೊಡಿಸಿದ ಬೇಡಿಯನ್ನು ಕಳಚುವ ಪ್ರಕ್ರಿಯೆಯಲ್ಲಿ ಬೇಂದ್ರೆ ರಾಷ್ಟ್ರವನ್ನು ನಿರ್ವಚಿಸಿಕೊಳ್ಳುತ್ತಾರೆ. ವಸಾಹತುಶಾಹಿ ಪ್ರಭುತ್ವ ತೊಡಿಸಿದ ಬೇಡಿ 'ರಾಷ್ಟ್ರ'ದ 'ಸ್ವ' ನಿರೂಪಣೆಗೆ, 'ಸ್ವ' ಬದುಕಿಗೆ ತೊಡಕಾಗಿರುವುದರಿಂದಲೇ ಅದನ್ನು ಕಳಚಬೇಕಾಗಿದೆ. ಹೀಗೆ ಕಳಚುವ ಒಂದು ಪ್ರಕ್ರಿಯೆಯಲ್ಲಿ ರಾಷ್ಟ್ರದ ಸ್ವರೂಪದ ಮತ್ತು ರಾಷ್ಟ್ರದ ನಿರ್ಮಾಣದ ಸಮಸ್ಯೆಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವಿದೆ.

ಬಿಡುಗಡೆಯ ಬಯಕೆ ಭಾರತೀಯ ರಾಷ್ಟ್ರೀಯತೆಯ ಮುಖ್ಯ ಲಕ್ಷಣ ಹಾಗೂ ಗುರುತು. ಈ 'ಬಿಡುಗಡೆ'ಯ ಆಶಯವೇ ಭಾರತೀಯ ರಾಷ್ಟ್ರೀಯತೆಯ ಮುಖ್ಯ ಸಂವೇದನೆಯಾಗಿದೆ. ಇದಕ್ಕೆ ಕಾರಣವೂ ಇದೆ. ಭಾರತೀಯ ಸಂದರ್ಭದಲ್ಲಿ 'ರಾಷ್ಟ್ರ'ದ ಕುರಿತು ನಡೆದ ಮುಖ್ಯ ಚರ್ಚೆಯ ಕಾಲಘಟ್ಟ ಬ್ರಿಟಿಷ್ ಆಳ್ವಿಕೆಯ ವಸಾಹತುಶಾಹಿ ಕಾಲಘಟ್ಟವೇ ಆಗಿದೆ. ನಮ್ಮ 'ರಾಷ್ಟ್ರ'ಪರಿಭಾಷೆಯ ನಿರ್ವಚನದ ಹಿಂದೆ ವಸಾಹತುಶಾಹಿಯ ಆಳ್ವಿಕೆಗೆ ಸಿಲುಕಿದ ಅನುಭವವಿದೆ. ಈ ಅನುಭವವೇ ನಮ್ಮ ರಾಷ್ಟ್ರದ ಸ್ವರೂಪವನ್ನು ನಿರ್ಧರಿಸಿ ಬಿಟ್ಟಿರುವುದರಿಂದ ಸಹಜವಾಗಿಯೇ ನಾವು ರಾಷ್ಟ್ರವನ್ನು 'ಬಿಡುಗಡೆಯ ಹಂಬಲ' ; 'ಸ್ವಾತಂತ್ರ್ಯದ ಕನಸುಗಳ' ಜೊತೆಗೆ ಸಮೀಕರಿಸಿಕೊಂಡಿದ್ದೇವೆ.

ಈ ಹೇಳಿಕೆ ಕೇವಲ ಸರಳೀಕೃತ ಹೇಳಿಕೆಯಲ್ಲ. ಕನ್ನಡದ ಸಂದರ್ಭದಲ್ಲಿ ರಾಷ್ಟ್ರ ಪರಿಕಲ್ಪನೆ ಮತ್ತೆ ಮತ್ತೆ ಸ್ವಾತಂತ್ರ್ಯದ ಹಂಬಲದೊಂದಿಗೆ ಮೂರ್ತರೂಪವನ್ನು ಪಡೆದು ಕೊಂಡಿರುವುದನ್ನು ನೋಡಬಹುದಾಗಿದೆ.ಹಾಗಾಗಿ ರಾಷ್ಟ್ರ ಪುನರ್ ನಿರ್ಮಾಣದ ಕಲ್ಪನೆಗಳು ವಸಾಹತುಶಾಹಿ ವಿರೋಧಿ ನೆಲೆಯಲ್ಲಿ ಅನಾವರಣಗೊಳ್ಳುತ್ತದೆ.

ಪ್ರಸ್ತುತ ಈ ಮೇಲಿನ ಕವಿತೆಯೂ ಕೂಡ ಮುಗಿಲು ಹಕ್ಕಿಗೆ, ಕಡಲು ಮೀನಿಗೆ, ಮಲೆಗಳು ಹೊಳೆಗೆ ಮುಕ್ತವಾಗಿದೆ. ನಿರ್ಬಂಧರಹಿತವಾಗಿವೆ. ಆದರೆ ಭಾರತದೊಳಗೆ ದೇಶವಾಸಿಗಳಿಗಷ್ಟೇ ನಿರ್ಬಂಧವಿದೆ. ಅದಕ್ಕಾಗಿ ಈ ಬಂಧನವನ್ನು ಕಳಚಿ ಬಿಡುಗಡೆಗಾಗಿ ಹೊರಟೆವು ಎಂಬ ಘೋಷಣೆಯೇ ಕವಿತೆಯ ಶಕ್ತಿಯುತ ಸಾಲುಗಳಾಗುತ್ತದೆ. ಬಂಧನವನ್ನು ದಿಕ್ಕರಿಸುವುದರಲ್ಲಿಯೇ ಕವಿತೆ ಮೈ ಪಡೆದು ಕೊಳ್ಳುತ್ತದೆ. ಬಂಧನ ಎನ್ನುವ ನಿಸರ್ಗ ವಿರೋಧಿ ಕ್ರಿಯೆಯನ್ನು ಪ್ರಶ್ನಿಸುವುದರ ಮೂಲಕ 'ರಾಷ್ಟ್ರೀಯ' ಭಾವನೆಯನ್ನು ಪ್ರಚೋದಿಸುತ್ತಾರೆ. ರಾಷ್ಟ್ರೀಯ ಚಳುವಳಿಯ ಕಾಲದಲ್ಲಿ ಇಂತಹ ಕವಿತೆಗಳೇ ಜನರನ್ನು ಚಳುವಳಿಯಲ್ಲಿ ಪಾಲ್ಗೊಳುವಂತೆ ಹುರಿದುಂಬಿಸಿದ್ದು.

ವಸಾಹತುಶಾಹಿಯು ತಂದೊಡ್ಡಿದ ಗುಲಾಮಿತನವನ್ನು ಪ್ರಶ್ನಿಸುತ್ತಲೇ ಕವಿ ಈ ಬಗೆಯ ಗುಲಾಮಿತನವನ್ನು ಕೊರಳೊಡ್ಡಿ ಒಪ್ಪಿಕೊಂಡ ಭಾರತೀಯರ ಪೌರುಷ ಹೀನತೆಯನ್ನು ಹೇಡಿತನವನ್ನು ಕಟು ಉಕ್ತಿಗಳಿಂದ ವ್ಯಂಗ್ಯ ಮಾಡುತ್ತಾರೆ. ಈ ವ್ಯಂಗ್ಯ ಇನ್ನಷ್ಟು ಮೊನಚು ಪಡೆದುಕೊಳ್ಳಲು ಕಾರಣವಾಗುವುದು ಕವಿ ಆಯ್ದು ಬಳಸುವ ಪೌರಾಣಿಕ ಪರಿಭಾಷೆಗಳು, ಚಿತ್ರಣಗಳು. ಪುರಾಣ ಕಾಲದಿಂದ ತೊಡಗಿ ಶೌರ್ಯವನ್ನು ಮರೆದ ನಾಡು ಮತ್ತೆ ಬಿಡುಗಡೆಗಾಗಿ ದೊಡ್ಡ ಕಾಣಿಕೆಯನ್ನೇ ಬಯಸುತ್ತದೆ. ಅದೇ 'ನರಬಲಿ'. ಬೇಂದ್ರೆಯವರ 'ನರಬಲಿ' ಕವಿತೆ ಬಹು ಚರ್ಚಿತ ಕವನ. ಈ ಕವನವನ್ನು ಬರೆದ ಕಾರಣಕ್ಕಾಗಿಯೇ ಕವಿ ಜೈಲು ಶಿಕ್ಷೆಯನ್ನೂ ಅನುಭವಿಸಬೇಕಾಯಿತು. ಕಾರಣ ಈ ಕವಿತೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಜನರನ್ನು ಹೋರಾಡುವಂತೆ ಪ್ರಚೋದಿಸುತ್ತದೆ ಎಂಬ ಆರೋಪ. ಜಡಗೊಂಡು ದಾಸ್ಯವನ್ನು ಒಪ್ಪಿಕೊಂಡಂತೆ ಜೀವಿಸುತ್ತಿದ್ದ ಜನರನ್ನು ಒಂದು ದೊಡ್ಡ ಕ್ರಾಂತಿಗೆ ಹುರಿದುಂಬಿಸುವಂತಿದೆ ಈ ಕವನ. ಜನರ ಮೌನವನ್ನು ನಿಷ್ಕ್ರಿಯತೆಯನ್ನು ಕಂಡು ವೀರತ್ವದ ಭಾಷೆಯಲ್ಲಿ ಪ್ರಶ್ನಿಸುತ್ತಾರೆ.

"ಮುಕ್ಕಣ್ಣನ ಆ ಮೂರು ಕಣ್ಣುಗಳು
ಕುರುಡೇ ಕುರುಡೇ?
ಭೂ ಶ್ರೀಪತಿಯಾ ನಾಲ್ಕೂ ಕೈಗಳೂ
ಮೊಂಡೇ ಮೊಂಡೇ?
ವೇದವುಸುರಿದವನ ನಾಲ್ಕೂ ಮುಖಗಳು
ಮೂಕೇ ಮೂಕೇ? ............
ಅಮರರೆಂಬವರು ಕೊಳೆಯದ ಹೆಣಗಳೋ
ಮುಚ್ಚದ ಕಣ್ಗಳು ಮುಚ್ಚಿದ ಕಣ್ಗಳೋ? ..
ಏನಿದು ಏನಿದು ಏನನ್ಯಾಯ ? ..........
.......... ನೆತ್ತರ ಹೇಡಿಯೆ ಮುಚ್ಚೆಲೆ ಬಾಯ
ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು !
ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ ! " (ನರಬಲಿ) ೨೯

ಈ ಸಾಲುಗಳು ಭಾರತೀಯ ಸಂದರ್ಭದಲ್ಲಿ ಶೌರ್ಯದ, ವೀರತ್ವದ ಪ್ರತೀಕಗಳಾಗಿ, ಜ್ಞಾನದ ಸಂಕೇತವಾಗಿದ್ದ ಪೌರಾಣಿಕ ಚಿಹ್ನೆಗಳು ತನ್ನ ಅರ್ಥವನ್ನು ಕಳೆದುಕೊಂಡು ಮೌನವಾಗಿರುವುದನ್ನು ಪ್ರಶ್ನಿಸುತ್ತಿದೆ. ಶೌರ್ಯ ಪರಾಕ್ರಮಗಳನ್ನು, ಜ್ಞಾನವನ್ನು ಪ್ರತೀಕಗಳನ್ನಾಗಿಸಿಕೊಂಡು ಆರಾಧಿಸುವ ನೆಲದಲ್ಲಿ ಜನರು ದಾಸ್ಯವನ್ನು ಒಪ್ಪಿಕೊಂಡದ್ದೇಕೆಂಬ ಪ್ರಶ್ನೆಗೆ ಕವಿಯು ಉತ್ತರ ಹುಡುಕಲು ಹೊರಟಂತಿದೆ. ಮುಕ್ಕಣ್ಣನಿಗೆ ಮೂರು ಕಣ್ಣುಗಳಿದ್ದರೂ ಎಲ್ಲವೂ ಕುರುಡಾದುದು ಯಾಕೆ? ಭೂ-ಶ್ರೀಪತಿಗೆ ನಾಲ್ಕು ಕೈಗಳಿದ್ದರೂ ನಾಲ್ಕೂ ಮೊಂಡಾದುದೇಕೆ? ವೇದಗಳನ್ನು ಹೇಳಿದವರ ನಾಲ್ಕು ಬಾಯಿಗಳೂ ಮಾತು ಕಳೆದುಕೊಂಡು ಮೂಕವಾದುದೇಕೆ? ಅಮರರು ಜೀವಂತಿಕೆಯನ್ನು ಕಳೆದುಕೊಂಡು ಕೊಳೆಯದ ಹೆಣಗಳಾದುದೇಕೆ? ಎಂಬ ಪ್ರಶ್ನೆಗಳಲ್ಲಿ ಭಗವಂತನನ್ನೇ ಪ್ರಶ್ನಿಸುತ್ತಿರುವಂತೆ ತೋರಿದರೂ, ಆಶಯದಲ್ಲಿ ಇಂತಹ ಭಗವಂತನನ್ನು ಆರಾಧಿಸುವ ಜನರ ನಿಷ್ಕ್ರಿಯತೆಯ ಬಗ್ಗೆ ಹೆಚ್ಚು ಆಕ್ರೋಶ ಇದೆ. ಕಣ್ಣುಗಳು ಕುರುಡಾದ, ಕೈಗಳು ಮೊಂಡಾದ, ಬಾಯಿಗಳು ಮೂಕವಾದಂತಹ ಸ್ಥಿತಿಯಿಂದ ಒಂದು ಸಮಾಜ ಮೇಲೇಳಬೇಕಾದರೆ ಕವಿ ಕೇಳುವುದು "ನರಬಲಿಯೇ ಬೇಕು!" ಎಂದು. ಈ ನರಬಲಿ ಭಾರತದ ಬಿಡುಗಡೆಯ ಆಶಯಕ್ಕೆ ಸಂಕೇತವಾಗುತ್ತದೆ. ನರಬಲಿ ಕೇವಲ ಬಲಿಯಲ್ಲ. ಶಕ್ತಿಯ ಆರಾಧನೆಯ ನೆಲೆಯಿಂದ ಇದು ಕಾಳಿಯ ಪೂಜೆಯಾಗುತ್ತದೆ. ಯಾರು

ಧೈರ್ಯಗೇಡಿಗಳಿದ್ದಾರೋ ಅವರಷ್ಟೇ ಇದನ್ನು ಯುದ್ಧ ಎನ್ನುತ್ತಾರೆ ಎಂಬ ಮಾತನ್ನು ಗಮನಿಸಬೇಕು. ಜನರು ಸಿದ್ಧರಾಗಬೇಕಾದುದು ಯುದ್ಧಕ್ಕಾಗಿ ಅಲ್ಲ. ಅವರು ತಮ್ಮ ಆರಾಧನಾ ಪರಂಪರೆಯ ಚೌಕಟ್ಟಿನಲ್ಲೇ ಕಾಳಿಯ ಪೂಜೆಗೆ ಸಿದ್ದರಾಗಬೇಕು ಎನ್ನುತ್ತಾರೆ. 'ನರಬಲಿ' ಕವಿತೆ ವಸಾಹತುಶಾಹಿ ವ್ಯವಸ್ಥೆಯು ಉಂಟು ಮಾಡಿದ ಪಾರತಂತ್ರ್ಯವನ್ನು ಕಳೆದುಕೊಂಡು ಯಾವುದೇ ರೀತಿಯ ಬಂಧನಕ್ಕೆ ಸಿಲುಕದ ಬದುಕನ್ನು ಆಶಿಸುವ ಕವಿತೆ. ಜೊತೆಗೆ ಯುದ್ಧದ ದುಷ್ಪರಿಣಾಮವನ್ನು ಹೇಳುತ್ತದೆ. ಅದರೆ ಪಾರತಂತ್ರ್ಯದಿಂದ ಬಿಡುಗಡೆ ಹೊಂದಬೇಕಾದುದು ನಿಶ್ಚಯ ಎನ್ನುತ್ತದೆ.

ಭಾರತೀಯ ಸಂದರ್ಭದಲ್ಲಿ 'ರಾಷ್ಟ್ರ'ದ ಸ್ವರೂಪ ಮೂರ್ತಗೊಳ್ಳುವುದು ಇಲ್ಲಿನ 'ಧರ್ಮ' 'ಸಂಸ್ಕೃತಿ'ಯ ಪ್ರತೀಕಗಳ ಮೂಲಕವೇ. ಜನಸಾಮಾನ್ಯರನ್ನು ಗುಲಾಮಿತನದ ಕೇಡಿನ ವಿರುದ್ಧ ಹುರಿದುಂಬಿಸಬೇಕೆಂದಿದ್ದಾಗ ಬಳಸಿದ ಪರಿಭಾಷೆ ಇದಾಗಿತ್ತು. ಪರೋಕ್ಷವಾಗಿ ಕಣ್ಣು ಇದ್ದು ಕುರುಡಾದ, ಕೈ ಇದ್ದು ಮೊಂಡಾದ, ಬಾಯಿ ಇದ್ದು ಮೂಕವಾದ, ಅಮರತ್ವ ಇದ್ದು ಹೆಣವಾದ ಸ್ಥಿತಿ ಇಲ್ಲಿನ ಜನರದ್ದು. ಇಂತಹ ಸ್ಥಿತಿಯಿಂದ ಹೊರ ಬರುವಂತಾಗಲು ವೀರತ್ವದ ಭಾಷೆಯೇ ಮುಖ್ಯವಾಗುತ್ತದೆ. ಹಾಗಾಗಿ ಕವಿ 'ನೆತ್ತರ ಹೇಡಿಯೋ ಮುಚ್ಚೆಲೆ ಬಾಯ' ಎನ್ನುತ್ತಾರೆ. ನೆತ್ತರಿಗೆ ಹೆದರುವ ವ್ಯಕ್ತಿ ಕಾಳಿಯ ಪೂಜೆಯನ್ನು ಮಾಡಲಾರ. ಅಂದರೆ ಶಕ್ತಿಹೀನ, ಧೈರ್ಯಹೀನ ವ್ಯಕ್ತಿ ಸ್ವಾತಂತ್ರ್ಯದ ಕದನದಲ್ಲಿ ನಿಷ್ಪ್ರಯೋಜಕ. ಆದರೆ ಪ್ರತಿಯೊಬ್ಬರನ್ನು ಎಚ್ಚರಿಸುವುದು ಈ ಕವಿತೆಯ ಮುಖ್ಯ ಉದ್ದೇಶವಾಗಿದೆ.

ಬೇಂದ್ರೆಗೆ 'ರಾಷ್ಟ್ರ'ದ ಸ್ವರೂಪ ಸಾಕಾರವಾಗುವುದು ರಾಷ್ಟ್ರದ ಸ್ವತಂತ್ರ ಅಸ್ತಿತ್ವದ ಮೂಲಕ. ಯಾವಾಗ ಈ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವುದೋ ಅದು ರಾಷ್ಟ್ರದ ಅಸ್ತಿತ್ವದ ನಿಜವಾದ ಸವಾಲಾಗುತ್ತದೆ. ಈ ಸವಾಲನ್ನು ಎದುರಿಸುವಲ್ಲೇ ರಾಷ್ಟ್ರವಾಸಿಗಳ ನಿಜವಾದ ರಾಷ್ಟ್ರಧರ್ಮ ಪ್ರಕಟವಾಗುವುದು. ಈ ರಾಷ್ಟ್ರ ಧರ್ಮದ ಪ್ರಕಟನೆಗೆ ಅರಿವು ಅಗತ್ಯ. ರಾಷ್ಟ್ರವಾಸಿಗಳಲ್ಲಿ ಇಂತಹ ಅರಿವನ್ನು ಈ ಕವನ ಉಂಟುಮಾಡುತ್ತದೆ. ಈ ಹೋರಾಟ ಕೇವಲ ಮೇಲುಸ್ತರದ, ಕೆಲವು ವರ್ಗದ ಜನರ ಕ್ರಿಯೆಯಾಗದೇ ಅದು ವ್ಯಾಪಕತೆಯನ್ನು ಪಡೆದುಕೊಳ್ಳಬೇಕಾಗಿದೆ. ಹಾಗಾಗಿ ಮುಪ್ಪಿನ ತಾಯಂದಿರು, ಮುದಿ ತಂದೆಯವರು, ಚಿಕ್ಕ ಮಕ್ಕಳು, ಅಕ್ಕ ತಂಗಿಯರು, ಹೆಂಡತಿಯರು, ಹೀಗೆ ಪ್ರತಿಯೊಬ್ಬರೂ ಅವರವರ ಕೈ

ಸಾಮರ್ಥ್ಯಕ್ಕೆ ತಕ್ಕಂತೆ ಬಿಡುಗಡೆಯ ಹೋರಾಟಕ್ಕೆ ತಮ್ಮ ಸಹಭಾಗಿತ್ವವನ್ನು ನೀಡಬೇಕು ಎಂಬ ಆಗ್ರಹ ಇಲ್ಲಿದೆ.

ಬೇಂದ್ರೆಯವರಿಗೆ 'ರಾಷ್ಟ್ರ' ಅಸಮಾನ ಸಂಬಂಧದ ಶ್ರೇಣೀಕೃತ ರಚನೆ ಅಲ್ಲ. ಅವರು ಮಾನವತಾವಾದಿ ನೆಲೆಯ ಸಮಾನ ಸಂಬಂಧದ ಸ್ವರೂಪದ ನೆಲೆಯ ರಾಷ್ಟ್ರವನ್ನು ಕಲ್ಪಿಸಿಕೊಳ್ಳುತ್ತಾರೆ. ಅವರ 'ಯುದ್ಧ ಬಂತು ಮನೆಯವರೆಗೆ' ಕವನದಲ್ಲಿ ರಾಷ್ಟ್ರದ ಸಂಬಂಧದ ಸ್ವರೂಪ ಹೀಗೆ ರೂಪು ತಾಳುತ್ತದೆ.

" ನರಮನುಷ್ಯ ಒಂದೆ ಜಾತಿ
ಎಲ್ಲ ಜನಕೆ ಒಂದೆ ನೀತಿ
ಹಾಡಿರಿ ನವ ಕರ್ಮ ಗೀತಿ
ಹಾಡಿ ಮುಂದೆ ಸಾಗಿರಿ
ನೋವ ಕಂಡು ನೋಯಿರಿ
ಕೊಲೆಯಿಂದಲು ಕಾಯಿರಿ
ಅಮೃತರಾಗಿ ಸಾಯಿರಿ" [೩೦] ( ಯುದ್ಧ ಬಂತು ಮನೆಯವರೆಗೆ)

ಯುದ್ಧ ಮನೆಯವರೆಗೆ ಬಂದಾಗಿದೆ. ಈಗಲಾದರೂ ಒಂದಾಗಬೇಕಾಗಿದೆ. ಈಗ ಇದು ರಾಷ್ಟ್ರದ ಅವಶ್ಯಕತೆ. ಮನುಷ್ಯರೆಲ್ಲ ಒಂದೇ ಜಾತಿ, ಎಲ್ಲರಿಗೂ ಒಂದೇ ನೀತಿ ಎನ್ನುವುದು ಕೇವಲ ಘೋಷಣೆ ಅಲ್ಲ. ಅದು ಕಾಲಧರ್ಮವೂ ಹೌದು. ನಮ್ಮೊಳಗಿನ ಒಡಕಿನಿಂದ ದಾಸ್ಯಕ್ಕೆ ತುತ್ತಾದೆವು. ಇನ್ನೊಬ್ಬರ ನೋವಿಗೆ ನೋಯದಂತಹ ಕಟುಕರಾದೆವು. ಅದರ ಪರಿಣಾಮ ಅನುಭವಿಸಿ ಆಗಿದೆ. ಈಗಲಾದರೂ ಎಲ್ಲರೂ 'ನವಕರ್ಮಗೀತೆ'ಯನ್ನು ಒಕ್ಕೊರಳಿನಿಂದ ಹಾಡಬೇಕಾಗಿದೆ. ನಾಡ ಬಂಧುಗಳನ್ನು ಸಾಮ್ರಾಜ್ಯಶಾಹಿಯ ಕೊಲೆಯಿಂದ ಕಾಯಬೇಕಾಗಿದೆ. ಈ ಕಾಯುವ ಪ್ರಕ್ರಿಯೆಯಲ್ಲಿ, ಹೋರಾಟದಲ್ಲಿ ಸಾಯುವುದಾದರೆ, ಈ ಸಾವೂ ಕೂಡ ಅಮೃತವಾದುದು ಎನ್ನುವುದೇ ಕವಿಯ ನಿಲುವು. 'ನಿಮ್ಮ ನೀವೆ ಆಳಿರಿ, ಬಂದ ಕಷ್ಟ ತಾಳಿರಿ' ಎನ್ನುವುದು ಕವಿ ಹೋರಾಟಕ್ಕೆ ನೀಡುವ ಸ್ಫೂರ್ತಿ. ಅನ್ಯರ ಆಳ್ವಿಕೆಗೆ ತಲೆಕೊಟ್ಟು ಸುಖದ ಬದುಕನ್ನು ಬಯಸುವ ಹೇಡಿತನವನ್ನು ಬಿಟ್ಟು, ನಮ್ಮನ್ನು ನಾವೇ ಆಳಿಕೊಂಡು ಬರಬಹುದಾದ ಸಂಕಷ್ಟಗಳನ್ನು ತಾಳಿ, ಎದುರಿಸಿ ಬದುಕುವ ಬಾಳು ಶ್ರೇಷ್ಠ ಎಂಬ ಮಹತ್ವದ ಸಂದೇಶವನ್ನು ಕವಿ ಇಲ್ಲಿ ನೀಡುತ್ತಿದ್ದಾರೆ. ನಮ್ಮನ್ನು ನಾವೇ ಆಳಿಕೊಳ್ಳುವುದಕ್ಕೆ ಆಧಾರ

ಭಾವನೆ 'ನರಮನುಷ್ಯ ಒಂದೆ ಜಾತಿ' ಎನ್ನುವುದು. ಇಲ್ಲಿನ ಜನರಲ್ಲಿ ಮೂಲತಃ ಯಾವುದೇ ವ್ಯತ್ಯಾಸವಿಲ್ಲ. ಆದರೆ ಸಂಕುಚಿತವಾದಿಗಳಾಗಿ ನಮ್ಮನ್ನು ನಾವು ಕುಗ್ಗಿಸಿಕೊಂಡಿದ್ದೇವೆ. 'ವಸುದೈವ ಕುಟುಂಬಕಂ' ಎಂದು ಸಾರಿದ ನೆಲದಲ್ಲಿ ಜಾತಿ ಮನುಷ್ಯರನ್ನು ವಿಭಜಿಸಿದೆ. ಆ ಕಾರಣದಿಂದ ಗೊಂದಲ ಸಂಘರ್ಷಗಳು ಹೆಚ್ಚಿದೆ. 'ತನ್ನವರು' ಮತ್ತು 'ಅನ್ಯರು' ಎಂಬ ಕೃತಕ ವಿಭಜನೆಗೆ ಕಾರಣವಾಗಿದೆ. ಇದನ್ನು ಕವಿ ನಿರಾಕರಿಸುತ್ತಾರೆ. ಯಾಕೆಂದರೆ ಯುದ್ಧ ಈಗ ಮನೆಯ ವರೆಗೂ ಬಂದಿದೆ. ಹಾಗಾಗಿ ಬನ್ನಿ ಒಂದಾಗಿ ಎಂಬ ಸಂದೇಶ ಮುಖ್ಯವಾಗುತ್ತದೆ. ಬಹುಜಾತಿ, ಬಹುಜನ, ಬಹುನೀತಿಗಳನ್ನು ಐಕ್ಯಗೊಳಿಸಿಕೊಂಡು ಮುಂದುವರಿಯಬೇಕಾಗಿದೆ ಎಂಬ ಸಂದೇಶ ಇಲ್ಲಿನದು. ರಾಷ್ಟ್ರವನ್ನು 'ಬಂಧುತ್ವ'ದ ಆಧಾರದಲ್ಲಿ ಪರಿಕಲ್ಪಿಸಿ ಕೊಳ್ಳುತ್ತಾರೆ.

'ರಾಷ್ಟ್ರ' ಬಂಧುತ್ವದ ನೆಲೆಯಿಂದ ರೂಪ ಪಡೆಯುತ್ತಿರುವುದನ್ನು, ಬೇಂದ್ರೆ ಕವಿತೆ ಮತ್ತೆ ಮತ್ತೆ ನಿರೂಪಿಸುತ್ತದೆ. ಜನರನ್ನು, ಭೂಮಿಯನ್ನು ಎಲ್ಲೂ ವಿಭಜಿಸಿ ನೋಡುವುದಿಲ್ಲ. ಅವರ 'ನವಯುಗಾರಂಭ' ಕವಿತೆ ಇದಕ್ಕೆ ಒಂದು ನಿದರ್ಶನ.

"ಹಳ್ಳಿ ಹಳ್ಳಿ ಸಕಲ ಭೋಜ್ಯ
ಭಾರತವಿದು ಅವಿಭಾಜ್ಯ
ಜಗತ್ತೆಲ್ಲ ಏಕರಾಜ್ಯ
ಸಾರಲಿ ಶ್ರುತಿಗೆ
    ಸೌಜನ್ಯದ ಶಕ್ತಿ ಬೆಳೆದು
    ಸತ್ಯದಲ್ಲಿ ಪ್ರೀತಿ ಮೊಳೆದು
    ಆನಂದವೇ ರೂಪ ತಳೆದು
    ಆಗಲಿ ಸುಪ್ರೀತ" [೩೧] (ನವಯುಗಾರಂಭ)

ಸಮೃದ್ಧ, ಸುಂದರ 'ರಾಷ್ಟ್ರ' ರೂಪುಗೊಳ್ಳುವುದು 'ಸಕಲ'ವೂ ಸೇರಿದಾಗ. ಭಾರತವಿದು ಅವಿಭಾಜ್ಯ ಎನ್ನುವಾಗ ಭಾರತ ಒಟ್ಟು ಜಗತ್ತಿನ ಭೂಭಾಗದಿಂದಲೇ ಅವಿಭಾಜ್ಯ ಎನ್ನುವಂತಿದೆ. ಭಾರತದ ಒಳಗಿಂದಷ್ಟೇ ಅಲ್ಲ, ಹೊರಗಿನಿಂದಲೂ ಅವಿಭಾಜ್ಯ ಎನ್ನುವಂತಿದೆ. ಯಾವ ನೆಲೆಯಲ್ಲೂ ವಿಭಜಿತ ಅಲ್ಲ, 'ಜಗತ್ತೆಲ್ಲ ಏಕರಾಜ್ಯ' ಎನ್ನುವಾಗ 'ವಸುದೈವ ಕುಟುಂಬಕಂ' ಎಂಬ ಮಾತು ನೆನಪಾಗುತ್ತದೆ. ಪರಕೀಯರು ಬಂದು ಆಳ್ವಿಕೆಯನ್ನು ಮಾಡುತ್ತಿರುವುದು ಸತ್ಯವೇ ಅದರೂ ಇದು ಶಾಶ್ವತವಲ್ಲ. ಹಾಗಾಗಿ ಭಾರತವು ಅವಿಭಾಜ್ಯವೇ. 'ಜಗತ್ತೆಲ್ಲ ಏಕರಾಜ್ಯ' ಎಂದು ಬಯಸುವುದೂ ಈ ಹಿನ್ನೆಲೆಯಿಂದಲೇ. 'ಭಾರತವನ್ನು ಅವಿಭಾಜ್ಯ' ಎಂದು 'ಏಕರಾಜ್ಯ' ಎಂದು

ಚಿತ್ರಿಸುವುದರ ಹಿಂದೆ ಅಖಂಡತೆಯನ್ನು ನಿರೂಪಿಸುವ ತುಡಿತವಿದೆ. ಈ ಬಗೆಯ 'ಏಕತೆ'ಯನ್ನು ಬಯಸುವುದು ಕಾಲದ ಅವಶ್ಯಕತೆಯೂ ಆಗಿತ್ತು.

'ಏಕರಾಜ್ಯ' ಎನ್ನುವುದು ಭಾಷೆಯನ್ನು, ಸಾಂಸ್ಕೃತಿಕ ಭಿನ್ನತೆಯನ್ನು ಮೀರಿ ರೂಪುಗೊಳ್ಳುವುದು. ಕವಿಗೆ ಗಡಿ, ಭಾಷೆ, ಭಿನ್ನತೆ, ವೈವಿಧ್ಯತೆಗಳು ಒಂದೆಂಬ ಭಾವಕ್ಕೆ ವಿರೋಧಿ ಸಂಗತಿಗಳಲ್ಲ. ಏಕವಾಗುವುದು ಎಂದರೆ ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳುವುದು ಎಂದು ಭಾವಿಸಬೇಕಾಗಿಲ್ಲ. ತನ್ನ 'ಸ್ವ' ಗುರುತನ್ನು ಉಳಿಸಿಕೊಂಡೇ ಸೃಷ್ಟಿ ಸಮಸ್ತದ ಒಂದು ಭಾಗವೇ ಆಗಿಬಿಡುವುದು. ಜಗತ್ತೆಲ್ಲ ಏಕರಾಜ್ಯ ಕಲ್ಪನೆಯಲ್ಲಿ ವಿಭಜಿಸಿ ರಾಜ್ಯ ಕಟ್ಟುವ ಕಾರಣಕ್ಕಾಗಿ ಉಂಟಾದ ಸಂಘರ್ಷವನ್ನು, ಹಿಂಸೆಯನ್ನು ಮೀರುವ ಉದ್ದೇಶವೂ ಇದ್ದಂತಿದೆ. ಇಂತಹ ಏಕತೆಯಿಂದ ರೂಪುಗೊಳ್ಳುವುದು ಪ್ರಜಾಪೀಡಕ ರಾಷ್ಟ್ರವಲ್ಲ, ಅದು ಸೌಜನ್ಯದ ಶಕ್ತಿಯಾಗಿ ಬೆಳೆಯಬೇಕು. ಸತ್ಯದಲ್ಲಿ ಪ್ರೀತಿ ಬೆಳೆಯಬೇಕು. ಇಲ್ಲಿ ದ್ವೇಷಕ್ಕೆ ಎಡೆಯಿಲ್ಲ. ರಾಷ್ಟ್ರವು ಆನಂದವೇ ರೂಪು ತಳೆದ ಪ್ರತೀಕವಾಗಬೇಕು ಎಂದು ಬಯಸುವುದು ಮಾನವೀಯ ನೆಲೆಯ ಬಯಕೆ. ಇನ್ನೊಂದೆಡೆ ಈ ಸಾಲುಗಳೇ ರಾಷ್ಟ್ರವನ್ನು ನಿರೂಪಿಸುತ್ತದೆ. ತನ್ನಲ್ಲಿಯ ಶಕ್ತಿಯ ಕಾರಣಕ್ಕೆ ಜಗತ್ತೆಲ್ಲ ತನ್ನ ವಸಾಹತುವಾಗಬೇಕು ಎಂದು ಹೊರಟ ಬ್ರಿಟಿಷ್ ಸಾಮ್ರಾಜ್ಯಶಾಹಿ ಮಾದರಿಗೆ, ಪಶ್ಚಿಮದ ಪ್ರಭುತ್ವ ಕೇಂದ್ರಿತ ರಾಷ್ಟ್ರದ ಮಾದರಿಗೆ ಪರ್ಯಾಯವಾಗಿ ಸಾತ್ವಿಕಶಕ್ತಿ ಕೇಂದ್ರಿತವಾದ ಅಂತಿಮವಾಗಿ ಎಲ್ಲರಿಗೂ ಆನಂದವನ್ನು ಉಂಟುಮಾಡಬಲ್ಲ 'ಏಕರಾಜ್ಯ'ವನ್ನು ಪ್ರತಿಪಾದಿಸುತ್ತದೆ. ಭಾರತೀಯ ಸಂದರ್ಭದ ಐಕ್ಯದ ಮಾದರಿಯಲ್ಲಿ ಹೊರಟ ಬಗೆ ಇದು. ಹಾಗಾಗಿ ಇಲ್ಲಿ ಒಂದು ಪ್ರಭುತ್ವ ಮತ್ತು ಅಧೀನ ನೆಲೆಯ ಅಸಮಾನ ಸಂಬಂಧವನ್ನು ಉಂಟುಮಾಡುವ ಸ್ವರೂಪದ ರಚನೆಯಿಲ್ಲ. ರಾಷ್ಟ್ರ ಈ ಬಗೆಯಲ್ಲಿ ನಿರೂಪಣೆಗೊಳ್ಳುತ್ತಿರುವಾಗಲೇ ತನ್ನ ಒಳಗಿನ ಮೌಲ್ಯಗಳನ್ನು ಅನಾವರಣ ಮಾಡುತ್ತದೆ. ಇಲ್ಲಿ ಮೌಲ್ಯಗಳಾಗಿ ಸೌಜನ್ಯದ ಶಕ್ತಿಯನ್ನು, ಸತ್ಯದಲ್ಲಿನ ಪ್ರೀತಿಯನ್ನು, ಅನಂದವನ್ನು ಬಿಂಬಿಸಲಾಗಿದೆ. ಇದು ಭಾರತೀಯ ರಾಷ್ಟ್ರ ಪರಿಕಲ್ಪನೆಯ ವಿಶಿಷ್ಟತೆಯೂ ಹೌದು.

ಬೇಂದ್ರೆಯವರ ಬಹುಮುಖ್ಯ ಕವನಗಳಲ್ಲಿ 'ಮೂವತ್ತು ಮೂರು ಕೋಟಿ'ಯೂ ಒಂದು. ತಾಯಿ ಭಾರತಿ ಭೂಮಿ ತಾಯಿಯ ಬಳಿ ತನ್ನ ಗೋಳನ್ನು ಹೇಳಿಕೊಳ್ಳುವ ಬಗೆಯ ಕವನ. ಇಲ್ಲಿ 'ಮೂವತ್ತು ಮೂರು ಕೋಟಿ' ಎನ್ನುವುದು ಭಾರತಮಾತೆಯ ಮಕ್ಕಳನ್ನು ಸೂಚಿಸುವ ಸಂಖ್ಯೆ. ಇಷ್ಟು ಜನ ಮಕ್ಕಳಿದ್ದರೂ ಭಾರತಮಾತೆಯ ಸ್ಥಿತಿ

ಚಿಂತಾಜನಕವಾಗಿದೆ. ತನ್ನ ಮಕ್ಕಳ ದೌರ್ಬಲ್ಯ, ಅವರಲ್ಲಿ ಒಗ್ಗಟ್ಟಿನ ಭಾವವಿಲ್ಲದಿರುವುದರಿಂದಲೇ ತನಗೆ ಈ ಸ್ಥಿತಿ ಒದಗಿದೆ ಎಂದು ಭಾರತಮಾತೆ ಹೇಳುತ್ತಾಳೆ.

" ಮೂವತ್ತು ಮೂರು ಕೋಟೀ, ಮೂವತ್ತುಮೂರು ಕೋಟೀ!
ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು
ಮೂವತ್ತು ಮೂರು ಕೋಟಿ!
ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ
ಹೋಳು ಹೋಳಾಗಿಹುದು; ಆಳು ಬಾಳಾಗಿಹುದು
ಏಳಿರೋ ಆಳಿರೆಂಬೇ –
ಬಾಳಿರೋ
ಮೂವತ್ತು ಮೂರು ಕೋಟಿ !
ಡಿಂಭಗಳನೊಡೆದು ಬನ್ನಿ ! ಕಂಭಗಳನೊಡೆದು ಬನ್ನೀ !
ಮೈಯಲ್ಲಿ ಮಡಗದಿರಿ! ಕಂಭಗಳನೊಡೆದು ಬನ್ನೀ !
ತಾಯಿ ಇದೋ ಬಂದೆವೆನ್ನೀ !
ನಾ ಪಡೆದ
ಮೂವತ್ತು ಮೂರು ಕೋಟಿ !!" [೩೨] (ಮೂವತ್ತು ಮೂರು ಕೋಟಿ)

ಭಾರತವು ಜನಸಂಖ್ಯೆಯಿಂದ ಮುವತ್ತು ಮೂರು ಕೋಟಿಯಾದರೂ ಅವರೆಲ್ಲ ಐಕ್ಯತೆಯ ಭಾವನೆಯನ್ನು ಹೊಂದಿ ಶಕ್ತಿಯುತರಾಗಿಲ್ಲ. ಅದಕ್ಕಾಗಿಯೇ ಕವಿ 'ಸೂಲಗಳು' ಎನ್ನುತ್ತಾರೆ. ಇಷ್ಟಿದ್ದರೂ ಪ್ರಯೋಜನ ಇಲ್ಲ ಎಂಬ ಧ್ವನಿ ಇಲ್ಲಿದೆ. ಇದಕ್ಕೆ ಕಾರಣವಾದದ್ದು ಭಾರತೀಯರ ನಡುವಿನ ಒಡಕು ಧ್ವನಿಗಳು. ಕವಿತೆ ಅದನ್ನು ಚೆನ್ನಾಗಿಯೇ ಧ್ವನಿಸುತ್ತದೆ. 'ಹಾಳರ್ಧ ಹೊಲೆಯರೆಂದೂ, ಬೀಳರ್ಧ ಹೆಣ್ಣು ಎಂದೂ ಹೋಳು ಹೋಳಾಗಿಹುದು' ಎನ್ನುತ್ತಾರೆ. ಜಾತಿ, ಲಿಂಗ ಮೊದಲಾದ ತಾರತಮ್ಯಗಳಿಂದ ಇರುವ ಈ ಜನರೂ ಒಂದಾಗಿಲ್ಲ. ಇದರಿಂದಾಗಿಯೇ ಇಲ್ಲಿ ಪರಕೀಯರ ಆಳ್ವಿಕೆಯೂ ಬಂದಿತು. ಆಂತರಿಕ ಕದನಗಳಿಂದ ಪರಸ್ಪರರ ಮೇಲಿನ ಅಪನಂಬಿಕೆಗಳಿಂದ ಸಮಾಜ ಮೌಢ್ಯದಿಂದ ಕುಸಿದು ಹೋಗಿದೆ. ಯಾವ ಮಕ್ಕಳು ತಾಯಿಯ ಭರವಸೆಯಾಗಬೇಕಾಗಿತ್ತೊ, ಆ ಮಕ್ಕಳೇ ತಾಯಿಯ ದುಃಖಕ್ಕೆ ಕಾರಣವಾಗಿ

ಉಳಿದಿದ್ದಾರೆ. ಇಡೀ ಈ ಚಿತ್ರಣ ಪರಿಸ್ಥಿತಿಯ ಧಾರುಣತೆಯನ್ನು ಚಿತ್ರಿಸುತ್ತದೆ. ಭಾರತಮಾತೆಯ ಸ್ಥಿತಿ ಮಕ್ಕಳನ್ನು ಹೆತ್ತೂ ಬಂಜೆಯಂತಾಗಿದೆ. ಈ ಸ್ಥಿತಿಯಿಂದ ಹೊರಬರಲು ತನ್ನ ಮಕ್ಕಳಿಗೆ ಉನ್ನತ ಆದರ್ಶಗಳನ್ನು ನೀಡಿ, ಅವರಲ್ಲಿ ಧೈರ್ಯ ಕೆಚ್ಚನ್ನು ಹುಟ್ಟಿಸಿ ತಾಯಿಯನ್ನು ರಕ್ಷಣೆ ಮಾಡಲು ಮುಂದಾಗುವಂತೆ ಆಹ್ವಾನವನ್ನು ನೀಡುತ್ತಾಳೆ. ಕಟ್ಟಿ ಹಾಕಿರುವ, ವಿಭಜಿಸಿರುವ ಎಲ್ಲಾ ಬಗೆಯ ಬಂಧನಗಳಿಂದ ಕಳಚಿಕೊಂಡು ಹೊರ ಬರಬೇಕಾದ ಅಗತ್ಯವನ್ನು ಮಕ್ಕಳ ಮುಂದೆ ತಾಯಿ ತನ್ನ ಅಳಲಾಗಿ ತೊಡಿಕೊಳ್ಳುತ್ತಾಳೆ.

ಕವಿತೆಯ ಅರ್ಥವ್ಯಾಪ್ತಿಯನ್ನು ಗಮನಿಸಬೇಕು. ವ್ಯಾಪಾರದ ಉದ್ದೇಶದಿಂದ ಬಂದ ಬ್ರಿಟಿಷರ ಸಂಖ್ಯೆ ಬಹಳ ಕಡಿಮೆ. ಆದರೆ ಅವರು ಇಷ್ಟು ಜನಸಂಖ್ಯೆ ಇದ್ದ ಭಾರತವನ್ನು ತಮ್ಮ ಕೈವಶ ಮಾಡಿಕೊಳ್ಳಬೇಕಾದರೆ ಇಲ್ಲಿನ ಮಕ್ಕಳ ದೌರ್ಬಲ್ಯ ಎಷ್ಟು ಎನ್ನುವುದು ಅರಿವಿಗೆ ಬರುತ್ತದೆ. ನಮ್ಮೊಳಗಿನ ಅನೈಕ್ಯತೆಯನ್ನು ಮೀರಿ ಐಕ್ಯತೆಯ ಕಡೆಗ ಹೋಗದಿದ್ದರೆ ಜನಸಂಖ್ಯೆ ಎಷ್ಟಿದ್ದರೂ ನಿರುಪಯುಕ್ತ. ಸಾಧನೆ ಶೂನ್ಯ. ಆದರೆ ಇಲ್ಲಿ ಕವಿತೆಯ ಕೊನೆಯಲ್ಲಿ ಹೊರಬರುವ ಒಂದು ಆಶಾವಾದವನ್ನು ಗಮನಿಸಿದರೆ, ಪರಿಸ್ಥಿತಿ ಬದಲಾಗುತ್ತಿರುವುದರ ಚಿತ್ರಣ ಕಣ್ಮುಂದೆ ಬರುತ್ತದೆ.

ದೇಶ ಸ್ವಾತಂತ್ರ್ಯವನ್ನು ಪಡೆಯುವುದನ್ನು ಬಯಸುತ್ತಿದ್ದ ಕವಿ ಮನಸ್ಸು ಸ್ವಾತಂತ್ರ್ಯವನ್ನು ಪಡೆದ ಒಂದು ದಶಕದ ನಂತರ (೧೯೫೮) ಬರೆದ ಕವನ 'ಸ್ವಾತಂತ್ರ್ಯದ ವರ್ಧಂತಿ'. ಈ ಕವನದಲ್ಲಿ ರೂಪುಗೊಂಡ ರಾಷ್ಟ್ರವನ್ನು ಅವಲೋಕನ ಮಾಡುವ ಬಗೆಯಿದೆ.

"ಹೋರಾಟವು ಇನ್ನೂ ಇದೆ, ಇನ್ನೂ ಇದೆ ಸಾಧನಾ
ಮುಕ್ತರಾದ ಪ್ರಜೆಗಳಿಗೂ ಧರ್ಮದ ಆರಾಧನಾ"
" ಹುಟ್ಟು ದಿನವೊ, ಬೆಳೆದ ದಿನವೊ ಮತ್ತೆ ಬಂತು ಈ ದಿನಾ
ದುಡಿಯಬೇಕು, ಕಟ್ಟಬೇಕು ಪ್ರಜಾರಾಜ್ಯ ಜನಮನಾ"
"ನವಜೀವನ ಸುಪ್ರಬಂಧ ಕಟ್ಟುವುದೊ ಉಳಿದಿದೆ
ಕುಶಲ ಕರ್ಮದೊಡನೆ ಬೇಕು ಧರ್ಮದೊಂದು ತಳಹದಿ"

(ಸ್ವಾತಂತ್ರ್ಯದ ವರ್ಧಂತಿ)

ಬೇಂದ್ರೆ ತನ್ನ ರಾಷ್ಟ್ರ ಸ್ವಾತಂತ್ರ್ಯವನ್ನು ಹೊಂದುವುದು ಎಂದರೆ ಪರಕೀಯತೆ ತಂದೊಡ್ಡಿರುವ ಅವ್ಯವಸ್ಥೆಯಿಂದ ಪಾರಾಗುವುದು ಎಂದೇ ಭಾವಿಸುತ್ತಾರೆ. ಹಾಗಾಗಿ ಸ್ವಾತಂತ್ರ್ಯದ ಮುದ್ರೆಯನ್ನು ಕಂಡಾಕ್ಷಣ ಅವ್ಯವಸ್ಥೆ ಓಡಲಿ ಎನ್ನುತ್ತಾರೆ. ಸುವ್ಯವಸ್ಥೆ ಮೂಡಬೇಕಾದರೆ ವೈರದ ಭಾವಗಳು ಇಂಗಿ ಹೋಗಬೇಕಾಗಿದೆ. ಆಂತರಿಕವಾದ ಮತ್ತು ಬಾಹ್ಯವಾದ ಎಲ್ಲಾ ಬಗೆಯ ವೈರತ್ವವನ್ನು ನೀಗಿಕೊಳ್ಳಬೇಕಾಗಿದೆ. ಅಂತಿಮವಾಗಿ ಸ್ನೇಹದ ಆಧಾರದಲ್ಲೇ 'ಕಟ್ಟುವ' ಕ್ರಿಯೆ ನಡೆಯುವುದು ಎಂಬ ತಿಳುವಳಿಕೆ ಇಲ್ಲಿದೆ. ಸ್ವಾತಂತ್ರ್ಯ ನಂತರದ ಭಾರತದ ಬೆಳವಣಿಗೆಯ ಗತಿಯನ್ನು ಈ ಕವಿತೆ ತೋರಿಸುತ್ತದೆ. ಹೋರಾಟ ಸ್ವಾತಂತ್ರ್ಯ ಸಂಪಾದನೆಯೊಂದಿಗೆ ಮುಕ್ತಾಯಗೊಂಡಿಲ್ಲ. ಅದು ಇನ್ನೂ ಮುಂದುವರಿಯುವುದು ಎನ್ನುತ್ತಾರೆ. ಕವಿತೆ ಹೊಸತನದ ಆಗಮನವನ್ನು ಅಗಸ್ತ್ಯನ ಉದಯದೊಂದಿಗೆ ಸಂಕೇತಿಸುತ್ತದೆ. ನವಜೀವನದ ಕಟ್ಟುವಿಕೆಯನ್ನು ಅಪೇಕ್ಷಿಸುತ್ತಿದೆ.

ಬಿಡುಗಡೆಯ ಅನುಭವ ಮುಕ್ತರಾದ ಪ್ರಜೆಗಳಿಗೆ ಆಗಬೇಕಾದರೆ ತಮ್ಮ ಕರ್ತವ್ಯದಲ್ಲಿ ತೊಡಗಿಕೊಂಡರೆ ಮಾತ್ರ ಸಾಧ್ಯ. ಇದು ಪ್ರತಿಯೊಬ್ಬ ವ್ಯಕ್ತಿಗೂ ಸಂಬಂಧಿಸಿದ ಸಂಗತಿ. ಪ್ರತಿ ವ್ಯಕ್ತಿ ತನ್ನ ಕರ್ತವ್ಯದಲ್ಲಿ ತೊಡಗಿಕೊಂಡಾಗ ಮಾತ್ರ 'ರಾಷ್ಟ್ರ' ಎಂಬ 'ಸಾಮೂಹಿಕ ಸಹಭಾಗಿತ್ವದ ರಚನೆ' ಕ್ರಿಯಾಶೀಲವಾಗಿರಲು ಸಾಧ್ಯ. ಸ್ವಾತಂತ್ರ್ಯ ಪಡೆದ ಕ್ರಿಯೆ ರಾಷ್ಟ್ರ ಬದುಕಿನ ಒಂದಂಶ ಅಷ್ಟೇ. ಅದು ನಿಜವಾದ ರೀತಿಯಿಂದ ಸಾಕಾರವಾಗುವುದು ಪ್ರಜೆಗಳ ಭಾವನೆಯಿಂದ. ಅದನ್ನು ಕವಿ 'ದುಡಿಯಬೇಕು, ಕಟ್ಟಬೇಕು ಪ್ರಜಾರಾಜ್ಯ ಜನಮನ' ಎನ್ನುತ್ತಾರೆ. ದುಡಿಮೆಯ ಮೂಲಕ ಜನಗಳ ಮನಸ್ಸನ್ನು ಕಟ್ಟುವ ಮೂಲಕ ಪ್ರಜಾರಾಜ್ಯವನ್ನು ರೂಪಿಸಲು ಸಾಧ್ಯ. ಕವಿ ಬಯಸಿದ್ದು ಪ್ರಜಾರಾಜ್ಯ. ಪ್ರಜೆಗಳು ಇಲ್ಲಿ ಮುಖ್ಯ. ಇಲ್ಲಿ ರಾಜನಾಗಲಿ, ಪ್ರಭುತ್ವವಾಗಲೀ ಕೇಂದ್ರ ಅಲ್ಲ, ಪ್ರಜೆಗಳೇ ಕೇಂದ್ರ. 'ಕುಶಲ ಕರ್ಮದೊಡನೆ ಬೇಕು ಧರ್ಮದೊಂದು ತಳಹದಿ' ಎಂಬ ಸಾಲು ಕಟ್ಟಲಾದ ರಾಷ್ಟ್ರದ ಸ್ವರೂಪವನ್ನು ನಿರ್ವಚಿಸುತ್ತಿದೆ. 'ಕುಶಲಕರ್ಮ' ಮತ್ತು 'ಧರ್ಮದ ತಳಹದಿ' ಪರಸ್ಪರ ಬಿಟ್ಟಿರಲಾರದ್ದು. ಕೌಶಲ್ಯಯುತ ಜನರ ಪರಿಶ್ರಮದಿಂದಲೇ ರಾಷ್ಟ್ರ ಸದೃಢವಾಗುವುದು. ಆದರೇ ಬೇಂದ್ರೆ 'ರಾಷ್ಟ್ರ'ವನ್ನು ಕೇವಲ ಅರ್ಥದ ತಳಹದಿಯಲ್ಲಷ್ಟೇ ನಿಲ್ಲಿಸದೇ ಧರ್ಮದ ತಳಹದಿಯಲ್ಲಿ ನಿಲ್ಲಿಸಲು ಬಯಸಿದ್ದು ಮಹತ್ವದ ಸಂಗತಿ. ಧರ್ಮದ ತಳಹದಿಯ ಮೇಲೆ ಕಟ್ಟಲಾದ ಕುಶಲ ಕರ್ಮ ರಾಷ್ಟ್ರವನ್ನು ಸಮೃದ್ಧವಾಗಿಸುತ್ತದೆ. ಬಂಧನ ಕಳೆದ ನಂತರ ನವಜೀವನ ಸುಪ್ರಬಂಧವನ್ನು ಈ ತಳಹದಿಯ ಮೇಲೆ ಮಾತ್ರ ನಿಲ್ಲಿಸಲು ಸಾಧ್ಯ ಎನ್ನುತ್ತಾರೆ. ಕರ್ಮದಿಂದ ಧರ್ಮವನ್ನು

ವಿಭಜಿಸಿ ನಿರುತ್ತೇಜನಗೊಳಿಸದೆ ತಳಹದಿಯಾಗಿ ಮುನ್ನೆಲೆಗೆ ತರುತ್ತಾರೆ. ಕರ್ಮವು 'ಧರ್ಮ' ಅಂದರೆ ಕರ್ತವ್ಯ ಭಾವದಿಂದ ಕೂಡಿರಬೇಕು ಎನ್ನುವುದು ಕವಿಯ ಬಯಕೆ.

ಕವಿ ರಾಷ್ಟ್ರವನ್ನು ದುಡಿಮೆಯಿಂದ, ಜನಮನಸ್ಸನ್ನು ಕಟ್ಟುವುದರಿಂದ, ಶೀಲ ರಕ್ಷಣೆಯಿಂದ, ಮತ್ಸರ ಅಳಿಯುವುದರಿಂದ, ಈಶಭಕ್ತಿ- ದೇಶಭಕ್ತಿಯ ಸಾಮರಸ್ಯದಿಂದ ಕಟ್ಟ ಬಯಸುತ್ತಾರೆ. ಹಾಗಾಗಿ ಇಲ್ಲಿ ವೈರದ ಆವೇಶ, ದ್ವೇಷದ ಬೆಂಕಿ ಯಾವುದೂ ಇಲ್ಲ, ಸ್ವಾತಂತ್ರ್ಯದ ಜೀವನ ಎಲ್ಲ ಜನರಿಗೂ ಸೃಜನಶೀಲವಾಗಬೇಕೆಂಬುದೇ ಇಲ್ಲಿ ಕವಿಯ ಬಯಕೆಯಾಗಿದೆ.

ರಾಷ್ಟ್ರವು ಗತಕಾಲದ ನೆನಪುಗಳನ್ನು ಪುನರ್ ಸಂಯೋಜಿಸಿಕೊಳ್ಳುತ್ತದೆ. ಗತವನ್ನು ಹೀಗೆ ನೆನಪಿಸಿಕೊಳ್ಳುವ ಮೂಲಕ ವರ್ತಮಾನಕ್ಕೆ ಭರವಸೆಯನ್ನು ತುಂಬಲಾಗುತ್ತದೆ. ಈ ನೆನಪು ತನ್ನ ಹೆಮ್ಮೆಯ ಮರುಗಳಿಕೆಗಾಗಿ ನಡೆಯಬಹುದು ಅಥವಾ ವರ್ತಮಾನದ ದುಃಸ್ಥಿತಿಯಿಂದ ಪಾರಾಗಲು ಬೇಕಾದ ಒಂದು ತಾತ್ಕಾಲಿಕ ಪರಿಹಾರವಾಗಿ ಕಾಣಿಸಿಕೊಳ್ಳಬಹುದು. ಬೇಂದ್ರೆಯವರು ತಮ್ಮ 'ಸಮರದಲ್ಲಿ ಅಮರರಾದ' ಕವಿತೆಯಲ್ಲಿ ಗತವನ್ನು ವರ್ತಮಾನದ ದುಃಸ್ಥಿತಿಗೆ ಪರಿಹಾರವಾಗಿ ತಂದುಕೊಳ್ಳುತ್ತಾರೆ.

"ನೂರು ವರ್ಷ  ಆದರೇನು ಬಂದೆ ಬರುವರು
ಬಂಧನದಾ ಕುಣಿಕೆ ಬಿಚ್ಚಿ ಮುಕ್ತಿಮಾಲೆ ತರುವರು
..........ಬಂಧನ ಬಂದಷ್ಟು ಸಲವು, ಸ್ವಾತಂತ್ರ್ಯ ತರುವರು
ಅದರ ಹೊಣೆಯ ಹೊರುವವರು" [೩೪] (ಸಮರದಲ್ಲಿ ಅಮರರಾದ)

ಎಂದು ಸ್ವಾತಂತ್ರ್ಯ ಪೂರ್ವದ ನೂರು ವರ್ಷಗಳ ಹಿಂದಿನ ವೀರ ಹೋರಾಟಗಾರರನ್ನು ಸ್ವಾತಂತ್ರ್ಯ ಗಳಿಸಿದ ಮೇಲೂ ಸ್ಮರಿಸಿಕೊಳ್ಳುತ್ತಾರೆ. ಈ ಸ್ಮರಣೆಯ ಹಿಂದೆ ವರ್ತಮಾನಕ್ಕೆ ಅಗತ್ಯವಾದ ಉತ್ತರವನ್ನು ಕಾಣುವ ಪ್ರಯತ್ನವಿದೆ. ಗತದ ವೀರರ ಬಗ್ಗೆ ಅದಮ್ಯ ವಿಶ್ವಾಸ ಪ್ರಕಟವಾಗಿದೆ. ಈ ವೀರರು ಮತ್ತೆ ಮತ್ತೆ ನಮ್ಮ ಬಂಧನದ ಕುಣಿಕೆಗಳನ್ನು ಬಿಚ್ಚಿ ಮುಕ್ತಿಯನ್ನು ತಂದು ಕೊಡುತ್ತಾರೆ, ಸ್ವಾತಂತ್ರ್ಯವನ್ನು ತಂದು ಕೊಡುತ್ತಾರೆ ಎಂಬ ಭರವಸೆ ಪ್ರಕಟವಾಗಿದೆ. "ವೀರ ಧರ್ಮ ಸಾರ ಅಮೃತರೆಂದು ಬೆಳೆಯುವಾ, ವೀರರನ್ನು ನೆನೆದು ನೆನೆದು ವೀರರಾಗಿಯುಳಿಯುವಾ" ಎನ್ನುವಾಗ

ವರ್ತಮಾನದಲ್ಲಿ ಇಂತಹ ವೀರರ ನೆನಪೇ ನಮ್ಮನ್ನು ಮತ್ತೆ ವೀರರನ್ನಾಗಿಸಬಲ್ಲುದು ಎಂಬ ಆಶಯವಿದೆ. ಸ್ವಾತಂತ್ರ್ಯೋತ್ತರ ಭಾರತ ಸ್ವಾತಂತ್ರ್ಯ ಕಾಲದ ನಾಯಕರ ಆಶಯಗಳಿಗಿಂತ ಭಿನ್ನ ಹಾದಿಯನ್ನು ಹಿಡಿದಿರುವ ಸಂದರ್ಭದಲ್ಲಿ ಸ್ವಾತಂತ್ರ್ಯವೇ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಎಂದು ಭಾವಿಸಿದ್ದಲ್ಲೇ, ಸ್ವಾತಂತ್ರ್ಯ ಬಂದಾಗಲೂ ಹೆಚ್ಚೇನೂ ಬದಲಾವಣೆ ಕಾಣದೇ ಹೋದ ಸಂದರ್ಭದಲ್ಲಿ ಮತ್ತೆ ಮತ್ತೆ ಗತಕ್ಕೆ ಹೊರಳಿಕೊಳ್ಳುವ ಮೂಲಕ ಪಾರಾಗುವ ಹಂಬಲ ವ್ಯಕ್ತವಾಗಿದೆ. ಹಾಗಾಗಿ ವೀರರ ನೆನಪು ವರ್ತಮಾನದ ಜನರನ್ನು ವೀರರನ್ನಾಗಿ ಉಳಿಸಲು ಬೇಕಾಗಿದೆ. ಆ ವೀರರು ಮರಳಿ ಬರುತ್ತಾರೆ. ರಾಷ್ಟ್ರದ ಕರ್ತವ್ಯಕ್ಕೆ ಹೆಗಲು ನೀಡುತ್ತಾರೆ. ಆ ಮೂಲಕ ದೇಶಕ್ಕೆ ಕೀರ್ತಿ ತರುತ್ತಾರೆ ಎಂದು ಭಾವಿಸಲಾಗಿದೆ.

ಪಾರತಂತ್ರ್ಯವನ್ನು ಕಳಚಿಕೊಂಡು ಸ್ವಾತಂತ್ರ್ಯವನ್ನು ಸಂಪಾದಿಸಿಕೊಳ್ಳುವುದು ರಾಷ್ಟ್ರದ ಜನತೆಗೆ ಸಂಭ್ರಮದ ಸಂಗತಿ. ಈ ಸಂಭ್ರಮವನ್ನು ವರ್ಣಿಸುವ ಕವಿತೆ ಬೇಂದ್ರೆಯವರ 'ನಾಡಗುಡಿ'. ನಾಡಗುಡಿಯನ್ನು ಬಾಗಿ ಕೈಯೊಳು ಎತ್ತುವೆನೆಂದು ಸಂಭ್ರಮಿಸುತ್ತಾರೆ.

"ಜಯನಾದ ನಾಲಿಗೆಯ ತುದಿಯಲ್ಲಿ ಮೊಳಗುತಿದೆ
ಭಯವಿಲ್ಲ ಎದೆಯ ಬದಿಯೊಳ್
ಜಯವೆಂದು ಮುಳುಗಿದೆನು ದೇಶಭಕ್ತಿಯ ಪೂರ
ಬಂದಿರಲು ರಾಷ್ಟ್ರ ನದಿಯೊಳ್"[೩೫] ( ನಾಡಗುಡಿ)

ತನ್ನ ನಾಡಿಗೆ ಬಂದ ಈ ಸಂತೋಷವನ್ನು ನಾಲಿಗೆಯ ತುದಿಯಲ್ಲೇ ಜಯನಾದ ಮೊಳಗುತ್ತದೆ ಎಂದು ಹೇಳುತ್ತಾ ಇನ್ನು ಮುಂದೆ ಎದೆಯಲ್ಲಿ ಯಾವುದೇ ಭಯವಿಲ್ಲ, ಪರಕೀಯತೆಯ ಅಟ್ಟಹಾಸದ, ದೌರ್ಜನ್ಯದ ಭಯದ ನೆರಳಿನಲ್ಲಿ ನರಳಿದವರು, ಈಗ ಅಂತಹ ಭಯದಿಂದ ಮುಕ್ತರಾದ ಸಂತೋಷದಲ್ಲೇ ರಾಷ್ಟ್ರ ಎಂಬ ನದಿಯಲ್ಲಿ ದೇಶಭಕ್ತಿಯ ನೀರು ತುಂಬಿ ಹರಿಯುತ್ತಿರುವಾಗ ರಾಷ್ಟ್ರಕ್ಕೆ ಜಯವೆಂದು ಹೇಳಿ ಮುಳುಗಿದೆನು ಎನ್ನುತ್ತಾರೆ. 'ನದಿಯ ನೀರಿನಲ್ಲಿ ಮುಳುಗುವುದು' ಎನ್ನುವುದು ಶುದ್ಧೀಕರಿಸುವ ಒಂದು ಕ್ರಿಯೆಯಾಗುತ್ತದೆ. ಪಾರತಂತ್ರ್ಯದ ಕೊಳೆಯನ್ನು ದೇಶಭಕ್ತಿಯ ನೀರಿನಲ್ಲಿ ಮುಳುಗಿ ಏಳುವ ಮೂಲಕ ಕಳೆದುಕೊಳ್ಳುವ ಆಶಯ ಈ ಕವಿತೆಯಲ್ಲಿದೆ. 'ರಾಷ್ಟ್ರ ನದಿಯೊಳ್' ಎಂಬ ಸಂಬೋಧನೆಯಲ್ಲೂ ಒಂದು ವಿಶಿಷ್ಟತೆ ಇದೆ. ನದಿ

ಹರಿಯುವಿಕೆಯನ್ನು ಚಲನಶೀಲತೆಯನ್ನು ಪ್ರತಿಬಿಂಬಿಸುತ್ತದೆ. ರಾಷ್ಟ್ರ ನದಿಯು ಇಂತಹ ಚಲನಶೀಲತೆ, ಹೊಸತನವನ್ನು ಒಳಗೊಳ್ಳುವ ನೆಲೆಗೆ ಸಂಕೇತವಾಗಿ ಬಂದಿದೆ. ನದಿ ಸಮೃದ್ಧಿಯನ್ನು ತರುವ ಸಂಕೇತವೂ ಹೌದು. ಇಂತಹ ಸಮೃದ್ಧಿಯ ರಾಷ್ಟ್ರದಲ್ಲಿ ದೇಶಭಕ್ತಿಯು ತುಂಬಿ ಹರಿದಿದೆ. ಈ ಹರಿಯುವಿಕೆ ಎಲ್ಲವನ್ನು ಒಳಗೊಳ್ಳುವಂತಹದು. ರಾಷ್ಟ್ರವೂ ಹೀಗೆ ಎಲ್ಲವನ್ನೂ, ಎಲ್ಲರನ್ನೂ ಒಳಗೊಳ್ಳುವ ಮೂಲಕ ರೂಪುಗೊಳ್ಳುವುದು ಎಂಬುದನ್ನು ಕವಿತೆ ನಿರೂಪಿಸುತ್ತದೆ.

ಬೇಂದ್ರೆಯವರು ಗ್ರಹಿಸುವ ರಾಷ್ಟ್ರದ ಸ್ವರೂಪವನ್ನು ಅವರ 'ಜನವೇ ರಾಷ್ಟ್ರ' ಕವಿತೆಯಲ್ಲಿ ನಾವು ನೋಡಬಹುದು.

" ಶ್ರಾವಣ ಮಾಸಕೆ ಶ್ರವಣಕೆ ಸಾರಿತು
ಭಾರತ ಮಾತೆಯ ಹೊಸ ಶ್ರುತೀ
ಜನವೇ ರಾಷ್ಟ್ರವು; ರಾಷ್ಟ್ರವೇ ಜನವು
ಸಾರ್ವಭೌಮ ಮಾನವನ ಸ್ತುತಿ
ಸತ್ವವಿಲ್ಲದಾ ರಾಷ್ಟ್ರಕೆ ಬದುಕೆ ?
ರಾಜ್ಯ ನಡೆಸದಾ ಪ್ರಜಾಜನಾ
ಹೊಟ್ಟೆ ಪಾಡಿಗೇ ಗುಲಾಮರಾಗಿ
ಜೀವ ಹಿಡಿಯುವುದು ಎಷ್ಟುದಿನಾ?
ದೇಶಭಾಷೆಯಲಿ ವೇಷ ಭೂಷೆಯಲಿ
ವಿವಿಧತೆ ತಾಳಿದ ಭಾರತವು
ಸಂಸ್ಕೃತಿ ಮರೆಯದೆ ಧೈರ್ಯವ ತೊರೆಯದೆ
ಧರ್ಮವನೊಪ್ಪಲಿ ಬಹುಮತವು" [೩೬] (ಜನವೇ ರಾಷ್ಟ್ರ)

'ಜನವೇ ರಾಷ್ಟ್ರವು, ರಾಷ್ಟ್ರವೇ ಜನವು' ಎಂಬ ಸಾಲು ಭಾರತದ ಹೊಸ ಶ್ರುತಿ ಸಾಲು ಎನ್ನುತ್ತದೆ ಈ ಕವಿತೆ. 'ಜನ' ಮತ್ತು 'ರಾಷ್ಟ್ರ' ಪರಸ್ಪರ ಬೆಸೆದು ಕೊಂಡು, ಇಲ್ಲಿ ಜನವೇ ರಾಷ್ಟ್ರವಾಗಿ ರಾಷ್ಟ್ರವೇ ಜನವಾಗಿ ಮಂಡಿಸಲ್ಪಡುತ್ತದೆ. ರಾಷ್ಟ್ರಕ್ಕೆ ಭೂಮಿ, ಗಡಿಗಳೇ ಸಾಲದು, ಅದರ ಹೃದಯ ಜನರೇ ಆಗಿದ್ದಾರೆ. 'ಭೂಮಂಡಲವೇ ಒಂದು ರಾಷ್ಟ್ರ! ಭಾರತ ರಾಷ್ಟ್ರವು ಅದರ ಮರಿ' ಎನ್ನುತ್ತಾರೆ. ಇಲ್ಲಿ ರಾಷ್ಟ್ರವೆನ್ನುವುದು ಕೇವಲ ವ್ಯಾವಹಾರಿಕ ನೆಲೆಯ ಭೂ ವ್ಯವಹಾರವಾಗದೆ, ವಿಶ್ವಾತ್ಮಕತೆಯತ್ತ ಹೊರಳಿಕೊಳ್ಳುತ್ತದೆ.

ಸಮಸ್ತ ಭೂಮಂಡಲದ ಒಳಗೆ ಒಂದು ರಾಷ್ಟ್ರ ಭಾರತ. ಹೀಗೆ ಹೇಳುವಾಗಲೇ ಉಳಿದ ರಾಷ್ಟ್ರ ಪ್ರಭುತ್ವಗಳ ಇರುವಿಕೆಯನ್ನು ಒಪ್ಪಿಕೊಳ್ಳುವ ಧ್ವನಿ ಇದೆ. ಆಧುನಿಕ ಬಂಡವಾಳಶಾಹಿ ರಾಷ್ಟ್ರ ಪ್ರಭುತ್ವ ಉಳಿದ ರಾಷ್ಟ್ರಗಳ ಅಸ್ತಿತ್ವವನ್ನು ಒಪ್ಪಿಕೊಳ್ಳುವುದಕ್ಕಿಂತ ತನ್ನ ಬಲ ಸ್ಥಾಪನೆಯ ಮೂಲಕ ಇಲ್ಲವಾಗಿಸುವ ಅಥವಾ ತನ್ನ ಅಧೀನಗೊಳಿಸುವ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತವಾಗಿದೆ. ಆದರೆ ಬೇಂದ್ರೆಯವರು ಮಂಡಿಸುವ 'ಭಾರತ ರಾಷ್ಟ್ರವು ಭೂ ಮಂಡಲದ ಮರಿ' ಎನ್ನುವಲ್ಲಿ ಪ್ರಭುತ್ವ ವಿಸ್ತರಣೆಯ ಹಿಂಸಾಪ್ರವೃತ್ತಿಯ ಆತಂಕಕಾರಿ 'ರಾಷ್ಟ್ರ' ಕಲ್ಪನೆಯ ನಿರಾಕರಣೆ ಇದೆ. ಈ ಬಗೆಯ ನಿರಾಕರಣೆ ಒಂದು ಸಾಂಸ್ಕೃತಿಕ ರಾಷ್ಟ್ರ ಪರಿಕಲ್ಪನೆಯನ್ನು ಮುಂದಿಡುತ್ತದೆ.

ಇನ್ನೊಂದೆಡೆ 'ಸತ್ವವಿಲ್ಲದಾ ರಾಷ್ಟ್ರಕೆ ಬದುಕೆ? ರಾಜ್ಯ ನಡೆಸದಾ ಪ್ರಜಾಜನಾ' ಎಂಬ ಪ್ರಶ್ನೆಯಿದೆ. ಈ ಪ್ರಶ್ನೆಯೂ ಕೂಡ ಬಹಳ ಮುಖ್ಯ ಸಂಗತಿಯಾಗುತ್ತದೆ. ರಾಷ್ಟ್ರದ ಬದುಕು ರಾಷ್ಟ್ರದ ಅಂತಃಸತ್ವದಿಂದ ರೂಪುಗೊಳ್ಳುತ್ತದೆ. ಸತ್ವವಿಲ್ಲದಿದ್ದರೆ ರಾಷ್ಟ್ರಕ್ಕೆ ಬದುಕಿಲ್ಲ. ರಾಷ್ಟ್ರಕ್ಕೆ ಬದುಕು ಸಿಗಬೇಕಾದರೆ ಗುಲಾಮಿತನ ನೀಗಬೇಕು. ತನ್ನದೆ ಪ್ರಜಾಜನ ರಾಜ್ಯವನ್ನು ನಡೆಸುವಂತಾಗಬೇಕು. ಸತ್ವಶೀಲ ರಾಷ್ಟ್ರದ ಪ್ರಜಾಜನಕ್ಕೆ ರಾಷ್ಟ್ರದ ಆಳ್ವಿಕೆಯನ್ನು ನಡೆಸುವ ಸಾಮರ್ಥ್ಯ ಇಲ್ಲವೆನ್ನಲಾಗದು.

ಪಶ್ಚಿಮದ ರಾಷ್ಟ್ರ ಪ್ರಭುತ್ವಕ್ಕೆ ಭಾರತದ ಸವಾಲೇ ಇಲ್ಲಿನ ಬಹುತ್ವ . ಪಶ್ಚಿಮದ ರಾಷ್ಟ್ರಕ್ಕೆ ಮಾನದಂಡಗಳಾಗಿರುವ ಏಕಭಾಷೆ, ಏಕ ಜನಾಂಗ, ಏಕಸಂಸ್ಕೃತಿಗಳಿಗೆ ಎದುರಾಗಿ ಭಾರತದ ರಾಷ್ಟ್ರ ಕಲ್ಪನೆ ಈ ಎಲ್ಲದರಲ್ಲೂ ಬಹುತ್ವವನ್ನೂ ಹೊಂದಿದೆ. ಇಲ್ಲಿ ಒಂದು ಇನ್ನೊಂದನ್ನು ಮೆಟ್ಟಿ ತಾನು ಪ್ರಬಲವಾಗುವ ಬಗೆಗಿಂತ ಎಲ್ಲವನ್ನೂ ಒಳಗೊಂಡು ಬಹುತ್ವದ ನಡುವೆಯೂ ಏಕತೆಯನ್ನು ಸಾಧಿಸುವಲ್ಲಿ ಸಫಲವಾಗಿದೆ. 'ಏಕತೆ' ಎನ್ನುವುದು ಕೂಡ ಕೇವಲ ಒತ್ತಾಯ ಪೂರ್ವಕವಾದ ಒಂದು ಒಕ್ಕೂಟವಾಗದೆ, ಸಹನಶೀಲವಾದ, ಪರಸ್ಪರ ಗೌರವ ಪೂರ್ಣ ಸಂಬಂಧ ಹೊಂದಿರುವ ರಚನೆಯಂತಿದೆ. ಈ ಬಹುರೂಪಿ ರಚನೆಯೇ ಭಾರತೀಯ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಮುಂದಿಡುತ್ತದೆ. ಜನವೇ ರಾಷ್ಟ್ರವಾಗುವುದಕ್ಕೂ ಜನ ರಾಷ್ಟ್ರದ ಒಂದು ಲಕ್ಷಣವಾಗುವುದಕ್ಕೂ ದೊಡ್ಡ ತಾತ್ವಿಕ ಅಂತರವಿದೆ. ಜನರ ಮೂಲಕ ರಾಷ್ಟ್ರವನ್ನು ನೋಡುವ ಕ್ರಮ ವಿಶಿಷ್ಟವಾದುದು.

## ೪.೫ ಬೇಂದ್ರೆ ಕವಿತೆಗಳ ರಾಷ್ಟ್ರೀಯತೆಯ ಒಟ್ಟು ಸ್ವರೂಪ:

ಬೇಂದ್ರೆ ಕವಿತೆಗಳ ರಾಷ್ಟ್ರೀಯತೆಯು ವಸಾಹತುಶಾಹಿಯಿಂದ ಬಿಡುಗಡೆಗೊಳ್ಳುವ ಬಗೆಯದ್ದು. ಭೌಗೋಳಿಕತೆಯ ನೆಲೆಯ ರಾಷ್ಟ್ರ ಪರಿಕಲ್ಪನೆ ಇದಲ್ಲ. ಮಾನವರ ನಡುವೆ ಐಕ್ಯತೆಯನ್ನು ಬಯಸುತ್ತಾ ಭೂಮಂಡಲವೇ ಏಕರಾಷ್ಟ್ರ ಎಂದು ಹೇಳುತ್ತಾರೆ. ರಾಷ್ಟ್ರಮಾತೆಯ ಬಂಧಮುಕ್ತಿ ಕವಿಯ ಪರಮಗುರಿ. ಯಾಕೆಂದರೆ ಬಂಧನ ಪ್ರಕೃತಿಗೆ ವಿರುದ್ಧವಾದ ಸಂಗತಿಯಾಗಿದ್ದು ಮಾನವನೂ ಸ್ವತಂತ್ರವಾಗಿ ಬಾಳುವಂತಾಗಬೇಕು ಎನ್ನುವುದೇ ಕವಿ ಆಲೋಚನೆ.

ಇಲ್ಲಿ ರಾಷ್ಟ್ರೀಯತೆಗೆ ಯಾವುದೇ ಬಗೆಯ ಭೌಗೋಳಿಕ ಎಲ್ಲೆಗಳಿಲ್ಲ. ನೆಲದ ಗಡಿಗಳನ್ನು ಬಿಟ್ಟು –ಸಾಂಸ್ಕೃತಿಕ ಸ್ವರೂಪದಲ್ಲೇ ರಾಷ್ಟ್ರ ತಲೆ ಎತ್ತುವುದು. ಬಹುತ್ವವನ್ನು ತನ್ನೊಳಗೆ ಜೀವಂತವಾಗಿ ಇಟ್ಟುಕೊಂಡು ಅದರ ನಡುವೆಯೇ ಐಕ್ಯತೆಯ ಸಂದೇಶವನ್ನು ನೀಡುವ ಬಗೆಯ ರಾಷ್ಟ್ರೀಯತೆಯು ಬೇಂದ್ರೆಯವರದ್ದು. ವಸಾಹತುಶಾಹಿಯ ಆಕ್ರಮಣಕಾರಿ ಪ್ರವೃತ್ತಿಯನ್ನು ಸ್ಥಳೀಯ ಸಾಂಸ್ಕೃತಿಕ ಪ್ರತಿಮೆಗಳ ಮೂಲಕವೇ ಕವಿ ಎದುರಿಸುತ್ತಾರೆ. ಅವರ ಕಾವ್ಯದ ಭಾಷೆ, ಜಾನಪದ ಸೊಗಡು, ಧಾರವಾಡದ ನೆನಪು ಇವುಗಳೆಲ್ಲವೂ ವಸಾಹತುಶಾಹಿಯನ್ನು ಎದುರಿಸಲು ರೂಪಕಗಳೇ ಆಗುತ್ತದೆ. ಅಲ್ಲಿ ವ್ಯಂಗ್ಯ, ವಿಷಾದ, ಜನತೆಯ ಜಡತೆಯ ಬಗೆಗಿನ ನೋವು, ದಾರುಣ ಚಿತ್ರಣಗಳ ನಡುವೆಯೂ ಒಂದು ಬಗೆಯ ಆಶಾವಾದವೂ ಕಾಣಿಸಿಕೊಳ್ಳುತ್ತದೆ.

ಸ್ವಾತಂತ್ರ್ಯ ಪೂರ್ವದ ಹೋರಾಟದ ಆವೇಶ ಬೇಂದ್ರೆಯವರನ್ನು ಕವಿಯಾಗಿಸಿದ್ದಲ್ಲ. ಆ ಕಾಲಧರ್ಮದ ಒಂದು ಮುಖ್ಯ ಸಂವೇದನೆಯೇ ಆಗಿದ್ದ ರಾಷ್ಟ್ರೀಯತೆಯ ವಿಚಾರ ಅವರ ಕಾವ್ಯದಲ್ಲೂ ಮೈ ಪಡೆದಿದೆ. ರಾಷ್ಟ್ರೀಯ ವಿಮೋಚನೆಯ ಕಾಲದ ಆಶಯ ಅವರ ಕಾವ್ಯದ ಒಂದು ಭಾಗ ಮಾತ್ರ. ಸ್ವಾತಂತ್ರ್ಯಾ ನಂತರದ ಬದುಕು ಕೂಡ ಕವಿಯ ಪ್ರಜ್ಞೆಯ ಒಂದು ಭಾಗವೇ ಆಗಿದೆ. ಬಿಡುಗಡೆಯ ನಂತರದ ನವಜೀವನವನ್ನು ಕಟ್ಟುವ ಹೊಣೆ ಪ್ರತಿಯೊಬ್ಬ ಪ್ರಜೆಗೂ ಇದೆ. ಅದಕ್ಕಾಗಿ ಕುಶಲಕರ್ಮವು ಜೊತೆ ಗೂಡಿದಾಗ ಮಾತ್ರ ನಿಜವಾದ ಪ್ರಜಾರಾಜ್ಯ ಮೇಲೆದ್ದು ನಿಲ್ಲುವುದಕ್ಕೆ ಸಾಧ್ಯ ಎಂಬ ಚಿಂತನೆ ಅವರ ಕವಿತೆಗಳಲ್ಲಿದೆ. 'ಜನವೇ ರಾಷ್ಟ್ರವು' ಎಂಬ ಮಾತು ಬೇಂದ್ರೆಯವರ ಕವಿತೆಗಳ ರಾಷ್ಟ್ರೀಯತೆಯ ತಾತ್ವಿಕತೆಯನ್ನು ಪ್ರತಿನಿಧಿಸುತ್ತದೆ. ಸ್ಥಳೀಯ ವೈವಿಧ್ಯತೆಗೆ ಅಪಾಯಕಾರಿಯಲ್ಲದ ವಿಶ್ವಾತ್ಮಕ ಚಿಂತನೆಗೆ ಆತಂಕವನ್ನು

ಒಡ್ಡದ, ನೆಲದಿಂದಲೇ ಕಾವ್ಯಕ್ಕೆ ಬೇಕಾದ ಸತ್ವವನ್ನು ಪಡೆಯುತ್ತಾ, ಭೂಪಟದ ನೆಲೆಯ ನೆಲಕ್ಕೆ ಅಂಟಿಕೊಳ್ಳದ, ಜಾತಿಯ, ಲಿಂಗದ ನೆಲೆಯ ತಾರತಮ್ಯಗಳನ್ನು ಕಳೆದು ಸಕಲರ ಸೌಖ್ಯಕ್ಕೆ ಕಾರಣವಾಗುವ ಮಾದರಿಯ ಸಮನ್ವಯವಾದಿ ರಾಷ್ಟ್ರಪ್ರಜ್ಞೆ ಬೇಂದ್ರೆಯವರದ್ದು. ಹಾಗಾಗಿ ಬೇಂದ್ರೆಯವರಿಗೆ ಸಮಾಜದ ಹಿತ, ರಾಷ್ಟ್ರದ ಹಿತ ಮತ್ತು ಆ ಮೂಲಕ ಸ್ವಾಭಿಮಾನದ ನಡೆ ಮುಖ್ಯವಾಗುತ್ತದೆ. ಕರ್ನಾಟಕ ಮತ್ತು ಕನ್ನಡ ಭಾಷೆ ಮುಂದಿಡುತ್ತಿದ್ದ ರಾಷ್ಟ್ರ ಕಟ್ಟುವ ಚಿಂತನೆಗಳು ಬೇಂದ್ರೆಯವರ ಪ್ರಜ್ಞೆಯ ಪ್ರತೀಕದಂತೆ ಅಂತರಂಗದ ಬೇಡಿಕೆಯಂತೆ ಬಲಿಷ್ಠವಾಗಿ ಪರಿಣಾಮಕಾರಿಯಾಗಿ ಪ್ರಕಟವಾಗುತ್ತದೆ. ತನ್ನ ಯಾವುದೇ ಕವಿತ್ವದ ಚಿಂತನೆಯನ್ನು ಆ ಕ್ಷಣದ ಸತ್ಯದಂತೆ ವ್ಯಕ್ತಪಡಿಸುವ ಬದಲು, ವೈಯಕ್ತಿಕ ನೆಲೆಯಲ್ಲಿ ಸೀಮಿತಗೊಳಿಸುವ ಬದಲು ಸಮಷ್ಟಿಪ್ರಜ್ಞೆಯ ಸಾಕಾರರೂಪವಾಗಿ ಕಾಣುವ ಪರಿ ಬೇಂದ್ರೆಯವರಲ್ಲಿದೆ. ಸ್ವಾತಂತ್ರ್ಯ, ಕರ್ನಾಟಕ ಏಕೀಕರಣದಂತಹ ಚಳವಳಿಗಳು ಕರ್ನಾಟಕದ ನೆಲೆಯಲ್ಲಿ ಮತ್ತು ಭಾಷಿಕವಾಗಿ ಕನ್ನಡದಲ್ಲಿ ಅಭಿವ್ಯಕ್ತಿ ಪಡೆದಾಗ ಅವು ಉಂಟುಮಾಡುವ ಸಂಚಲನ, ಪ್ರಭಾವಗಳ ನೆಲೆಯಲ್ಲಿ ಬೇಂದ್ರೆ ಅನನ್ಯವಾಗಿ ಗುರುತಿಸಲ್ಪಡುತ್ತಾರೆ.

### ೪.೬. ಬಿ.ಎಂ.ಶ್ರೀ. ಕವಿತೆಗಳಲ್ಲಿ 'ರಾಷ್ಟ್ರ'ದ ನಿರ್ವಚನ:

ಕುವೆಂಪು, ಬೇಂದ್ರೆಯವರ ಕವಿತೆಗಳಲ್ಲಿ 'ರಾಷ್ಟ್ರ'ದ ಕುರಿತ ಚಿಂತನೆಗಳನ್ನು ನೋಡುವುದಕ್ಕೂ ಬಿ.ಎಂ.ಶ್ರೀ. ಯವರ ಕವಿತೆಗಳಲ್ಲಿ ರಾಷ್ಟ್ರೀಯತೆಯ ಚಿಂತನೆಗಳನ್ನು ಶೋಧಿಸುವುದಕ್ಕೂ ವ್ಯತ್ಯಾಸವಿದೆ. ಕುವೆಂಪು, ಬೇಂದ್ರೆಯವರ ರಾಷ್ಟ್ರೀಯತೆಗೂ, ಬಿ.ಎಂ.ಶ್ರೀಯವರ ರಾಷ್ಟ್ರೀಯತೆಗೂ ಮೂಲಭೂತವಾದ ವ್ಯತ್ಯಾಸವಿದೆ. ವಸಾಹತುಶಾಹಿಯ ಅಧಿಪತ್ಯದಿಂದ ಬಂಧಮುಕ್ತಗೊಳ್ಳಲು ರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿದ್ದ ಹೋರಾಟದ ಸ್ವರೂಪಕ್ಕೆ ಮತ್ತು ಕುವೆಂಪು, ಬೇಂದ್ರೆಯವರ ರಾಷ್ಟ್ರೀಯತೆಯ ಕುರಿತ ಚಿಂತನೆಯ ಕ್ರಮಕ್ಕೆ ನೇರ ಸಂಬಂಧವಿದೆ. ಇಲ್ಲಿ ಒಂದು ಇನ್ನೊಂದರಿಂದ ನೇರವಾಗಿ ಪ್ರಭಾವಿತಗೊಂಡಿದೆ. ಬಿಡುಗಡೆಯ ಅಪೇಕ್ಷೆಯೇ ರಾಷ್ಟ್ರೀಯತೆಯ ಸ್ವರೂಪವಾಗಿದೆ. ಹಾಗಾಗಿ ತಮ್ಮ ಕವಿತೆಗಳಲ್ಲಿ ಶೌರ್ಯ, ಪರಾಕ್ರಮದ ಹೋರಾಟವನ್ನು ಅದಕ್ಕಾಗಿ ನಡೆಯಬೇಕಾದ ತ್ಯಾಗ, ಬಲಿದಾನವನ್ನು, ಜನಗಳು ಸಾಧಿಸಬೇಕಾದ ಐಕ್ಯತೆಯನ್ನು ಕುರಿತು ಕುವೆಂಪು, ಬೇಂದ್ರೆ ಮುಖ್ಯವಾಗಿ ಪ್ರತಿಪಾದಿಸುತ್ತಾರೆ.

ಬಿ.ಎಂ.ಶ್ರೀ.ಯವರು 'ರಾಜಸೇವಾಸಕ್ತ'ರು ಎಂದೇ ಹೆಸರಾದವರು. ಮೈಸೂರು ಸಂಸ್ಥಾನದ ನಿಷ್ಠಾವಂತ ಸೇವಕರಾಗಿ ಇದ್ದವರು. ಮೈಸೂರು ಸಂಸ್ಥಾನ ವಸಾಹತುಶಾಹಿಯ ಅಧಿಪತ್ಯದಡಿಯಲ್ಲಿದ್ದ ಒಂದು ರಾಜ್ಯವಾಗಿತ್ತು. ಈ ಕಾರಣಗಳಿಂದ ಬಿ.ಎಂ.ಶ್ರೀಯವರ 'ರಾಷ್ಟ್ರ' ಪರಿಕಲ್ಪನೆ ಉಳಿದ ಕವಿಗಳಿಗಿಂತ ಭಿನ್ನ ಸ್ವರೂಪದ್ದಾಗಿದೆ. ಬಿ.ಎಂ.ಶ್ರೀ.ಯವರು ರಾಷ್ಟ್ರ, ರಾಷ್ಟ್ರೀಯತೆ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಮಾತನಾಡಿದ್ದು ಕಡಿಮೆ. ಆಡಿದ ಮಾತುಗಳು ಕೂಡ ಸೂಚ್ಯವಾಗಿದೆ. ನವೋದಯ ಕಾಲದ ಉಳಿದ ಕವಿಗಳು ರಾಷ್ಟ್ರೀಯತೆಯನ್ನು ನಿರ್ವಚಿಸಿದ ರೀತಿಯ ಜೊತೆ ಶ್ರೀಯವರ ರಾಷ್ಟ್ರ ನಿರ್ವಚನವನ್ನು ಸಮೀಕರಿಸಲಾಗದು. ಹಾಗಾಗಿ ಶ್ರೀಯವರ ರಾಷ್ಟ್ರೀಯತೆಯನ್ನು ವಿಮರ್ಶಕರು "ಶ್ರೀರಾಷ್ಟ್ರೀಯತೆ" [೩೭] ಎಂದೇ ಕರೆಯುತ್ತಾರೆ. ಏಕೆಂದರೆ ಸಂಪೂರ್ಣ ಭಾರತ ದೇಶವೇ ಸ್ವಾತಂತ್ರ್ಯ ಹೋರಾಟದ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಬಹುತೇಕ ಸಮಕಾಲೀನ ಬರಹಗಾರರು ಅಂದಿನ ಭಾರತ ದಾಸ್ಯದಲ್ಲಿದೆ, ಬ್ರಿಟಿಷ್ ವಸಾಹತುಶಾಹಿಗೆ ಸಿಲುಕಿ ದಬ್ಬಾಳಿಕೆಗೆ ಒಳಗಾಗಿದೆ ಎಂಬ ಪ್ರಜ್ಞೆಯನ್ನು ದೃಢವಾಗಿ ಹೊಂದಿದ್ದರು. ಅದರಲ್ಲೂ ಮೈಸೂರು ಸಂಸ್ಥಾನವೆಂಬುದು 'ಉಭಯ ದಾಸ್ಯ'ಕ್ಕೆ ಸಿಲುಕಿಕೊಂಡಿದೆ ಎಂದೇ ಎಲ್ಲರೂ ಭಾವಿಸುತ್ತಿದ್ದರು. ಹೀಗಿದ್ದಾಗಲೂ ಸ್ವಾತಂತ್ರ್ಯ ಹೋರಾಟ ತನ್ನ ಅಂತಿಮ ಹಂತಕ್ಕೆ ಬಂದು ತಲುಪಿದ್ದರೂ ಶ್ರೀಯವರಿಗೆ ಒಟ್ಟು ಭಾರತವಾಗಲೀ, ಮೈಸೂರು ಸಂಸ್ಥಾನವಾಗಲೀ ದಾಸ್ಯಕ್ಕೆ ಸಿಲುಕಿದೆ ಎಂದು ಅನ್ನಿಸಿರಲೇ ಇಲ್ಲ. ಈ ಕುರಿತು ಅವರು ಯಾವತ್ತೂ ಪ್ರತಿಕ್ರಿಯಿಸಿದವರೇ ಅಲ್ಲ.

ಬಿ.ಎಂ.ಶ್ರೀ.ಯವರ ಕವಿತೆಗಳಲ್ಲಿ ರಾಷ್ಟ್ರೀಯತೆಯ ಕುರಿತ ವಿಚಾರವನ್ನು ಗಮನಿಸುವ ಪೂರ್ವದಲ್ಲಿ ಜಿ.ಎಸ್.ಶಿವರುದ್ರಪ್ಪನವರು ಈ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಈ ಮಾತು ಬಿ.ಎಂ.ಶ್ರೀಯವರ ಕಾವ್ಯದ ಮಿತಿ ಹಾಗೂ ವಿಶಿಷ್ಟತೆ ಎರಡನ್ನೂ ವ್ಯಕ್ತಪಡಿಸುತ್ತದೆ. ಅವರು ಹೇಳುವಂತೆ " ....... ಅವರ ಕನ್ನಡ ನಾಡಿನ ಮೇಲಣ ಪ್ರೇಮ, ಕೇವಲ ಅಂದಿನ ಮಾದರಿ ಮೈಸೂರಿನ ಆಳರಸರ ಮೇಲಿನ ಅಭಿಮಾನದ ಜತೆಗೆ ಬೆರೆತು ಕೊಂಡಿದ್ದರಿಂದ ಅವರ ಕಾವ್ಯ ಜೀವನಕ್ಕೆ ಆದ ನಷ್ಟ ಬಹಳ ದೊಡ್ಡದು. ಭಾರತೀಯ ನವೋದಯದ ಪ್ರಮುಖ ಧಾರೆ ಎಂದರೆ 'ರಾಷ್ಟ್ರೀಯತೆ' ಮತ್ತು ಆ ಮೂಲಕ ಎಚ್ಚರಗೊಂಡ ಸಾಮಾಜಿಕ ನಿಲುವುಗಳು ಶ್ರೀಯವರಲ್ಲಿ ಕಂಡು ಬರುವ ಸಾಮಾಜಿಕ– ಧಾರ್ಮಿಕ ಸ್ವಯಂ

ತಂತ್ರವಾದ ಇಂಗ್ಲಿಷ್ ಶಿಕ್ಷಣದ ಪರಿಣಾಮವೇ ಹೊರತು ಅದು ರಾಷ್ಟ್ರಾದ್ಯಂತ ವ್ಯಾಪಿಸಿದ ರಾಷ್ಟ್ರೀಯತೆಯ ಪರಿಣಾಮದಿಂದ ರೂಪುಗೊಂಡದ್ದಲ್ಲ. ಅವರ ಸಮಕಾಲೀನರಾದ ಪಂಜೆ, ಗೋವಿಂದ ಪೈ, ಬೇಂದ್ರೆ, ಕುವೆಂಪು ಇಂಥ ಕವಿಗಳಲ್ಲಿ ಉಜ್ವಲವಾಗಿ ಹಾಗೂ ಧೈರ್ಯವಾಗಿ ರಾಷ್ಟ್ರೀಯ ಭಾವನೆಗಳು – ಮುಖ್ಯವಾಗಿ ಭಾರತೀಯ ಸ್ವಾತಂತ್ರ್ಯ ಸಂಪಾದನೆ ಮತ್ತು ಚಳವಳಿಗಳನ್ನು ಕುರಿತು, ಆ ಚಳವಳಿಗಳಲ್ಲಿ ತೊಡಗಿದ ಮಹಾ ನಾಯಕರ ವ್ಯಕ್ತಿತ್ವವನ್ನು ಕುರಿತು ಅಭಿವ್ಯಕ್ತವಾದಂತೆ ಶ್ರೀಯವರಲ್ಲಿ ಅಭಿವ್ಯಕ್ತಗೊಳ್ಳಲಿಲ್ಲ ಎನ್ನುವುದು ತೀರಾ ವಿಲಕ್ಷಣವಾಗಿ ತೋರುತ್ತದೆ. ಹೀಗಾಗಿ ಶ್ರೀ ಅವರ ನವೋದಯ, ನಿಜವಾದ ಅರ್ಥದಲ್ಲಿ ಪಡೆದುಕೊಳ್ಳಬಹುದಾಗಿದ್ದ ಆಯಾಮವನ್ನು ಪಡೆದುಕೊಳ್ಳಲಿಲ್ಲ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕಾವಿನಲ್ಲೂ ಶ್ರೀಯವರು ಇಷ್ಟೊಂದು ತಣ್ಣಗಿರಬೇಕಾದ ಅಗತ್ಯವಿರಲಿಲ್ಲ. ಒಂದು ವೇಳೆ ಅವರ ಸಾಹಿತ್ಯ ಹಾಗೂ ವ್ಯಕ್ತಿತ್ವ ಭಾರತೀಯ ನವೋದಯದ ಮುಖ್ಯಧಾರೆಯಾದ ರಾಷ್ಟ್ರೀಯತೆಯನ್ನೂ ಒಳಗೊಂಡಿದ್ದರೆ, ಅವರ ಸಾಹಿತ್ಯಕ್ಕೆ ಪ್ರಾಪ್ತವಾಗಬಹುದಾಗಿದ್ದ ತೂಕ ಬೇರೆಯೇ ಆಗಬಹುದಾಗಿತ್ತು"[೩೮] ಎನ್ನುತ್ತಾರೆ. ಬಿ.ಯು.ಸುಮಾ ಅವರು ಶ್ರೀಯವರ ರಾಷ್ಟ್ರೀಯತೆಯ ಸ್ವರೂಪವನ್ನು ಭಿನ್ನವಾಗಿ ಗ್ರಹಿಸುತ್ತಾರೆ. ಜಿ.ಎಸ್.ಶಿವರುದ್ರಪ್ಪನವರು ಯಾವುದನ್ನು ಶ್ರೀಯವರ ಕೊರತೆ ಎಂದು ಭಾವಿಸುತ್ತಾರೋ ಅದನ್ನು ಬೇರೊಂದು ನೆಲೆಯಿಂದ ಗ್ರಹಿಸುವ ಮಾತಿದು. "ಇಂಗ್ಲಿಷ್ ಗೀತಗಳ ಮೂಲಕ ಬಿ.ಎಂ.ಶ್ರೀ ಕಟ್ಟಿದ ದೇಶಿಯತೆ ಎಂದರೆ, ರಾಷ್ಟ್ರೀಯತೆಯನ್ನೊಳಗೊಂಡ ದೇಶಿಯತೆಯ ಸುತ್ತ ನಡೆದ ವಾಗ್ವಾದ" [೩೯] ಎನ್ನುತ್ತಾರೆ. ಅಂದರೆ ಶ್ರೀಯವರು ದೇಶಿಯತೆಯ ಕುರಿತು ಮಾತನಾಡುವುದು ಎಂದರೆ ಅದು ರಾಷ್ಟ್ರೀಯತೆಯನ್ನು ಒಳಗೊಂಡೇ ನಡೆಯುವುದು ಎಂದು ಭಾವಿಸಬೇಕು.

ಈ ಮಾತನ್ನು ಹಿನ್ನೆಲೆಯಾಗಿಟ್ಟುಕೊಂಡು ಬಿ.ಎಂ.ಶ್ರೀಯವರ ಕವಿತೆಗಳನ್ನು ನೋಡಬಹುದಾಗಿದೆ. ಈ ಅಧ್ಯಾಯದಲ್ಲಿ ಶ್ರೀಯವರ ಕವಿತೆಗಳಲ್ಲಿ ಕ್ವಚಿತ್ತಾಗಿ ಕಾಣಿಸಿಕೊಳ್ಳುವ ಭಾರತ ರಾಷ್ಟ್ರೀಯತೆಯ ಸ್ವರೂಪವನ್ನು ಕುರಿತು ಚರ್ಚಿಸಲಾಗುವುದು. ಶ್ರೀಯವರ ದೇಶ–ರಾಷ್ಟ್ರಗಳ ಪರಿಕಲ್ಪನೆ ಮೂಲಭೂತವಾಗಿ ಸಾಂಸ್ಕೃತಿಕ ವಲಯಕ್ಕೆ ಸೀಮಿತವಾದಂಥದ್ದು. "ಇದನ್ನು 'ದೇಶ' ಎಂದು ರೂಢಿಯಲ್ಲಿ ಕರೆದರೂ ವಾಸ್ತವವಾಗಿ 'ಇದು ಒಂದು ದೊಡ್ಡ ಖಂಡ' ಎನ್ನುವ ಶ್ರೀಯವರು ಮುಂದುವರೆದು ಭಾರತ ಮುಂದೆ

'ದೊಡ್ಡ ದೇಶ'ವಾದಾಗ ಕನ್ನಡ ಮುಂತಾದ ನಾಡುಗಳು ಆ ದೇಶದಲ್ಲಿನ 'ಒಳದೇಶ'ಗಳಾಗುತ್ತದೆ" [೮೦] ಎಂದಿದ್ದಾರೆ.

ಬಿ.ಎಂ.ಶ್ರೀಯರ ಸ್ವತಂತ್ರ ಕವಿತೆಗಳ ಒಟ್ಟು ಸಂಖ್ಯೆ ಕೇವಲ ಹದಿನಾರು. ಶ್ರೀಯವರು ಅಲ್ಲಲ್ಲಿ ಸೂಚ್ಯವಾಗಿ ರಾಷ್ಟ್ರೀಯತೆಯ ಬಗ್ಗೆ ಮಾತನಾಡಿದ್ದಾರೆ. ಕೆಲವು ಕಡೆ ರಾಷ್ಟ್ರದ ಸಂಸ್ಕೃತಿಯ ಆಯಾಮದ ಬಗೆಗೆ ಮಾತನ್ನಾಡುತ್ತಾ ರಾಷ್ಟ್ರೀಯತೆಯ ಕಡೆಗೆ ಚಿಂತನೆಯನ್ನು ವಿಸ್ತರಿಸುತ್ತಾರೆ. ಅವರ ಬಹಳ ಮುಖ್ಯ ಕವಿತೆಗಳಲ್ಲಿ 'ಭರತ ಮಾತೆಯ ನುಡಿ' ಒಂದು. ಪರಕೀಯರ ಆಳ್ವಿಕೆ, ತನ್ನ ಆದರ್ಶವನ್ನು ಮರೆತ ಜನರು ಮಾಡಿಕೊಂಡ ಆಂತರಿಕ ಕಚ್ಚಾಟದ ಪರಿಣಾಮ ಭರತಮಾತೆ ತಲೆತಗ್ಗಿಸುವಂತಾಗಿದೆ, ಮುಖದ ನಗು ಮಾಸಿದೆ ಎಂಬುದನ್ನು ಈ ಕವಿತೆಯ ಮೂಲಕ ಹೇಳುತ್ತಾರೆ.

"ಎಲ್ಲಿ ಧರ್ಮವ ಕಂಡು ಸಾರಿದ ನಿನ್ನ ಪೂರ್ವದ ಋಷಿಗಳು?
ಎಲ್ಲಿ ಘನತೆಯ ಬದುಕ ಹಾಡಿದ ನಿನ್ನ ಸತ್ವದ ಕವಿಗಳು?
ಎಲ್ಲಿ ಧರ್ಮದ ದಣಿಗಳು – ಅವ
ರೆಲ್ಲಿ ಜ್ಞಾನದ ಕಣಿಗಳು?
ಎಲ್ಲ ಕಲೆಗಳ ಬೆಳಸಿ ಲಕ್ಷ್ಮಿಯನೊಲಿಸಿ ನಿಲಿಸಿದ ಧೀರರು?
ಎಲ್ಲಿ ರಾಜ್ಯವ ಕಟ್ಟಿ- ಶಾಂತಿಯ ಪ್ರಜೆಗೆ ಬೀರಿದ ವೀರರು?
ಎಲ್ಲಿ ಆರ್ಯರ ರಾಜರು – ಈ
ಗೆಲ್ಲಿ ಸಾಹಸ ತೇಜರು? "[೮೧] ( ಭರತಮಾತೆಯ ನುಡಿ)

ಈ ಕವಿತೆ ಭಾರತದ ಗತವನ್ನು, ಅದರ ಚೈತನ್ಯಶೀಲತೆಯನ್ನು ನೆನಪಿಸುತ್ತಾ, ವರ್ತಮಾನದಲ್ಲಿ ಅವುಗಳನ್ನು ಕಳೆದು ಕೊಂಡ ವಿಷಮಕಾರಿ ಸನ್ನಿವೇಶವನ್ನು ನಮ್ಮ ಮುಂದಿಡುತ್ತದೆ. ಒಂದು ಕಾಲದಲ್ಲಿ ಧರ್ಮದ ಸಂದೇಶವನ್ನು ಲೋಕಕ್ಕೆ ಸಾರಿದ ಋಷಿಗಳು, ಶ್ರೇಷ್ಠವಾದ ಸಾಹಿತ್ಯವನ್ನು ಕೊಟ್ಟಂತಹ ಬದುಕಿನ ಘನತೆಯನ್ನು ಹಾಡಾಗಿ ಹಾಡಿದ ಕವಿಗಳು, ಸುಂದರವಾದ ಕಲಾ ಚಟುವಟಿಕೆಗಳನ್ನು ನಡೆಸಿದ ಧೀರರು, ರಾಜ್ಯ ಕಟ್ಟಿದ ವೀರರು, ಸಾಹಸಿಗಳು ಎಲ್ಲರೂ ಕೂಡ ನಾಡಿನ ಸ್ಮೃತಿ ಪುಟಗಳಿಂದ ಮರೆಪಿಗೆ ಸರಿದಿದ್ದಾರೆ. ಜನರ ನೆನಪುಗಳಿಂದ ಅಳಿಸಿ ಹೋಗಿದ್ದಾರೆ. ಇದರ ಪರಿಣಾಮವಾಗಿಯೇ ರಾಷ್ಟ್ರ (ಭರತಮಾತೆ) ಸೋತು ತಲೆ ತಗ್ಗಿಸುವಂತಾಗಿದ್ದು. ಹೀಗಾಗಿ ಮತ್ತೊಮ್ಮೆ

ಭರತಮಾತೆ ತಲೆ ಎತ್ತಿ ನಿಲ್ಲಬೇಕಾದರೆ ಜನ ತಮ್ಮಲ್ಲಿನ ಭೇದಗಳನ್ನು ಮರೆತು ಒಂದಾಗಬೇಕಾಗಿದೆ. 'ಒಂದೇ ಜನರಾಗಿರುವೆವು – ಒಲಿದೊಂದೆ ಭಾರವ ಹೊರುವೆವು' ಎಂದು ಹೇಳಬೇಕಾಗಿದೆ. ಹೀಗಾದಾಗ ಮಾತ್ರ 'ನಿನ್ನ ಹಿಂದಿನ ಭಾಗ್ಯವೆಲ್ಲವ ಮರಳಿ ಸಾಧಿಸಿ ಮೆರೆವೆವು' ಎಂದು ಹೇಳಲು ಸಾಧ್ಯ.

ಇಲ್ಲಿ ಕವಿ ಭರತಮಾತೆಯ ಒಳ ಕೊರಗನ್ನು ಬಹು ಸೂಕ್ಷ್ಮವಾಗಿ ಹಿಡಿದಿಟ್ಟಿದ್ದಾರೆ. ಇಡೀ ಕವಿತೆ ಭರತಮಾತೆಯ ಪ್ರಾಚೀನ ವೈಭವವನ್ನು ಇಲ್ಲಿ ಹರಡಿದ ಧರ್ಮ, ಸತ್ಯ, ಸೇವೆಯ ಗುಣಗಳನ್ನು ನೆನಪಿಸಿಕೊಳ್ಳುತ್ತಲೇ ಅದನ್ನು ಕಳೆದುಕೊಂಡದ್ದಕ್ಕಾಗಿ ದುಃಖಿಸುತ್ತಾರೆ. ಕಳೆದು ಕೊಂಡದ್ದರ ಕಾರಣವನ್ನು ಶೋಧಿಸುತ್ತಾರೆ. ಮತ್ತೆ ಸ್ಥಾಪಿಸಲು, ಮರಳಿ ಸಂಪಾದಿಸಲು ಬೇಕಾದ ದಾರಿಯನ್ನು ಹುಡುಕುತ್ತಾರೆ. ಆ ಮೂಲಕ ಕವಿ ಆತ್ಮಾವಲೋಕನದ ಕ್ರಮದಲ್ಲಿ ಕವಿತೆಯನ್ನು ಮಂಡಿಸುತ್ತಾರೆ. "ಬ್ರಿಟಾನಿಯಾಳು ಭರತಮಾತೆಗೆ ತಂಗಿಯಾಗಿರುವುದರಿಂದ ಅವಳ ಬಳಿ ಸಹಾಯ ಕೋರಲು ಅಳುಕಬೇಕಿಲ್ಲ. ಇದಲ್ಲದೆ 'ಭರತಮಾತೆಯ ನುಡಿ'ಯಲ್ಲಿ ಇತಿಹಾದುದ್ದಕ್ಕೂ ಸಂಭವಿಸಿದ ಮದ, ಮರೆವು ಎಚ್ಚೆತ್ತು ಕೊಳ್ಳುವಿಕೆಗಳ ಕುರಿತ ಸ್ಮರಣೆಯೂ ಇದೆ. ಧರ್ಮಗುರುಗಳ ಅವತಾರ, ಮುಸ್ಲಿಮರ ಆಕ್ರಮಣ ಇವೆಲ್ಲವೂ ಈ ಕವಿತೆ ಕಂಡುಕೊಂಡ ಪ್ರಕಾರ, ತನ್ನ ಮಕ್ಕಳ ಒಳಿತಿಗಾಗಿ ಭರತಮಾತೆಯೇ ಏರ್ಪಡಿಸಿದ ಸಂಗತಿಗಳಾಗಿವೆ. ಆದರೆ ಮತ್ತೆ ಮತ್ತೆ ಮುಸುಕೆಳೆದು ಮಲಗುವ ಮಕ್ಕಳನ್ನು ಎಚ್ಚರಿಸುವುದು ತಾಯಿಯ ಪಾಲಿಗೆ ನಿರಂತರ ಕಾಯಕ. ಇದೀಗ ಅನಿವಾರ್ಯವಾಗಿ ಅವಳು ತನ್ನ ಕಿರಿಯ ಸೋದರಿಯನ್ನು ಆಹ್ವಾನಿಸಿದ್ದಾಳೆ. ಅವಳ ಮತ್ತು ತನ್ನ ಒಟ್ಟಾರೆ ಜೀವನ ದರ್ಶನ ಒಂದೇ ಎಂಬ ಪ್ರತಿಪಾದನೆಯು ಕವಿತೆಯಲ್ಲಿದೆ"[೪೨] ಎನ್ನುತ್ತಾರೆ ಚಿಂತಾಮಣಿ ಕೊಡ್ಲೆಕೆರೆ. ಅಂದರೆ ಭಾರತ ಮತ್ತು ಇಂಗ್ಲೆಂಡಿನ ನಡುವಿನ ಮೈತ್ರಿಯ ಉದ್ದೇಶವೂ ಕೂಡ ಭರತಮಾತೆಯು ತನ್ನ ಮಕ್ಕಳನ್ನು ಎಚ್ಚರಗೊಳಿಸುವುದಕ್ಕಾಗಿಯೇ ನಡೆದಿದೆ.

ಕವಿ ರಾಷ್ಟ್ರವನ್ನು ಪರಿಭಾವಿಸಿದ ಬಗೆಯನ್ನು ಈ ಕವನದ ಮೂಲಕ ನೋಡಬಹುದು. ಭೌತಿಕ ವಿವರಗಳಾದ ಭೂಪ್ರದೇಶದ ವ್ಯಾಪ್ತಿ, ವಿಸ್ತಾರವನ್ನು ಪ್ರಸ್ತಾಪಿಸದೆ, ಆಳುವ ಮಾದರಿಯನ್ನೂ ವಿವರಿಸದೆ ಒಂದು ಭೂ ಪ್ರದೇಶವನ್ನು ರಾಷ್ಟ್ರವಾಗಿ ರೂಪಿಸಿದ ಸಾಂಸ್ಕೃತಿಕ ಸಂಗತಿ, ಕಲೆ, ಸಾಹಿತ್ಯ, ದೈವಭಕ್ತಿ, ಭ್ರಾತೃತ್ವ

ಮೊದಲಾದ ಸಂಗತಿಗಳೇ ಈ ರಾಷ್ಟ್ರವನ್ನು ಬೆಸೆದದ್ದು ಎಂಬ ಸಾಂಸ್ಕೃತಿಕ ವಿವರ ಈ ಕವಿತೆಯ ಮೂಲಕ ಮುನ್ನೆಲೆಗೆ ಬರುತ್ತವೆ.

ಹೀಗೆ ಹೇಳುವಾಗಲೂ ಶ್ರೀಯವರು ಬ್ರಿಟಿಷರನ್ನು ಹೊರಗಟ್ಟುವ ಬಗ್ಗೆಯಾಗಲಿ, ಆ ಮೂಲಕ ಸ್ವತಂತ್ರ ಭಾರತವನ್ನು ಕಟ್ಟುವ ಬಗ್ಗೆಯಾಗಲಿ ಮಾತನಾಡುವುದಿಲ್ಲ ಎಂಬುದು ಇಲ್ಲಿ ಗಮನಾರ್ಹ. ಭಾರತೀಯರ ರಾಷ್ಟ್ರೀಯ ಐಕ್ಯತೆಗೆ, ರಾಷ್ಟ್ರೀಯ ಪ್ರಜ್ಞೆಗೆ ಬ್ರಿಟಿಷರು ಕಾರಣವಾದರು ಎನ್ನುವಂತೆ,

"ಕಡೆಗೆ ನೆನೆದೆನು ನನ್ನ ಮನೆತನ ನೇರವಾಗುವ ತೆರವನು
ಕಡಲ ರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು
ಗೆಲಿದು ನಾಡನು ಬೆಸೆದಳು –ನೆಲ
ದೊಲುಮೆ ಕಟ್ಟನು ಹೊಸೆದಳು" ಎನ್ನುತ್ತಾರೆ.

ರಾಷ್ಟ್ರೀಯತೆಯ ಕುರಿತ ಶ್ರೀಯವರ ಹೆಬ್ಬಯಕೆಯು ಇಲ್ಲಿ ನಿರ್ಬಂಧಿತವಾಗಿದೆ ಎಂದೆನಿಸುತ್ತದೆ. ಹೀಗಾಗಿ ಒಂದೆಡೆ 'ರಾಷ್ಟ್ರೀಯ' ಭಾವನೆ ಇದ್ದರೂ, ಅದಕ್ಕೂ ಮಿಗಿಲಾಗಿ ಸಾಮ್ರಾಜ್ಯಶಾಹಿ ಬ್ರಿಟನ್ನಿನ ಪರವಾದ ಭಕ್ತಿಯಾಗಿ ಬಿಂಬಿಸಿಕೊಳ್ಳುತ್ತಾರೆ. ಈ ಕಾರಣಕ್ಕಾಗಿ ಭರತಮಾತೆಯೇ ಭಾರತವನ್ನು 'ಕಡಲರಾಣಿ ಬ್ರಿಟಾನಿಯಾಳ' ಕೈಗೊಪ್ಪಿಸುವಂತಹ ಆಶಯವನ್ನು ಕವಿತೆ ಪ್ರಕಟಿಸುತ್ತದೆ. ಈ ಕವಿತೆ ಹುಟ್ಟುವ ಕಾಲಘಟ್ಟದ ಕುರಿತು ಎಸ್. ಚಂದ್ರಶೇಖರ್ ಹೇಳುವಂತೆ "೧೯೧೪ರ ಭಾರತೀಯ ಚಾರಿತ್ರಿಕ ಘಟ್ಟದ ಕಲ್ಪನೆಯಿರುವವರಿಗೆ ಈ ಕವನ ಶ್ರೀಯವರ ಇಂಗಿತವನ್ನು ಸ್ಪಷ್ಟಪಡಿಸುತ್ತದೆ. ಬ್ರಿಟಿಷರು ತೀವ್ರವಾದಿ ಸ್ವಾತಂತ್ರ್ಯ ಹೋರಾಟಗಾರರನ್ನು ನಿರ್ದಯವಾಗಿ ಬೇಟೆಯಾಡಿ ಕೊಲ್ಲುತ್ತಿದ್ದ ಕಾಲ ಅದು. ಅವರು ರಾಷ್ಟ್ರೀಯತೆಯ ಹುಟ್ಟನ್ನಡಗಿಸುವ ಕಾರ್ಯದಲ್ಲಿ ಮಗ್ನರಾಗಿದ್ದ ಚಾರಿತ್ರಿಕ ಘಟ್ಟದಲ್ಲಿ ಈ ಕವನ ಹುಟ್ಟಿದೆ." [೪೩] ಹೀಗಾಗಿ ಭರತಮಾತೆಯ ವೈಭವವನ್ನು ಒಂದೆಡೆ ಬಣ್ಣಿಸುತ್ತಿದ್ದರೂ ಈ ಕವಿತೆ ಭಾರತೀಯರನ್ನು ಬ್ರಿಟನಿಯಾಳಿಂದ ಬಿಡಿಸುವ ಕುರಿತು ಮಾತನಾಡದೆ, ಬೆಸೆಯುವ ಸ್ನೇಹದ ಮಾತನಾಡುತ್ತಿರುವುದು ಕವಿತೆಯ ಒಳಗಿನ ವೈರುಧ್ಯ ಕವಿಯ ದ್ವಂದ್ವದಂತೆ ಕಾಣಿಸಿಕೊಳ್ಳುತ್ತದೆ. ಇದರಿಂದಾಗಿ ಶ್ರೀಯವರು ದಾಸ್ಯದಿಂದ ಮುಕ್ತಿಯನ್ನು ಪಡೆಯಬಲ್ಲ ಸ್ವಾತಂತ್ರ್ಯದ ಕುರಿತು ಮಾತನಾಡದೆ ಮೌನ ತಾಳುತ್ತಾರೆ.

ಶ್ರೀಯವರ ರಾಷ್ಟ್ರೀಯತೆಯ ಕುರಿತ ವಿಚಾರದಲ್ಲಿ ಒಂದು ಬಗೆಯ ದ್ವಂದ್ವವನ್ನು ಕಾಣಬಹುದಾದರೂ, ಶ್ರೀಯವರು ಕಾವ್ಯದ ಭಾಷೆ ಮತ್ತು ಶೈಲಿಯ ಕಾರಣಕ್ಕೆ ಮತ್ತು ಅವರು ಆಯ್ಕೆ ಮಾಡಿಕೊಂಡ ವಸ್ತುಗಳ ಕಾರಣದಿಂದ ಮುಂದಿನ ಕನ್ನಡದ ಕಾವ್ಯಕ್ಕೆ ಒಂದು ಮಾದರಿಯನ್ನು ರೂಪಿಸಿದರು. ಅವರ ರಾಷ್ಟ್ರೀಯತೆಯ ಚಿಂತನೆಗಳು ಹೆಚ್ಚು ಬಹಿರ್ಮುಖಿಯಾಗಿ ಪ್ರಕಟವಾಗಲಿಲ್ಲ. ಅವರ 'ಇಂಗ್ಲಿಷ್ ಗೀತಗಳು' ಸಂಕಲನದ ಕೆಲವು ಗೀತೆಗಳನ್ನು ನೋಡಿದಾಗ ಅವುಗಳು ಬ್ರಿಟಿಷರ ಸ್ತುತಿ ಗೀತೆಗಳಾಗಿಯೂ ಕಾಣುತ್ತವೆ. ಅವರ "ಆಳೌ ಬ್ರಿಟಾನಿಯಾ!' ಕವಿತೆ ಒಂದು ಬಗೆಯಿಂದ ಬ್ರಿಟನ್ನಿನ ಶಕ್ತಿ, ಸಾಮರ್ಥ್ಯದ ವರ್ಣನೆಯ ಕವಿತೆ.

"ಆಳೌ ಬಿಟ್ರಾನಿಯಾ! ಆಳು ತೆರೆಗಳನು!

ಎಂದಿಗೂ ಬ್ರಿಟನನಡಿಯಾಳೆನಿಸಿಕೊಳನು!"

ಎಂಬ ಸಾಲುಗಳು ಬ್ರಿಟನ್ ಆಳುವುದಕ್ಕಾಗಿಯೇ ಇರುವುದು ಎಂಬ ಧ್ವನಿ ಹೊಂದಿದೆ. ಅದರ ಗೆಲುವು ಕೀರ್ತಿಗಳ ಹೊಗಳಿಕೆ ಇದೆ. ಆದರೆ ಈ ಕವಿತೆಯನ್ನು ಇನ್ನೊಂದು ನೆಲೆಯಿಂದಲೂ ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ಅದೆಂದರೆ, ಬ್ರಿಟನನ್ನು ಹೊಗಳುವ ಸಾಲುಗಳೇ ಪರೋಕ್ಷವಾಗಿ ಭಾರತೀಯರ ಸ್ವಾಭಿಮಾನವನ್ನು, ವೀರತ್ವವನ್ನು ಉದ್ದೀಪಿಸಲೂ ಈ ಹಾಡು ಪೂರಕವಾಗಬಹುದು ಎಂದು ನೋಡುವುದಾದರೆ ಈ ಕವಿತೆಯಲ್ಲಿ ಹೊಸ ಅರ್ಥದ ಸಾಧ್ಯತೆ ಕಾಣುತ್ತದೆ. ಇಂಗ್ಲಿಷ್ ಗೀತಗಳು ಸಂಕಲನದಲ್ಲಿ ಇಂಗ್ಲೆಂಡಿನ ಕುರಿತು, ಬ್ರಿಟಾನಿಯಾಳ ಕುರಿತು ವರ್ಣಿಸುವ ಗೀತೆಗಳಿವೆ. ಆ ಮೂಲಕ ಒಂದು ನಾಡಿನ ಕುರಿತು ಅಭಿಮಾನ, ಹೆಮ್ಮೆಯನ್ನು ತಾಳುವ, ತೀವ್ರ ಸ್ವರೂಪದ ಭಾವುಕತೆ ವ್ಯಕ್ತವಾಗುವ ಕವನಗಳು ಅವು. ಅವರ ಕವಿತೆಗಳ ಕುರಿತ ಒಂದು ಮಹತ್ವದ ಒಳನೋಟ ಬಿ.ಯು.ಸುಮಾ ಅವರ 'ಇಂಗ್ಲಿಷ್ ಗೀತಗಳು ಹಾಗೂ ಕನ್ನಡ ಕಾವ್ಯ ಪರಂಪರೆ' ಎಂಬ ಲೇಖನದಲ್ಲಿದೆ. ಅವರು ಹೇಳುವಂತೆ " ...... ವಾಸ್ತವವಾಗಿ, ಇಂಗ್ಲೆಂಡನ್ನು ಕುರಿತು ಹಾಡುವ ಈ ಗೀತಗಳು, ಇಂಗ್ಲಿಷರು ಕಲಿಸಿದ ಭಾಷೆಯ ಮೂಲಕ, ಸ್ಥಳೀಯರಿಗೆ (natives) ಬೇಕಾದ ಪಾಠವನ್ನು ರೂಪಿಸುತ್ತದೆ. ಶ್ರೀಯವರು ಇಲ್ಲಿ ಕ್ಯಾಲಿಬನ್ ಆಗಿದ್ದಾರೆ. ಈ ಕವಿತೆಗಳು ನವೋದಯ ಕಾಲಘಟ್ಟದಲ್ಲಿ ೧. ಕನ್ನಡ ನಾಡಿನ ವೈಭವದ ಗತಕ್ಕಾಗಿ ಹಳಹಳಿಸುವ; ೨. ಬಿಕ್ಕಟ್ಟಿನ ವರ್ತಮಾನಕ್ಕಾಗಿ ಆತಂಕಿತವಾಗುವ, ೩. ರಾಷ್ಟ್ರ, ದೇಶದ ಪುನಾರಚನೆಗೆ ತವಕಿಸುವ ವಸ್ತುಗಳನ್ನುಳ್ಳ

ನೂರಾರು ಕವಿತೆಗಳಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟವು. ('ಹುತ್ತರಿ ಹಾಡು' ಪಂಜೆ, 'ಕನ್ನಡಿಗನ ಕೊರಗ'– ತೀ.ನಂ.ಶ್ರೀ, 'ಕನ್ನಡ ಪದಗೊಳ್ – ಜೆ.ಪಿ.ರಾಜರತ್ನಂ, 'ನೀವಾದಲಾ', ಕನಸಿನೊಳಗೊಂದು ಕಣಸು– ಬೇಂದ್ರೆ, 'ಸಾಯುತಿದೆ ನಿಮ್ಮ ನುಡಿ' – ಕುವೆಂಪು")[೪೪].

"ವೈರಿಗಳು ಹೊಡೆದಷ್ಟು ಘೋರರೂಪವ ತಾಳಿ
ಧೈರ್ಯ ಗಾಂಭೀರ್ಯದಲಿ ನಸುನಗುತ ನಿಲುವೆ
ಕೀರಿ, ಗಗನವ ಸೀಳಿ, ಬಿರುಗಾಳಿ ಕಿತ್ತಷ್ಟು
ಬೇರೂರಿ ಕೊಳುವಂತೆ ನಿನ್ನಡವಿತೇಗು!
ಮಲೆತು ದುರ್ನೀತಿಯಲಿ ನಿನ್ನ ರಾಜರು ಕೆಟ್ಟು
ಹಿಡಿದು ಸಂಕಲೆಯಿಟ್ಟು ಜಗ್ಗಿಸಲು ಬರಲು
ಮಲಗಿದ್ದ ಸಿಂಹದಂತುರಿದೆದ್ದು ತೆಗೆದೊದರಿ
ಬಿಡುಗಡೆಯ ಕೈಕೊಂಡು ಕೀರ್ತಿಯನು ಪಡೆವೆ!"[೪೫]

(ಆಳೌ ಬ್ರಿಟಾನಿಯಾ)

ಮೇಲ್ನೋಟಕ್ಕೆ ಇಂಗ್ಲೆಂಡಿನ ಗುಣವನ್ನು, ಶಕ್ತಿಯನ್ನು ವರ್ಣಿಸುವ ಒಂದು ಕವಿತೆ. 'ಆಳೌ ಬ್ರಿಟಾನಿಯಾ!' ಬ್ರಿಟನ್‌ಗಿರುವ ಆಳುವ ಹಕ್ಕನ್ನು ಪ್ರತಿಪಾದಿಸುತ್ತದೆ ಎಂದು ಭಾವಿಸಬಹುದು. ಜೊತೆಗೆ ಬ್ರಿಟನ್ ತನ್ನ ಸ್ವಾಯತ್ತತೆಗೆ ಧಕ್ಕೆಯಾಗುವ ಸಂದರ್ಭದಲ್ಲಿ ಹೇಗೆ ತನ್ನ ಪೌರುಷವನ್ನು ತೋರಿಸಿದೆ ಎಂಬುದನ್ನು ಹೇಳುತ್ತದೆ.

ಇದೇ ಕವಿತೆಯನ್ನು ಭಾರತೀಯ ಸಂದರ್ಭದಲ್ಲಿ ಅರ್ಥಮಾಡಿ ಕೊಳ್ಳುವುದು ಹೇಗೆ? "ವೈರಿಗಳು ಹೊಡೆದಷ್ಟು ಘೋರ ರೂಪವನ್ನು ತಾಳಿ" ಇಂಗ್ಲೆಂಡ್ ಉಳಿದಿದೆ. ಭಾರತದ ವರ್ತಮಾನಕ್ಕೆ ಈ ಸಾಲು ಕನ್ನಡಿಯಂತಿಲ್ಲವೇ? ಆದರೆ ಭಾರತದಲ್ಲಿ ಬ್ರಿಟನ್ ಬಗೆಯ ಹೋರಾಟ, ಕೆಚ್ಚು ಸಾಹಸಶೀಲತೆಯನ್ನು ಕಾಣುತ್ತಿಲ್ಲ. ತನ್ನನ್ನು ತಾನು ಬ್ರಿಟನ್ ಮೈಕೊಡವಿಕೊಂಡು ಮೇಲೆದ್ದ ಸಿಂಹವನ್ನಾಗಿ ಭಾವಿಸಿಕೊಂಡದ್ದನ್ನು ಕವಿ ಗುರುತಿಸುತ್ತಾರೆ. ಕವಿ ಇಲ್ಲಿ ನೇರವಾಗಿ ರಾಷ್ಟ್ರೀಯ ಹೋರಾಟದ ವಿಚಾರವನ್ನು ಪ್ರಸ್ತಾಪಿಸಿಲ್ಲವಾದರೂ ಓದುಗರಿಗೆ ತಮ್ಮನ್ನು ಆಳುವ ಬ್ರಿಟಿಷರ ಕುರಿತು, ಅವರ ಧೈರ್ಯ, ಸ್ಥೈರ್ಯದ ಕುರಿತ ಸಂಗತಿಗಳು ಅರಿವಾಗುತ್ತದೆ. ಈ ಅರಿವು ಭಾರತೀಯ ಸಂದರ್ಭದ

ಒಬ್ಬ ಓದುಗನಲ್ಲಿ ಹೊಸ ಬಗೆಯ ಆತ್ಮಾವಲೋಕನವನ್ನು ಮೂಡಿಸಬಹುದಾಗಿದೆ. ಅಂತಹ ಸಾಧ್ಯತೆಯ ಅರಿವು ಕವಿಗಿತ್ತು ಎಂಬುದನ್ನು ಭಾವಿಸಬೇಕಾಗಿಲ್ಲವಾದರೂ ಓದುಗರಿಗೆ ಅದು ಉಂಟು ಮಾಡುವ ಈ ಭಾವನೆಯನ್ನು ನಿರಾಕರಿಸಲಾಗದು. ಇದೇ ಬ್ರಿಟಿಷರಿಂದ ತಾವೂ ಆಳಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ತಮ್ಮೊಳಗೂ ಅಂತಹ ಶಕ್ತಿಯ ಶೋಧವನ್ನು ಮಾಡಿಕೊಂಡರೆ, ತಮ್ಮನ್ನೂ ಹೋರಾಟದಲ್ಲಿ ತೊಡಗಿಸಿ ಕೊಳ್ಳಬಹುದಾದ ಸಾಧ್ಯತೆ ಇರುವುದನ್ನು ನಾವು ಗಮನಿಸಬೇಕು. ಕವಿ ತೆರೆದಿಟ್ಟ ಪರೋಕ್ಷ ಮಾರ್ಗ ಇದು ಎಂದು ನಂಬಬಹುದಾಗಿದೆ. 'ಶ್ರೀ ಸಾಹಿತ್ಯ'ದಲ್ಲಿ ಬಿ.ಎಂ.ಶ್ರೀಯವರ ಪರಿಚಯವನ್ನು ಬರೆಯುವ ಸಂದರ್ಭದಲ್ಲಿ ವಿ.ಸೀ.ಯವರು ಹೇಳಿದ ಕೆಲವು ಮಾತುಗಳು ಇಲ್ಲಿ ಗಮನಾರ್ಹ. ಶ್ರೀಯವರು 'ಅಳೌ ಬ್ರಿಟಾನಿಯ', 'ಇಂಗ್ಲೆಂಡ್ ನಾವಿಕರು' ಇತ್ಯಾದಿ ಕವನಗಳನ್ನು ಬರೆದಾಗ ಇದು ಭಾರತೀಯರಿಗೆ ಸಲ್ಲದ ಒಂದು ಅಭಿಮತ ಎಂಬ ಟೀಕೆಗಳು ಬಂದಿತ್ತು. ಇದನ್ನು ಕುರಿತು ವಿ.ಸೀಯವರು "...... ಇವರಿಗೆ ಇಂಗ್ಲಿಷ್ ಪ್ರೀತಿ ಎಷ್ಟೇ ಇರಲಿ, ಅವರು ತಮ್ಮ ದೇಶಪ್ರೀತಿಯನ್ನು ಹೇಗೆ ತೋರಿಸುತ್ತಾರೆ ಎಂಬುದರ ಮಾದರಿಗಾದರೂ ಇರಲಿ ಎಂಬಂತೆ ಕೆಲವನ್ನು ಆರಿಸಿದರು"[೪೬] ಎನ್ನುತ್ತಾರೆ. ಈ ಮಾತು ಶ್ರೀಯವರನ್ನು ಅರ್ಥೈಸಿಕೊಳ್ಳುವಲ್ಲಿ ಬಹಳ ಮುಖ್ಯವಾಗಿ ಕಾಣುತ್ತದೆ. ಶ್ರೀಯವರ 'ಇಂಗ್ಲಿಷ್ ಗೀತಗಳು' ಸಂಕಲನದ ಕವಿತೆಗಳ ಆಯ್ಕೆಯ ಹಿಂದಿದ್ದ ಆಶಯವನ್ನು ಪ್ರಕಟಿಸುತ್ತದೆ. ಕೇವಲ ಕವಿತೆಗಳ ಅರ್ಥವನ್ನು ನೋಡಿದರೆ ಅದು ಉಂಟುಮಾಡುವ ಭಾವನೆಗೂ, ಅದನ್ನು ಓದುವ ಕಾಲದ ಹಿನ್ನಲೆಯನ್ನು ಮತ್ತು ಓದುವ ಕ್ರಮವನ್ನು ಪ್ರಜ್ಞಾಪೂರ್ವಕವಾಗಿ ಗಮನಿಸಿದರೆ ಆ ಕವನಗಳ ಹಿಂದಿನ ಬೇರೆ ಬಗೆಯ ಆಶಯಗಳೂ ಬೆಳಕು ಕಾಣುತ್ತದೆ. ಶ್ರೀಯವರು ಮಿಲ್ಟನ್ ಕವಿಯ ಕುರಿತು ನೀಡಿದ ಉಪನ್ಯಾಸವೊಂದನ್ನು ಉಲ್ಲೇಖಿಸುವ ವಿ.ಸೀ.ಯವರು ಶ್ರೀಯವರ ಚಿಂತನೆಯ ಒಂದು ಮಾತನ್ನು ಸೇರಿಸುತ್ತಾರೆ.

" ...... ಸ್ವದೇಶಿ ಚಳವಳಿಯಲ್ಲಿ, ಸ್ವಾತಂತ್ರದ ಚಳವಳಿಯಲ್ಲಿ ಕವಿಯನ್ನು ಅಲ್ಲಗಳೆಯಬಾರದು; ಅವನ ಕಾರ್ಯವನ್ನು ಅವನ ರೀತಿಯಲ್ಲಿ ಅವನು ಮಾಡುತ್ತಾನೆ; ಅವನ ದೇಶಾಭಿಮಾನವನ್ನು ಅವನ ರೀತಿಯಲ್ಲಿ ತೋರಿಸುತ್ತಾನೆ. ಇದು ಸರ್ವಥಾ ವ್ಯರ್ಥವಲ್ಲ"[೪೭] ಎಂದು ಹೇಳಿದ್ದಾಗಿ ದಾಖಲಿಸುತ್ತಾರೆ. ಬಹುಶಃ ಶ್ರೀಯವರು ತನ್ನನ್ನೇ ವ್ಯಾಖ್ಯಾನಿಸಿಕೊಂಡ ಮಾತುಗಳಂತಿದೆ. ಕವಿ ದೇಶಭಕ್ತಿಯನ್ನು ತೋರಿಸುವ ಬಗೆಯನ್ನು

ತೋರಿಸುವ ಬಗೆಯನ್ನು ಬೇರೆ ಮಾದರಿಗಳೊಂದಿಗೆ ಹೋಲಿಸಲಾಗದು ಅದು ಕವಿ ಮಾದರಿಯೇ ಆಗಿರುತ್ತದೆ. ವಿ.ಸೀ.ಯವರ ಈ ಮಾತುಗಳ ಹಿನ್ನೆಲೆಯಿಂದ ಶ್ರೀಯವರನ್ನು ನೋಡಿದಾಗ ಯಾವುದನ್ನು ಶ್ರೀಯವರ ಕೊರತೆ ಎಂದು ಇಷ್ಟು ಕಾಲ ಕನ್ನಡ ಸಾಹಿತ್ಯ ವಿಮರ್ಶೆ ಗುರುತಿಸಿಕೊಂಡು ಬಂದಿದೆಯೊ ಅದಕ್ಕೆ ಬೇರೆ ಬಗೆಯಿಂದ ಉತ್ತರವೊಂದು ದೊರೆಯುತ್ತದೆ. ಇಂಗ್ಲಿಷ್‌ನಿಂದ ಆಯ್ಕೆ ಮಾಡುವಾಗಲೂ ಶ್ರೀಯವರು ಇಂಗ್ಲಿಷ್‌ನಲ್ಲಿರುವ ದೇಶ ಭಕ್ತಿಗೀತೆಗಳನ್ನೇ ಆಯ್ಕೆ ಮಾಡಿದರು. ಆ ಕವಿತೆಗಳು ವೀರಾವೇಷದ ಹೋರಾಟಗಳನ್ನು ಚಿತ್ರಿಸುತ್ತಿದೆ. ಯಾವುದನ್ನು ಇಂಗ್ಲಿಷ್‌ರ ದೇಶಭಕ್ತಿ ಗೀತೆಗಳು ಎಂದು ಅನುವಾದ ಮಾಡಲಾಗಿದೆಯೋ ಅದನ್ನೇ ಭಾರತೀಯ ದೇಶಭಕ್ತಿಗೀತೆಯಾಗಿಯೂ ನೋಡಲು ಸಾಧ್ಯವಿದೆ. ಇಂಗ್ಲೆಂಡ್ ಕೇಂದ್ರಿತವಾದ ಅವರ ಕವಿತೆಗಳನ್ನು ಭಾರತ ಕೇಂದ್ರಿತವಾಗಿಯೂ ಓದಬಹುದಾಗಿದೆ. ಕಾವ್ಯವಾಗಿ ಇಂಗ್ಲೆಂಡ್ ಇದೆ. ಆದರೆ ಕವಿಯ ಆಶಯವಾಗಿ ಅದು ಭಾರತವೇ ಆಗಿದೆ.

ಇದೇ ಮಾದರಿಯಲ್ಲಿರುವ ಇನ್ನೊಂದು ಕವಿತೆ 'ಹೇಳದಿರು ಹೋರಾಡಿ ಫಲವಿಲ್ಲವೆಂದು' ಎನ್ನುವುದು. ಈ ಕವಿತೆಯನ್ನು ನೋಡುವಾಗಲೂ ಕವಿ ನಿಶ್ಚಿತ ಕಾರಣವಿಲ್ಲದೆ ಇದೇ ಕವಿತೆಯನ್ನು ಅನುವಾದ ಮಾಡಿರಲಿಕ್ಕಿಲ್ಲವೆಂದೆನಿಸುತ್ತದೆ. ಹೋರಾಟಕ್ಕೆ ಫಲವಿದೆ ಎಂಬ ಆಶಯ ಈ ಕವಿತೆಯದು.

" ಹೇಳದಿರು ಹೋರಾಡಿ ಫಲವಿಲ್ಲವೆಂದು,  
ತೋಳ ದಣಿಸಿದೆ ಬರಿದೆ ಘಾಸಿಯಾಯ್ತೆಂದು  
ಗೆಲ್ಲುವುದ ಕಾಣೆ, ಹಗೆ ಹಿಮ್ಮೆಟ್ಟನೆಂದು  
ಎಲ್ಲ ಇದ್ದಂತಿಹುದು– ಅಲ್ಲಾಡದೆಂದು  
ನೆಚ್ಚಿ ಕೆಡುವೊಡೆ ಕೆಚ್ಚು ಸೆಡೆದಳುಕು ಕೆಡದೆ?  
ಮುಚ್ಚಿ ಆ ಹೊಗೆಯೊಳಗೆ ಈ ಗಳಿಗೆ ಬಿಡದೆ  
ನಿನ್ನ ಕಳೆಯರು ಹಗೆಯ ತರುಬುತಿರಬಹುದು  
ನಿನ್ನ ಬೆಂಬಲವಿದ್ದು, ಕಳನ ಗೆಲಬಹುದು!"[೮೮]

(ಹೇಳದಿರು ಹೋರಾಡಿ ಫಲವಿಲ್ಲವೆಂದು)

ಸಂಘಟಿತವಾಗಿ ನಡೆಸುವ ಹೋರಾಟ ವ್ಯರ್ಥವಲ್ಲ ಅದು ನಿಶ್ಚಿತ ಫಲ ತಂದು ಕೊಡುತ್ತದೆ ಎಂಬ ವಾದವನ್ನು ಈ ಮೇಲಿನ ಕವಿತೆ ಮುಂದಿಡುತ್ತದೆ. ಈ ಕವಿತೆ ಒಂದು

ರಚನೆಯಾಗಿ ಇಂಗ್ಲಿಷ್ ಮೂಲದ ಕವಿತೆಯೊಂದರ ಅನುವಾದ. ಆದರೆ ಈ ಕವಿತೆ ಅನುವಾದಗೊಂಡು ಪ್ರಕಟಗೊಂಡ ಸಂದರ್ಭ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ರಾಜಕೀಯ ಸ್ವಾತಂತ್ರ್ಯ ಸಂಪಾದನೆಗಾಗಿ ತೀವ್ರವಾದ ಹೋರಾಟ ನಡೆಯುತ್ತಿದ್ದ ಕಾಲಘಟ್ಟದಲ್ಲಿ. ಈ ಹಿನ್ನೆಲೆಯಲ್ಲಿ ನೋಡಿದಾಗ ಹಲವು ದಶಕಗಳ ನಿರಂತರ ಹೋರಾಟದಿಂದ ದಣಿದಿರಬಹುದಾದ ಭಾರತೀಯ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿ ತುಂಬುವುದಕ್ಕಾಗಿಯೇ ಅನುವಾದಿಸಿದಂತಿದೆ. ಈ ಕವಿತೆಯನ್ನು ವಸಾಹತುಶಾಹಿಯ ವಿರೋಧಿ ಕವಿತೆಯಾಗಿಯೂ ಓದಬಹುದಾಗಿದೆ. ಫಲಿತಾಂಶ ರಹಿತವಾದ ಹೋರಾಟದಿಂದ ದಣಿದಿರಬಹುದಾದ ಭಾರತೀಯ ಹೋರಾಟಗಾರರಿಗೆ ಮತ್ತೆ ಒಂದು ಆಶಾವಾದವನ್ನು ತುಂಬುವಂತಿದೆ. "ನಿನ್ನ ಕಳೆಯರು ಹಗೆಯ ತರುಬುತಿರಬಹುದು – ನಿನ್ನ ಬೆಂಬಲವಿದ್ದು ಕಳನ ಗೆಲಬಹುದು!" ಎನ್ನುವ ಸಾಲು ಹೋರಾಟದೊಂದಿಗೆ ಸೇರಿಕೊಳ್ಳದ ಭಾರತೀಯರನ್ನು ಹೋರಾಟದ ಅಂಗಣಕ್ಕೆ ಆಹ್ವಾನಿಸುತ್ತಾ, ನಿನ್ನ ಸೇರುವಿಕೆಯಿಂದ ದುಷ್ಟರ ವಿರುದ್ಧ ಗೆಲುವು ಸಾಧಿಸಲು ಸಾಧ್ಯವಿದೆ ಎಂಬ ಸಂದೇಶವನ್ನು ಸಾರುತ್ತಿದೆ.

"ಬಳುಕುವೆವೆ ಭಕ್ತಿಯಲಿ ನಾವು
ಇಂಗ್ಲೆಂಡ್ ; ನನ್ನಿಂಗ್ಲೆಂಡ್ !
ಕೊಳು, ಕೊಲಿಸು; ನಿನ್ನವರು ನಾವು
ನನ್ನ ಇಂಗ್ಲೆಂಡ್ !
ನಿನ್ನ ಹೊಲ, ಮನೆ, ಚೆಂದ;
ಬಾಳು ಮಿಗಿಲಾನಂದ;
ಸಾವಳಿವು – ಸಾಯುವೆವು
ಗಾನದಲಿ ತುತ್ತೂರಿಯ ನೀನೂದಲು
ಇಂಗ್ಲೆಂಡ್
ಸ್ವರ್ಗದಲಿ ತುತ್ತುರಿಯ ನೀನೂದಲು"[೪೯] (ಇಂಗ್ಲೆಂಡ್)

ಎಂದು 'ಇಂಗ್ಲೆಂಡ್' ಕವಿತೆಯ ಸಾಲುಗಳಿವೆ. ಕವಿ ಇಲ್ಲಿ ಯಾವುದನ್ನು ಇಂಗ್ಲೆಂಡಿನ ಹೊಲ, ಮನೆ, ಬಾಳನ್ನು ಸುಂದರವಾದ ಬದುಕಾಗಿ, ಆನಂದದ ಸಂಗತಿಯಾಗಿ ಹೇಳುತ್ತಿದ್ದಾರೊ, ಅದು ಇಂಗ್ಲೆಂಡ್ ಅಷ್ಟೇ ಆಗಬೇಕಾಗಿಲ್ಲ. ಇಲ್ಲಿ 'ಇಂಗ್ಲೆಂಡ್' ಎನ್ನುವುದನ್ನು ಕರ್ನಾಟಕ, ಭಾರತ ಎಂಬುದಾಗಿಯೂ ಓದಿಕೊಳ್ಳಬಹುದು. ಕವಿ ಒಬ್ಬ ಇಂಗ್ಲೀಷ್ ಪ್ರಜೆಯು ತನ್ನ ಇಂಗ್ಲೆಂಡಿಗಾಗಿ ಏನು ಮಾಡಿದೆನು ನಾನು ?

ಎಂದು ಪ್ರಶ್ನಿಸಿಕೊಳ್ಳುವ ಬಗೆ ಇದೆ. ಈ ಪ್ರಶ್ನೆಯು ಕನ್ನಡಿಗನ ಪ್ರಶ್ನೆಯೂ ಯಾಕಾಗಬಾರದು ಎಂಬ ಅರಿವಿನೊಂದಿಗೆ ಓದಿದರೆ ಶ್ರೀಯವರ ಈ ಕವನದ ಓದು ಬೇರೆಯಾಗುತ್ತದೆ. ಇದನ್ನು ಇಂಗ್ಲೆಂಡಿನ ಮೇಲಿನ ಪ್ರೀತಿ ಎಂದೇ ಭಾವಿಸಿಕೊಳ್ಳಬೇಕಾಗಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಕವಿ ಅವನ ಕಾರ್ಯವನ್ನು ಅವನ ರೀತಿಯಲ್ಲಿ ಮಾಡುತ್ತಾನೆ ಎಂದು ಶ್ರೀಯವರೇ ಹೇಳಿದ್ದರು. ಹಾಗಾಗಿ ಇದು ಒಂದು ಸ್ವಾತಂತ್ರ್ಯ ಚಳವಳಿಯ ಭಾಗವೇ ಆದ ಕ್ರಿಯೆಯಾಗುತ್ತದೆ. ಇಂಗ್ಲೆಂಡಿಗೆ ಪರ್ಯಾಯವಾಗಿ ಭಾರತವನ್ನು, ಇಂಗ್ಲಿಷರ ರಾಣಿಗೆ ಪರ್ಯಾಯವಾಗಿ ಮೈಸೂರರಸರನ್ನು ಬಹಿರಂಗದಲ್ಲಿ ತೋರದ ಒಂದು ಕಾರ್ಯಸೂಚಿಯಾಗಿಯೇ ಕವಿ ಬೆಳೆಸಿಕೊಂಡು ಹೋದರು ಎನ್ನಬಹುದು.

ಹೀಗಿದ್ದರೂ ಶ್ರೀಯವರಿಗೆ ಬ್ರಿಟಿಷರ ವಿರುದ್ಧದ ಭಾವನೆ ಇತ್ತು ಎಂದು ಸ್ಪಷ್ಟವಾಗಿ ಹೇಳಲಾಗದು. ಸಾಮ್ರಾಜ್ಯಶಾಹಿ ಬ್ರಿಟನ್ ಮತ್ತು ಬ್ರಿಟಿಷರ ಊಳಿಗದ ರಾಜ್ಯ ಮೈಸೂರು ಕುರಿತು ಶ್ರೀಯವರ ಒಲವು ಸದಾ ಪ್ರಕಟವಾಗುತ್ತಿತ್ತು. ವಸಾಹತುಶಾಹಿಯು ಒಂದು ಸವಾಲು ಎಂಬ ಭಾವಿಸಿ ನೇರವಾಗಿ ಪ್ರಕಟಿಸಲಿಲ್ಲ. ಬದಲಾಗಿ ಕನ್ನಡದ ಸಂಸ್ಕೃತಿಯ ಮೂಲಕ ಎದುರಿಸುವ ಪ್ರಯತ್ನ ಮಾಡಿದರು. ಹೀಗೆ ಸಾಮ್ರಾಜ್ಯಶಾಹಿಯನ್ನು ಓಲೈಸುವುದಕ್ಕಾಗಿ ಅವರು ತನ್ನ ನೆಲದ ಹೋರಾಟಗಾರರನ್ನು ವಿರೋಧಿಸಿದ್ದೂ ಇದೆ. ಶ್ರೀಯವರ 'ಧರ್ಮಯುದ್ಧ' ಎಂಬ ಕವನವು ಅವರ ರಾಷ್ಟ್ರೀಯತೆಯ ಕುರಿತ ಆಲೋಚನೆಯ ಇನ್ನೊಂದು ಮುಖವನ್ನು ಹೇಳುತ್ತದೆ. ೧೯೪೨ರಲ್ಲಿ ಗಾಂಧಿ 'ಭಾರತ ಬಿಟ್ಟು ತೊಲಗಿ' ಎಂದು ಬ್ರಿಟಿಷ್‌ರನ್ನು ಒತ್ತಾಯಿಸಿ, ಅಂದೋಲನ ನಡೆಸುತ್ತಿದ್ದರು. ೧೯೪೩ರಲ್ಲಿ ಈ 'ಧರ್ಮಯುದ್ಧ' ಕವನ ರಚನೆಯಾಗಿದೆ. ೨ನೇ ಜಾಗತಿಕ ಮಹಾಯುದ್ಧದಲ್ಲಿ ಬ್ರಿಟಿಷರ ಪರವಾಗಿ ಭಾರತ ಬೆಂಬಲಿಸಬೇಕಾಗಿ ಬಂದಾಗ ಬ್ರಿಟಿಷರಿಗೆ ಗೆಲುವನ್ನು ಹಾರೈಸುವ ಸಂಗತಿ ಈ ಕವಿತೆಯಲ್ಲಿದೆ.

" ಗೆಲವು ನಮ್ಮದು, ಮಾಯಕಾರರೆ!
ಗೆಲವು ನಮ್ಮದು ದ್ರೋಹಿಗಳೇ! ಕಡೆ
ಗೆಲವು ನಮ್ಮದು, ನಮ್ಮ ದಿವ್ಯ ಜ್ಯೋತಿ ನಮಗಿಹನು
ಗೆಲವು ಶ್ರೀ ಜಯಚಾಮರಾಜಗೆ!

ಗೆಲವು ಬಿಡುತೆಗೆ, ಸಾಧುಜನತೆಗೆ

ಗೆಲವು ಶಾಂತಿಯ ಸರ್ವಸಮತೆಯ ಸುಖದ ಜೀವನಕೆ !" [೫೦]

(ಧರ್ಮಯುದ್ಧ)

ಈ ಕವಿತೆ ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡುತ್ತಿರುವ ಹೋರಾಟಗಾರರನ್ನು ವ್ಯಂಗ್ಯವಾಗಿ ಚುಚ್ಚುವ ಮತ್ತು ಇಂತಹ ಹೋರಾಟಗಾರರಿಗೆ 'ದ್ರೋಹಿಗಳೆ' ಎಂದು ಹೇಳಿ ಸಂಪೂರ್ಣವಾಗಿ ಸಾಮ್ರಾಜ್ಯಶಾಹಿ ಮತ್ತು ರಾಜಶಾಹಿಯ ಗೆಲುವನ್ನು ಬಯಸುತ್ತಿದೆ. ಬ್ರಿಟಿಷರಿಗಾಗಿ ಹೋರಾಡುವ ತಮ್ಮ ಋಣವನ್ನು ಹೀಗೆ ಹೇಳುತ್ತಾರೆ 'ಕಾಳಗ ದಣಿಗೆ ಮುಡಿಪಾಗಿಟ್ಟು ತನುಮನಧನವ ತೇಯುವೆವು! ಋಣವಿದಲ್ಲವೆ ಭರತಮಾತೆಯ?" ಎಂದು ಕೇಳುತ್ತಾರೆ. ಈ ಸಂಗತಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಕ್ರಾಂತಿಕಾರಿಗಳಾಗಿ ಹೋರಾಡುತ್ತಿದ್ದವರನ್ನು ಕವಿ ಸಾಮ್ರಾಜ್ಯಶಾಹಿಯ ಭಾಷೆಯಲ್ಲೆ (ದ್ರೋಹಿಗಳೆ ಎಂದು) ನಿಂದಿಸಿದ ಬಗೆ ನೋಡಿದಾಗ ಶ್ರೀಯವರು ಸಾಮ್ರೂಜ್ಯಶಾಹಿಯೊಂದಿಗೆ ಬೆಸೆದುಕೊಂಡಿದ್ದ ನಂಟನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಈ ಹಿನ್ನಲೆಯಿಂದ ನೋಡಿದರೆ ಶ್ರೀಯವರು ಓರ್ವ ಸಂಕೀರ್ಣ ಕವಿಯಾಗಿ ತೋರುತ್ತಾರೆ.

### ೪.೭ ಶ್ರೀಯವರ ಕವಿತೆಗಳಲ್ಲಿನ ರಾಷ್ಟ್ರೀಯತೆಯ ಒಟ್ಟು ಸ್ವರೂಪ :

ಶ್ರೀಯವರ ಕವಿತೆಗಳ ರಾಷ್ಟ್ರೀಯತೆಯ ಸ್ವರೂಪವನ್ನು ಒಟ್ಟಾಗಿ ಗ್ರಹಿಸಬೇಕಾದರೆ ಆ ಕಾಲದ ಚಾರಿತ್ರಿಕ ಸನ್ನಿವೇಶವನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಅವರ 'ಇಂಗ್ಲಿಷ್ ಗೀತಗಳು' ಮತ್ತು 'ಹೊಂಗಸುಗಳು' ಎಂಬ ಎರಡು ಸಂಕಲನಗಳು ಕನ್ನಡದಲ್ಲಿ ಮಹತ್ವದ ಚರ್ಚೆಗಳನ್ನು ಹುಟ್ಟುಹಾಕಿದ ಕೃತಿಗಳೇ ಆಗಿವೆ. ಕನ್ನಡ, ಇಂಗ್ಲಿಷ್, ಇಂಗ್ಲೆಂಡ್-ಭಾರತ, ವಸಾಹತುಶಾಹಿ- ಸ್ವಾತಂತ್ರ್ಯ ಈ ಮೊದಲಾದ ಸಂಗತಿಗಳ ಒಂದು ಬಗೆಯ ದ್ವಂದ್ವಾತ್ಮಕ ಸಂಬಂಧವನ್ನು ಶ್ರೀಯವರು ನಿಭಾಯಿಸಿದ ಬಗೆಯಲ್ಲೇ ಅವರ ರಾಷ್ಟ್ರೀಯತೆಯ ಪರಿಕಲ್ಪನೆಯ ಚಿಂತನೆಯೂ ಇದೆ. ಕನ್ನಡದ ಅನೇಕ ಕವಿಗಳಂತೆ ನೇರವಾಗಿ ಎಲ್ಲೂ ಬ್ರಿಟಿಷ್ ವಸಾಹತುಶಾಹಿಯನ್ನು ವಿರೋಧಿಸುವ ಮಾದರಿಯ, ಸ್ವಾತಂತ್ರ್ಯದ ಹೋರಾಟಕ್ಕೆ ಪ್ರೇರೇಪಿಸುವ ಮಾದರಿಯ ಕವನಗಳ ಸ್ವರೂಪದಲ್ಲಿ ಶ್ರೀಯವರ ರಾಷ್ಟ್ರೀಯತೆ ಪ್ರಕಟಗೊಂಡಿಲ್ಲ. ಹಾಗೆಂದು ಶ್ರೀಯವರು

ಇಂಗ್ಲಿಷ್ ಪ್ರಭುತ್ವವನ್ನು ಭಾರತೀಯರ ಪಾಲಿನ ರಕ್ಷಕ ದೈವವಾಗಿಯೂ ಭಾವಿಸಿಕೊಂಡಿರಲಿಲ್ಲ.

ಶ್ರೀಯವರ ರಾಷ್ಟ್ರೀಯತೆಯ ಪರಿಕಲ್ಪನೆಯು ತಾತ್ವಿಕವಾಗಿ ಸಂಕೀರ್ಣವಾದುದು. ಶ್ರೀಯವರ ರಾಷ್ಟ್ರೀಯತೆಯ ಸ್ವರೂಪವನ್ನು ಸರಿಯಾಗಿ ಗ್ರಹಿಸುವಲ್ಲಿ ಕನ್ನಡದ ವಿಮರ್ಶಕರು ಸಂಶೋಧಕರು ಬಹುಕಾಲ ವಿಫಲರಾಗಿದ್ದರು. ಇತ್ತೀಚೆಗೆ ಶ್ರೀಯವರ ಇಂಗ್ಲಿಷ್ ಗೀತಗಳು ಸಂಕಲನ ಅನೇಕ ಕವನಗಳನ್ನು ಹೊಸದಾಗಿ ಓದಬಹುದಾದ ಕ್ರಮದ ಬಗ್ಗೆ ಚರ್ಚೆ ನಡೆಯುತ್ತಿದೆ. ವಸಾಹತುಶಾಹಿಯ ಒಡಲಿನಿಂದಲೇ ಪಡೆದ ಜ್ಞಾನದಿಂದ ವಸಾಹತುಶಾಹಿಯನ್ನು ಎದುರಿಸಿದ್ದು ಶ್ರೀಯವರ ವಿಶಿಷ್ಟತೆ. ಹಾಗಾಗಿ ಮೇಲ್ನೋಟದಲ್ಲಿ ಕೇವಲ ಇಂಗ್ಲೆಂಡಿನ ವರ್ಣನೆ, ಅವರ ದೇಶಭಕ್ತಿಯನ್ನು ಹೇಳುವ ಕವಿತೆಗಳು ಅಂತರ್ಯದಲ್ಲಿ ಭಾರತೀಯರ ಬಿಡುಗಡೆಗೆ ಬೇಕಾದ ದಾರಿಯನ್ನು ತೋರಿಸುತ್ತಿದೆ.

ಶ್ರೀಯವರು ಕುವೆಂಪು, ಬೇಂದ್ರೆಯವರ ಹಾಗೆ ವಸಾಹತುಶಾಹಿ ಪ್ರಭುತ್ವವನ್ನು ಬಹಿರಂಗವಾಗಿಯೇ ಎದುರು ಹಾಕಿಕೊಂಡವರಲ್ಲ. ಆದರೆ ಅವರ ಕವಿತೆಗಳು ಗುಪ್ತವಾಗಿ ಅದೇ ಕೆಲಸವನ್ನು ಮಾಡಿದೆ. ಇಂಗ್ಲಿಷರೊಂದಿಗೆ ಸಖ್ಯವನ್ನು ತೋರಿಸಿಯೂ ಅದನ್ನು ದಾಸ್ಯದ ನೆಲೆಯಾಗಿಸದೆ, ಆ ಜ್ಞಾನದೊಂದಿಗೆ ಕನ್ನಡವನ್ನು, ಭಾರತವನ್ನು ಸಮನ್ವಯವಾದಿ ನೆಲೆಗೆ ಏರಿಸುತ್ತಾರೆ. ಇದು ಅವರ ರಾಷ್ಟ್ರೀಯತೆಯ ಒಟ್ಟು ಸ್ವರೂಪವೂ ಹೌದು. ಇಂಗ್ಲಿಷ್ ಗೀತಗಳಲ್ಲಿ ಶ್ರೀಯವರು ಆಯ್ದುಕೊಂಡ ಹಲವಾರು ದೇಶಭಕ್ತಿ ಮಾದರಿಯ ಗೀತಗಳು ನೇರವಾದ ಅನುವಾದವಾಗಿ ಪ್ರಕಟವಾಗದೆ ಕನ್ನಡದ ಜಾಯಾಮಾನಕ್ಕೆ ಅನ್ವಯವಾಗುವಂತೆ ಭಾವಾನುವಾದ, ರೂಪಾನುವಾದದ ಸ್ವರೂಪದ ಮೂಲಕ ರೂಪು ಪಡೆದಿದೆ. ಹಾಗಾಗಿಯೆ ಕವಿತೆಯ ಆಶಯವನ್ನು ಕರ್ನಾಟಕದ, ಕನ್ನಡದ ಆ ಕಾಲದ ಆಂದೋಲನಗಳಿಗೆ ಪರೋಕ್ಷವಾದ ಪ್ರೇರಣೆಯನ್ನು ಒದಗಿಸಿವೆ ಎಂದೂ ತರ್ಕಿಸಬಹುದಾಗಿದೆ. ಇಂಗ್ಲಿಷ್ ಗೀತಗಳಿಂದ ಪ್ರಭಾವಿತರಾಗಿ ಹಲವಾರು ಮಂದಿ ಕವಿಗಳು ಕನ್ನಡದಲ್ಲಿ ಕಾವ್ಯ ರಚಿಸಿದ ಮತ್ತು ಹೋರಾಟಗಾರರಿಗೆ ಸ್ಫೂರ್ತಿಯ ಸೆಲೆಯನ್ನು ಹರಿಸಿದ ವಿದ್ಯಮಾನಗಳನ್ನು ಅರ್ಥಮಾಡಿಕೊಂಡರೆ ಭಾಷಿಕವಾಗಿ ಮತ್ತು ಕಾವ್ಯಾತ್ಮಕ ನೆಲೆಗಳಲ್ಲಿ ಶ್ರೀಯವರ ಕವಿತೆಗಳನ್ನು ರಾಷ್ಟ್ರ ಚಿಂತನೆಗೆ ಪೂರಕವಾಗಿ ಅಧ್ಯಯನ ಮಾಡಬಹುದಾಗಿದೆ.

## ಕೊನೆ ಟಿಪ್ಪಣಿ

೧. ಕೀರ್ತಿನಾಥ ಕುರ್ತಕೋಟಿ, ೧೯೮೮, ಕನ್ನಡ ಕಾವ್ಯದಲ್ಲಿ ರಾಷ್ಟ್ರೀಯತೆಯ ಕಾಳಜಿಗಳು ಮತ್ತು ಅಭಿವ್ಯಕ್ತಿ, ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ. ಸಂ: ಜಿ.ಎಸ್.ಶಿವರುದ್ರಪ್ಪ, ೧೯೮೮ ಪುಟ -೧೪,
೨. ಡಾ.ರಾಘವೇಂದ್ರ ರಾವ್ ಎಚ್.ಎಸ್. ೧೯೯೫, ಹಾಡೇ ಹಾದಿಯ ತೋರಿತು, ಪುಟ- ೫೫-೫೬
೩. ಡಾ.ರಾಜಾರಾಮ ತೋಳ್ಪಾಡಿ, ೨೦೦೧, ಭಾರತದ ರಾಷ್ಟ್ರೀಯತೆಯ ಪ್ರಶ್ನೆಗಳು, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪ ಚರಿತ್ರೆ (ಸಂ)ಡಾ. ತಂಬಂಡ ವಿಜಯ ಪೂಣಚ್ಚ ಪುಟ - ೭೬೪
೪. ಕುವೆಂಪು ೧೯೪೪, ಹೊಸ ಸಾಹಿತ್ಯ ಮತ್ತು ಹೊಸದೃಷ್ಟಿ, ಕುವೆಂಪು ಸಮಗ್ರ ಗದ್ಯ ಸಂಪುಟ -೧ (ಸಂ) ಡಾಕೆ.ಸಿ. ಶಿವಾರೆಡ್ಡಿ ಪುಟ -೪೬
೫. ಡಾ.ನಾರಾಯಣ ಕೆ.ವಿ. ೨೦೧೦, ತೊಂಡುಮೇವು - ಕಂತೆ ಒಂದು, ಪುಟ- ೨೩೯
೬. ಕುವೆಂಪು ೧೯೫೬ ಕರ್ನಾಟಕದ ಕಲ್ಯಾಣ ಕುವೆಂಪು ಸಮಗ್ರ ಗದ್ಯ ಸಂಪುಟ - ೨, ಪುಟ ೬೪೮
೭. ಡಾ.ಶಿವಾರೆಡ್ಡಿ ಕೆ.ಸಿ. ೨೦೦೩, ಕನ್ನಡದ ಹಾಡು ಪಾಡು, ಪುಟ- ೧೨೪
೮. ಕುವೆಂಪು, ೧೯೨೯ ಪಾಂಚಜನ್ಯ, ಕುವೆಂಪು ಸಮಗ್ರ ಕಾವ್ಯ ಸಂಪುಟ - ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ - ೧೨೨
೯. ಕುವೆಂಪು ೧೯೩೦ ಸತ್ಯಾಗ್ರಹಿ, ಕುವೆಂಪು ಸಮಗ್ರ ಕಾವ್ಯ ಸಂಪುಟ - ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ-೧೨೬
೧೦. ಗಾಂಧೀ ಮೊ.ಕ,ಉದೃತ:ಗಾಂಧೀ ತತ್ವ ಚಿಂತನೆ (ಸಂ) ನೀಲತ್ತಹಳ್ಳಿ ಕಸ್ತೂರಿ ಪುಟ-೧೭
೧೧. ಕುವೆಂಪು ೧೯೩೧ ಇಂದಿನ ದೇವರು, ಕುವೆಂಪು ಸಮಗ್ರ ಕಾವ್ಯ ಸಂಪುಟ -೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೧೪೪
೧೨. ಕುವೆಂಪು ೧೯೩೫ ರಕ್ತತರ್ಪಣ, ಕುವೆಂಪು ಸಮಗ್ರ ಕಾವ್ಯ ಸಂಪುಟ -೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೩೭೫
೧೩. ಡಾ.ಶಿವಾರೆಡ್ಡಿ ಕೆ.ಸಿ. ೨೦೦೩, ಕನ್ನಡದ ಹಾಡು ಪಾಡು, ಪುಟ- ೦೮
೧೪. ಡಾ.ನಾಗರಾಜ್ ಡಿ.ಆರ್. ೧೯೯೬ ಕನ್ನಡ ರಾಷ್ಟ್ರೀಯತೆಯ ಸ್ವರೂಪ, ಸಾಹಿತ್ಯ ಕಥನ, ಪುಟ- ೨೮೩
೧೫. ಕುವೆಂಪು, ೧೯೨೯, ಹಂಪೆಯ ಭೀಮ, ಕುವೆಂಪು ಸಮಗ್ರ ಕಾವ್ಯ ಸಂಪುಟ- ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೩೮೪
೧೬. ಕುವೆಂಪು ೧೯೨೬ ಗೋಮಟೇಶ್ವರ, ಕುವೆಂಪು ಸಮಗ್ರ ಕಾವ್ಯ ಸಂಪುಟ-೧ (ಸಂ) ಡಾಕೆ.ಸಿ.ಶಿವಾರೆಡ್ಡಿ ಪುಟ-೩೯
೧೭. ಡಾ.ಶಿವಾರೆಡ್ಡಿ ಕೆ.ಸಿ. ೨೦೦೩, ಕನ್ನಡದ ಹಾಡು ಪಾಡು, ಪುಟ - ೧೫೧
೧೮. ಕುವೆಂಪು ೧೯೩೨ ಭಾರತ ತಪಸ್ವಿನಿ, ಕುವೆಂಪು ಸಮಗ್ರ ಕಾವ್ಯ ಸಂ- ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ-೫೧೨
೧೯. ಕುವೆಂಪು ೧೯೩೫ ಹೊಸ ಬಾಳಿನ ಗೀತೆ, ಕುವೆಂಪು ಸಮಗ್ರ ಕಾವ್ಯ ಸಂ:೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೩೭೪
೨೦. ಕುವೆಂಪು ಪ್ರತಾಪಸಿಂಹ, ಕುವೆಂಪು ಸಮಗ್ರ ಕಾವ್ಯ ಸಂ:೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೬೭೩
೨೧. ಕುವೆಂಪು ೧೯೨೮, ಮಹಾದರ್ಶನ, ಕುವೆಂಪು ಸಮಗ್ರ ಕಾವ್ಯ ಸಂ: ೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ, ಪುಟ - ೮೩೭-೮೭೨
೨೨. ಕುವೆಂಪು ೧೯೩೫ ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆಯಷ್ಟಿ .ಕುವೆಂಪು ಸಮಗ್ರ ಕಾವ್ಯ ಸಂ- ೧ (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ- ೫೦೪
೨೩. ಕುವೆಂಪು ೧೯೩೫ ಕ್ರಾಂತಿಕಾಳಿ, ಕುವೆಂಪು ಸಮಗ್ರ ಕಾವ್ಯ ಸಂಪುಟ- ೧. (ಸಂ) ಡಾ.ಕೆ.ಸಿ.ಶಿವಾರೆಡ್ಡಿ ಪುಟ-೪೯೭

೨೪. ಕುವೆಂಪು ೧೯೩೩, ದೇಶಭಕ್ತನ ಉತ್ತರವಾಣಿ, ಕುವೆಂಪು ಸಮಗ್ರ ಕಾವ್ಯ ಸಂಪುಟ- ೧ (ಸಂ) ಡಾಕೆ.ಸಿ. ಶಿವಾರೆಡ್ಡಿ ಪುಟ- ೫೦೭

೨೫. ಕುವೆಂಪು ೧೯೫೦, ಕುಳದ ಕಲಿಗೆ, ಕುವೆಂಪು ಸಮಗ್ರ ಕಾವ್ಯ ಸಂಪುಟ-೨ (ಸಂ) ಡಾ.ಕೆ.ಸಿ.ಶಿವಾರೆಡ್ಡಿ. ಪುಟ-೩೯೯

೨೬. ಡಾ.ಶಿವಾರೆಡ್ಡಿ ಕೆ.ಸಿ. ೨೦೦೩, ಕನ್ನಡದ ಹಾಡು ಪಾಡು, ಪುಟ- ೬೭

೨೭. ಬೇಂದ್ರೆ ದ.ರಾ ೧೯೮೨, ಮಾತೃವಂದನ, ಔದುಂಬರ ಗಾಥೆ- ಸಂಪುಟ-೨ (ಸಂ) ವಾಮನ ಬೇಂದ್ರೆ, ಪುಟ- ೩೦೯

೨೮. ಬೇಂದ್ರೆ ದ.ರಾ ೧೯೫೯, ಇಗೋ ಹೊರಡೆವು ಬಿಡುಗಡೆಗಾಗಿ, ಔದುಂಬರ ಗಾಥೆ ಸಂ: ೨, ( ಸಂ) ವಾಮನ ಬೇಂದ್ರೆ, ಪುಟ- ೩೩೨

೨೯. ಬೇಂದ್ರೆ ದ.ರಾ ೧೯೩೦ 'ನರಬಲಿ' ಔದುಂಬರ ಗಾಥೆ- ಸರ-೨, (ಸಂ) ವಾಮನ ಬೇಂದ್ರೆ, ಪುಟ- ೩೩೯

೩೦. ಬೇಂದ್ರೆ ದ.ರಾ ೧೯೫೬ ಯುದ್ಧ ಬಂತು ಮನೆಯವರೆಗೆ, ಔದುಂಬರ ಗಾಥೆ, ಸಂ-೨, (ಸಂ) ವಾಮನ ಬೇಂದ್ರೆ, ಪುಟ -೩೪೪

೩೧. ಬೇಂದ್ರೆ ದ.ರಾ ೧೯೫೬ ನವಯುಗಾರಂಭ, ಔದುಂಬರ ಗಾಥೆ- ಸಂ-೨, (ಸಂ) ವಾಮನ ಬೇಂದ್ರೆ, ಪುಟ- ೩೪೯

೩೨. ಬೇಂದ್ರೆ ದ.ರಾ ೧೯೨೮, ಮೂವತ್ತ ಮೂರು ಕೋಟಿ, ಗರಿ, ಪುಟ- ೪೯

೩೩. ಬೇಂದ್ರೆ ದ.ರಾ ೧೯೫೮, ಸ್ವಾತಂತ್ರ್ಯದ ವರ್ಧಂತಿ, ಔದುಂಬರ ಗಾಥೆ ಸಂ-೨, (ಸಂ) ವಾಮನ ಬೇಂದ್ರೆ, ಪುಟ-೩೪೬

೩೪. ಬೇಂದ್ರೆ ದ.ರಾ ೧೯೫೮ ಸಮರದಲ್ಲಿ ಅಮರರಾದ, ಔದುಂಬರ ಗಾಥೆ, ಸಂ-೨ (ಸಂ)- ವಾಮನ ಬೇಂದ್ರೆ, ಪುಟ- ೩೫೭

೩೫. ಬೇಂದ್ರೆ ದ.ರಾ. ೧೯೫೯ ನಾಡಗುಡಿ, ಭಾರತ ದರ್ಶನ ಸಂಪುಟ (ಸಂ) ವಾಮನ ಬೇಂದ್ರೆ, ಪುಟ-೧೫

೩೬. ಬೇಂದ್ರೆ, ದ.ರಾ, ೧೯೬೬ ಜನವೇ ರಾಷ್ಟ್ರ, ಭಾರತ ದರ್ಶನ ಸಂಪುಟ- (ಸಂ) ವಾಮನ ಬೇಂದ್ರೆ, ಪುಟ-೨೭

೩೭. ಡಾ.ಚಂದ್ರಶೇಖರ ಎಸ್, ೧೯೮೫ ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ ಕರ್ನಾಟಕ ಏಕೀಕರಣ, ಶ್ರೀನಿಧಿ (ಸಂ) ಡಾ.ಜಿ.ಎಸ್.ಶಿವರುದ್ರಪ್ಪ ಪುಟ- ೧೩೩

೩೮. ಡಾ.ಶಿವರುದ್ರಪ್ಪ ಜಿ.ಎಸ್. ೧೯೮೫, ಶ್ರೀ ನಿಧಿ- ಪ್ರಸ್ತಾವನೆ (ಸಂ) ಶಿವರುದ್ರಪ್ಪ ಜಿ.ಎಸ್. ಪುಟ- viii-ix

೩೯. ಡಾ.ಸುಮಾ ಬಿ.ಯು, ೨೦೦೭ ಇಂಗ್ಲಿಷ್ ಗೀತಗಳು ಹಾಗೂ ಕನ್ನಡ ಕಾವ್ಯ ಪರಂಪರೆ, ಇಂಗ್ಲಿಷ್ ಗೀತಗಳು: ಸಾಂಸ್ಕೃತಿಕ ಮುಖಾಮುಖಿ (ಸಂ) ಡಾ.ರಹಮತ್ ತರೀಕೆರೆ, ಪುಟ- ೮೭

೪೦. ಶ್ರೀಧರ ವಿ.ಎಸ್, ೨೦೦೭, ಬಿ.ಎಂ.ಶ್ರೀ ಮತ್ತು ವಸಾಹತುಶಾಹಿ: ಕೆಲವು ಟಿಪ್ಪಣಿಗಳು', ಇಂಗ್ಲಿಷ್ ಗೀತಗಳು: ಸಾಂಸ್ಕೃತಿಕ ಮುಖಾಮುಖಿ, (ಸಂ) ಡಾ.ರಹಮತ್ ತರೀಕೆರೆ, ಪುಟ- ೪೯

೪೧. ಶ್ರೀಕಂಠಯ್ಯ ಬಿ.ಎಂ. ೧೯೧೪, ಭರತಮಾತೆಯ ನುಡಿ, ಶ್ರೀ ಸಾಹಿತ್ಯ ಪುಟ- ೧೨೫

೪೨. ಚಿಂತಾಮಣಿ ಕೊಡ್ಲೆಕೆರೆ, ೨೦೦೭, ಇಂಗ್ಲಿಷ್ ಗೀತಗಳು ಹಾಗೂ ಶ್ರೀಯವರ ಸ್ವತಂತ್ರ ಕವನಗಳು ,ಇಂಗ್ಲಿಷ್ ಗೀತಗಳು: ಸಾಂಸ್ಕೃತಿಕ ಮುಖಾಮುಖಿ (ಸಂ) ರಹಮತ್ ತರೀಕೆರೆ, ಪುಟ- ೧೨೨

೪೩. ಡಾ.ಚಂದ್ರಶೇಖರ್ ಎಸ್. ೧೯೮೫, ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ : ಕರ್ನಾಟಕದ ಏಕೀಕರಣ: ಶ್ರೀನಿಧಿ, (ಸಂ)ಡಾ. ಜಿ.ಎಸ್. ಶಿವರುದ್ರಪ್ಪ, ಪುಟ-೧೩೪

೪೪. ಡಾ.ಸುಮಾ ಬಿ.ಯು ೨೦೦೭, 'ಇಂಗ್ಲಿಷ್ ಗೀತಗಳು ಹಾಗೂ ಕನ್ನಡ ಕಾವ್ಯ ಪರಂಪರೆ'. ಇಂಗ್ಲಿಷ್ ಗೀತಗಳು: ಸಾಂಸ್ಕೃತಿಕ ಮುಖಾಮುಖಿ, (ಸಂ) ಡಾ.ರಹಮತ್ ತರೀಕೆರೆ ಪುಟ- ೮೮-೮೯

೪೫. ಶ್ರೀಕಂಠಯ್ಯ ಬಿ.ಎಂ. ೧೯೨೧, ಆಳೌ ಬ್ರಿಟಾನಿಯ, ಶ್ರೀ ಸಾಹಿತ್ಯ ಪುಟ- ೭೬

೪೬. ಸೀತಾರಾಮಯ್ಯ ವಿ. ೧೯೮೩, ಪರಿಚಯ- ಕಾಣಿಕೆ, ಶ್ರೀ ಸಾಹಿತ್ಯ ಪುಟ- ೨೪

೪೭. ಅದೇ- ಪುಟ-೩೬-೩೭

೪೮. ಶ್ರೀಕಂಠಯ್ಯ ಬಿ.ಎಂ. ೧೯೨೧ ಹೇಳದಿರು ಹೋರಾಡಿ ಫಲವಿಲ್ಲವೆಂದು, ಶ್ರೀ ಸಾಹಿತ್ಯ, ಪುಟ- ೧೧೭

೪೯. ಶ್ರೀಕಂಠಯ್ಯ ಬಿ.ಎಂ. ೧೯೨೧, ಇಂಗ್ಲೆಂಡ್, ಶ್ರೀ ಸಾಹಿತ್ಯ, ಪುಟ – ೭೭

೫೦. ಶ್ರೀಕಂಠಯ್ಯ ಬಿ.ಎಂ. ೧೯೪೩, ಧರ್ಮಯುದ್ಧ ಶ್ರೀ ಸಾಹಿತ್ಯ ಪುಟ- ೧೫೦

## ೫. ನಾಡು– ರಾಷ್ಟ್ರ : ಕನ್ನಡ ಕವಿಗಳ ಸಮನ್ವಯ ಪ್ರಜ್ಞೆ

೫.೧. ಪ್ರಸ್ತಾವನೆ

೫.೨. ಕುವೆಂಪು ಕವಿತೆಗಳಲ್ಲಿ ಸಮನ್ವಯತೆಯ ಸ್ವರೂಪ

೫.೩. ಬೇಂದ್ರೆಯವರ ಕವಿತೆಗಳಲ್ಲಿ ಸಮನ್ವಯ ಪ್ರಜ್ಞೆ

೫.೪. ಬಿ.ಎಂ.ಶ್ರೀ. ಕವಿತೆಗಳಲ್ಲಿ ಸಮನ್ವಯ ಭಾವ

೫.೫. ನಾಡು– ರಾಷ್ಟ್ರ: ನವೋದಯದ ನಂತರ

೫.೬. ನಾಡು– ರಾಷ್ಟ್ರ: ವರ್ತಮಾನದ ಬಿಕ್ಕಟ್ಟುಗಳು

# ಅಧ್ಯಾಯ ೫

## ನಾಡು-ರಾಷ್ಟ್ರ : ಕನ್ನಡ ಕವಿಗಳ ಸಮನ್ವಯ ಪ್ರಜ್ಞೆ

### ೫.೧ ಪ್ರಸ್ತಾವನೆ:

ಹೊಸಗನ್ನಡದ ಮೊದಲ ಘಟ್ಟದ ಸಾಹಿತ್ಯದ ಮುಖ್ಯ ಕಾಳಜಿಗಳಲ್ಲಿ ರಾಷ್ಟ್ರೀಯತೆ ಮತ್ತು ನಾಡಿನ ಬಗೆಗಿನ ಪ್ರೇಮವನ್ನು ಕಾಣಬಹುದು. ರಾಷ್ಟ್ರಭಕ್ತಿಯ, ನಾಡು-ನುಡಿಯ ಕಾಳಜಿ ಸಾಹಿತ್ಯ ರಚನೆಯ ಪ್ರಮುಖ ಸ್ಫೂರ್ತಿಯಾಗಿತ್ತು. ಹೋರಾಟದ ಕಾಲದಲ್ಲಿ ಉತ್ಕರ್ಷಕ್ಕೆ ಬಂದ ಈ ಪರಿಕಲ್ಪನೆಗಳು ಒಂದು ಸಾಂಸ್ಕೃತಿಕ ಸಂಕಥನವಾಗಿ ಬೆಳೆದದ್ದು ಸಾಹಿತ್ಯದ ಕಾರಣದಿಂದ. ಅದರಲ್ಲೂ ಕನ್ನಡ ಕಾವ್ಯ ಪ್ರಕಾರದ ಒಳಗೆ ಹಲವು ಬಗೆಯ ವಾಗ್ವಾದಗಳನ್ನು ಹುಟ್ಟು ಹಾಕಿದ್ದು ಇಂದಿಗೂ ಸಾಂಸ್ಕೃತಿಕ ಚರ್ಚೆಯ ಮಹತ್ವದ ಪರಿಕಲ್ಪನೆಗಳೇ ಆಗಿದೆ. ಒಂದೆಡೆ ರಾಜಕೀಯ ಪರಾಧೀನತೆಯ ವಿರುದ್ಧದ ಹೋರಾಟ, ಇನ್ನೊಂದೆಡೆ ಭಾಷಾ ಜಾಗೃತಿಯ ಹೋರಾಟ ನಡೆಯುತ್ತಿದ್ದರೂ ಇವೆರಡೂ ದೂರ ದೂರವಾಗಿ, ಭಿನ್ನ ಕೇಂದ್ರಗಳಲ್ಲಿ ನಡೆದ ಚಳವಳಿಗಳಾಗದೆ, ಸಮಾನಾಂತರದಲ್ಲಿ ಚಲಿಸುತ್ತಿತ್ತು. ಜನರು ಆತ್ಮ ವಿಸ್ಮೃತಿಯ ಕಾರಣದಿಂದ ಆಲಸಿಗರಾಗಿರುವ ಸಂದರ್ಭದಲ್ಲಿ ಅವರನ್ನು ಎಚ್ಚೆತ್ತು ಕೊಳ್ಳುವಂತೆ ಮಾಡುವಲ್ಲಿ ಸಾಹಿತ್ಯವೇ ಮಹತ್ವದ ಪಾತ್ರವನ್ನು ನಿರ್ವಹಿಸಿದ್ದು. ಭಾರತ ರಾಷ್ಟ್ರವನ್ನು ಮತ್ತು ಕನ್ನಡ ನಾಡನ್ನು ಮಾತೃ ಸ್ವರೂಪದಲ್ಲಿ ಕಲ್ಪಿಸಿಕೊಂಡು ವರ್ತಮಾನದ ಅನೈಕ್ಯತೆಯನ್ನು ಮೀರಿ ಒಂದಾಗುವ ಆಶಯವನ್ನು ಕವಿಗಳು, ತಮ್ಮ ಕವಿತೆಗಳಲ್ಲಿ ವ್ಯಕ್ತಪಡಿಸುತ್ತಿದ್ದರು.

ಮೇಲ್ನೋಟದಲ್ಲಿ ಇವೆರಡೂ ಪರಿಕಲ್ಪನೆಗಳ ಹಿಂದಿರುವ ಆಶಯ, ಸಾಧಿಸುವ ಗುರಿಗಳು ವಿಭಿನ್ನ ಆದರೂ ಕ್ರಮಿಸುವ ಮಾರ್ಗದಲ್ಲಿ ಸಂಘರ್ಷ ಇಲ್ಲ. ರಾಷ್ಟ್ರೀಯ ಸಂಗ್ರಾಮದ ಜೊತೆ ಕರ್ನಾಟಕ ಏಕೀಕರಣ ಚಳವಳಿಯು ತಾದಾತ್ಮ್ಯವನ್ನು ಹೊಂದಿ ಸಾಗುತ್ತಿತ್ತು. ಪ್ರಸ್ತುತ ಅಧ್ಯಯನದ ಈ ಅಧ್ಯಾಯದಲ್ಲಿ ರಾಷ್ಟ್ರ ಹಾಗೂ ನಾಡಿನ ನಡುವೆ ಯಾವ ರೀತಿಯ ಸಮನ್ವಯದ ಸಂಬಂಧ ಇತ್ತು ಎನ್ನುವುದನ್ನು ಅಧ್ಯಯನಕ್ಕೆ ಆಯ್ಕೆ ಮಾಡಿದ ಕವಿಗಳ ಕವಿತೆಗಳ ಆಧಾರದಲ್ಲಿ ನಿರೂಪಿಸಲಾಗುವುದು. ಸಮನ್ವಯ ಎನ್ನುವುದನ್ನು ಹಲವು ಬಗೆಯಿಂದ ನೋಡಬಹುದಾಗಿದೆ. ಅವುಗಳನ್ನು ಹೀಗೆ ಗುರುತಿಸಬಹುದು.

೧. ನಾಡಿನೊಳಗಿನ ವೈವಿಧ್ಯಮಯ ಸ್ವರೂಪದೊಂದಿಗೆ ಸಾಧಿಸಿದ ಸಮನ್ವಯ

೨. ನಾಡಿನ ಹೊರಗೆ ವಿವಿಧ ಭಾಷೆ, ಪ್ರಾಂತ್ಯಗಳ ಜೊತೆಗೆ ಸಾಧಿಸಿದ ಸಮನ್ವಯ

೩. ನಾಡು ಹಾಗೂ ರಾಷ್ಟ್ರದ ನಡುವಿನ ಸಮನ್ವಯ.

೪. ವರ್ತಮಾನದ ದುಃಸ್ಥಿತಿಯಿಂದ ಪಾರಾಗಲು, ಆತ್ಮವಿಸ್ಮೃತಿಯಿಂದ ಹೊರಬರಲು ಪೂರಕವಾಗುವಂತೆ ತನ್ನ ಗತದ ಪರಂಪರೆಯನ್ನು ವೈಭವೀಕರಿಸಿಕೊಂಡು ಅದು ಮಾನವ ಕುಲಕ್ಕೆ ಒಂದು ಶ್ರೇಷ್ಠ ಮಾದರಿ ಎಂಬಂತೆ ಚಿತ್ರಿಸಿಕೊಂಡು ತನ್ನ ಪರಂಪರೆಯ ಜೊತೆಗೆ ಸಾಧಿಸಿಕೊಂಡ ಸಮನ್ವಯದ ಮಾದರಿಯೊಂದಿದೆ.

೫. ವಸಾಹತುಶಾಹಿಯಿಂದ ರಾಷ್ಟ್ರದ ಬಿಡುಗಡೆ ಹಾಗೂ ಭಾಷಿಕ ಗುರುತಾದ ನಾಡನ್ನು ಕಟ್ಟುವುದಕ್ಕಾಗಿ ವ್ಯಕ್ತಿಗಳು ಸಮಷ್ಟಿಯ ಹಿತಕ್ಕಾಗಿ ದುಡಿಯಬೇಕಾಗಿದೆ. ಇದಕ್ಕಾಗಿ ವ್ಯಕ್ತಿಯು ಸಮಷ್ಟಿಯ ಜೊತೆ ಮಾಡಿಕೊಂಡ ಸಮನ್ವಯದ ಬಗೆ ಯಾವುದು ಎಂಬ ರೀತಿಯಲ್ಲಿ ಚರ್ಚೆಯನ್ನು ನಡೆಸಬಹುದಾಗಿದೆ.

ಈ ಅಧ್ಯಾಯದಲ್ಲಿ ಈ ಎಲ್ಲಾ ಬಗೆಯ ಸಮನ್ವಯದ ಸ್ವರೂಪವನ್ನು ಕವಿತೆಗಳ ಆಧಾರದಲ್ಲಿ ನಿರೂಪಿಸಲಾಗುತ್ತದೆ. ಸಮನ್ವಯವನ್ನು ಸಾಧಿಸುವಲ್ಲಿ ತಾಯಿ-ಮಗಳು ಎಂಬ ಸಂಬಂಧದ ನೆಲೆ ಬಹಳ ಮುಖ್ಯ ಪಾತ್ರವನ್ನು ನಿರ್ವಹಿಸಿದೆ. ಇಲ್ಲಿ ಭಾರತಮಾತೆಯನ್ನು ತಾಯಿಯಾಗಿಯು ಕನ್ನಡಮ್ಮನನ್ನು ಮಗಳಾಗಿಯೂ ಕಲ್ಪಿಸಿಕೊಂಡು ಹುಟ್ಟು ಹಾಕಿದ ಸಂಬಂಧದ ಬೇರುಗಳೇ ಮುಂದೆ ಈ ಎರಡು ಪರಿಕಲ್ಪನೆಗಳು ಸಂಘರ್ಷರಹಿತವಾಗಿ ಮುಂದುವರಿದು ಸಮನ್ವಯವನ್ನು ಸಾಧಿಸಲು ಸಹಾಯಕವಾಯಿತು. ಈ ಬಗೆಯ ಸಂಬಂಧ ಸೂಚಕಗಳು ಸ್ಪಷ್ಟವಾಗಿ ಹೇಳುತ್ತಿದ್ದುದು ಭಾರತದ ಒಳಿತಿನೊಂದಿಗೆ ಪ್ರಾದೇಶಿಕ ಒಳಿತಿದೆ, ಭಾರತದ ಸ್ವಾತಂತ್ರ್ಯದೊಂದಿಗೆ ಕನ್ನಡ ನಾಡಿನ ಒಗ್ಗೂಡುವಿಕೆ ಸಾಧ್ಯ ಎಂಬ ಇಂಗಿತವನ್ನು. "ನವೋದಯ ಲೇಖಕರ ಬರವಣಿಗೆಗಳಲ್ಲಿ ಎದ್ದು ಕಾಣುವ ಅಂಶವೆಂದರೆ ಪ್ರಾದೇಶಿಕತೆ. ಈ ಪ್ರಾದೇಶಿಕತೆಯು ಅವರಿಗೆ ರಾಷ್ಟ್ರೀಯತೆಯನ್ನು ಕಂಡುಕೊಳ್ಳುವ ಒಂದು ತುಣುಕಾಗಿತ್ತು. ಪ್ರಾದೇಶಿಕತೆಯ ಅನನ್ಯತೆಯನ್ನು ಎತ್ತಿ ಹಿಡಿಯುತ್ತಲೇ ಅದರ ಜೊತೆಗೆ ಆ ಲೇಖಕರು ಒಂದು ಭಾವನಾತ್ಮಕ ತನ್ಮಯತೆಯನ್ನು ಸಾಧಿಸಿಕೊಂಡಿದ್ದರು. ಪ್ರಾದೇಶಿಕತೆಯ ಮುಖಾಂತರ ರಾಷ್ಟ್ರೀಯತೆಗೆ, ರಾಷ್ಟ್ರೀಯತೆಯ ಮುಖಾಂತರ ಪ್ರಾದೇಶಿಕತೆಗೆ ಅನುಸಂಧಾನ ಮಾಡಲು ಅವರಿಗೆ ಸಾಧ್ಯವಾಯಿತು"[೧] ಎನ್ನುತ್ತಾರೆ ಡಾ. ಕೆ.ಕೇಶವ ಶರ್ಮ.

ಬಂಕಿಮಚಂದ್ರರ 'ವಂದೇ ಮಾತರಂ' ಗೀತೆ ಭಾರತಮಾತೆಯನ್ನು ತಾಯಿಯ ಸ್ವರೂಪದಲ್ಲಿ ಚಿತ್ರಿಸುತ್ತಲೇ ಆ ತಾಯಿಯನ್ನು ಕಾಳಿಯ ಉಗ್ರ ರೂಪದಲ್ಲಿ ತೋರಿಸಿತು. ಪರಕೀಯ ದಾಸ್ಯದಿಂದ ಬಿಡುಗಡೆ ಪಡೆಯಲು ಆಕೆಯನ್ನು ಶಕ್ತಿಯ, ಶೌರ್ಯದ ಪ್ರತೀಕವಾಗಿ ಚಿತ್ರಿಸಲಾಯಿತು. ಮುಂದೆ ಕುವೆಂಪು ಅವರ 'ಕ್ರಾಂತಿ ಕಾಳಿ' ಕವಿತೆಯು ಕೂಡ ಇದೇ ಸ್ವರೂಪದಲ್ಲಿ ತಾಯಿಯನ್ನು ಚಿತ್ರಿಸಿತು. ಬಿ.ಎಂ.ಶ್ರೀಯವರ 'ಕನ್ನಡ ತಾಯ ನೋಟ' ಕವಿತೆಯಲ್ಲಿ ಕನ್ನಡ ತಾಯಿ ಮುಪ್ಪು ಕಳೆದು ಎಳೆತನ ಪ್ರಾಪ್ತವಾಗುವ ಚಿತ್ರಣವನ್ನು ನೀಡುತ್ತಾರೆ.

ಸಮನ್ವಯತೆಯೇ ಭಾರತೀಯ ರಾಷ್ಟ್ರೀಯತೆ ಮತ್ತು ಏಕೀಕರಣದ ಪ್ರಮುಖ ಲಕ್ಷಣವೂ ಆಗಿದೆ. ಬಹುಭಾಷೆ, ಬಹುಜನ, ಬಹುಕುಲ, ಬಹುಧರ್ಮಗಳಿರುವ ಪ್ರದೇಶವಾದುದರಿಂದ ಇವುಗಳ ನಡುವೆ ನಿರಂತರ ಸಮನ್ವಯತೆಯನ್ನು ಸಾಧಿಸಲು ಕನ್ನಡದ ಚಿಂತಕರು ಪ್ರಯತ್ನಿಸಿದ್ದಾರೆ. ಹೀಗಾಗಿ ಇಲ್ಲಿನ ಪ್ರಾದೇಶಿಕ ಮೀಮಾಂಸೆಯು ರಾಷ್ಟ್ರೀಯ ಮೀಮಾಂಸೆಯಿಂದ ಬೇರ್ಪಡುವುದಿಲ್ಲ. ಈ ಕಾರಣದಿಂದ ಭಾರತದ ಒಳಗೆ ಕನ್ನಡತನ ಪ್ರತ್ಯೇಕಗೊಳ್ಳಬಹುದಾದ ಪರಿಕಲ್ಪನೆಯಲ್ಲ ಅಥವಾ ಅದೊಂದು ಪ್ರತ್ಯೇಕ ರಾಷ್ಟ್ರವಾದದ ಬೀಜವೂ ಅಲ್ಲ ಎನ್ನುವುದನ್ನು ಸಾಬಿತುಪಡಿಸಿದೆ. " ಭಾರತದಂಥ ದೊಡ್ಡ ದೇಶದಲ್ಲಿ ಹಲವು ಪ್ರಾಂತಗಳು ವಿಲೀನವಾಗಿರುತ್ತದೆ. ಪ್ರತಿಯೊಂದೂ ಒಂದೊಂದು ರಾಜ್ಯವಾಗಿ ಸ್ವಯಂಪೂರ್ಣ ಆಡಳಿತ ಘಟಕವಾಗಿರುತ್ತದೆ. ಆಯಾ ಪ್ರಾಂತಕ್ಕೂ, ರಾಜ್ಯಕ್ಕೂ ತನ್ನದೇ ಆದ ವಿಶಿಷ್ಟ ಪರಂಪರೆ, ಇತಿಹಾಸ, ಸಂಸ್ಕೃತಿ, ಭಾಷೆ ಇರುತ್ತದೆ. ಒಟ್ಟು ರಾಷ್ಟ್ರ ಅಥವಾ ದೇಶದ ಏಕತೆಗೆ ಅವಿರೋಧವಾದ ಪೂರಕ ನೆಲೆಯಲ್ಲಿ ಆಯಾ ಪ್ರಾಂತ್ಯ ಅಥವಾ ಪ್ರದೇಶದ ಹಿರಿಮೆಯನ್ನು ಮಾನ್ಯ ಮಾಡಲೇಬೇಕು. ರಾಷ್ಟ್ರದ ಸಂಸ್ಕೃತಿಯೊಳಗೆ ಅಂತರ್ಗತವಾದ ನಾನಾ ಉಪಸಂಸ್ಕೃತಿಗಳ ವೈವಿಧ್ಯ ಇರುವಂತೆಯೇ ರಾಷ್ಟ್ರ ಪ್ರೇಮಕ್ಕೆ ಸಮಾನಾಂತರವಾಗಿ ಕ್ರಿಯಾಶೀಲವಾದ ಪ್ರಾಮಾಣಿಕ ಪ್ರೀತಿಯೂ ಹೆಪ್ಪುಗಟ್ಟಿರುತ್ತದೆ" [೨] ಎನ್ನುತ್ತಾರೆ ಹಂಪ ನಾಗರಾಜಯ್ಯ. ಅಂದರೆ ಸಮನ್ವಯವನ್ನು ಸಾಧಿಸುವ ಸಂದರ್ಭದ ಸವಾಲುಗಳು ಎಷ್ಟು ಸಂಕೀರ್ಣ ಎನ್ನುವುದನ್ನು ನಾವು ಗಮನಿಸಬೇಕು. ಹಲವು ವೈವಿಧ್ಯಗಳು ಅಂತರ್ಗತವಾದ ಒಂದು ವ್ಯವಸ್ಥೆಯಿದು. ಹಾಗಾಗಿ ಅದರ ಸರಳ ಮೇಲ್ಮೈಯನ್ನು ನೋಡಿ ಅದರ ಸ್ವರೂಪ, ರಚನೆಯನ್ನು ವಿವೇಚಿಸಲಾಗದು.

## ೫.೨ ಕುವೆಂಪು ಕವಿತೆಗಳಲ್ಲಿ ಸಮನ್ವಯತೆಯ ಸ್ವರೂಪ:

ಒಂದೆಡೆ ಭಾರತೀಯತೆ ಇದೆ. ಇನ್ನೊಂದೆಡೆ ಕರ್ನಾಟಕ ಇದೆ. ಒಂದೆಡೆ ಭಾರತೀಯ ಇತರ ಭಾಷೆಗಳಿವೆ. ಇನ್ನೊಂದೆಡೆ ಕನ್ನಡ ಇದೆ. ಇವುಗಳು ಪರಸ್ಪರ ಸಂಘರ್ಷದ ಸಂಗತಿಗಳು ಆಗಬಹುದಾಗಿತ್ತು. ಆದರೆ ಇವುಗಳು ಸಂಘರ್ಷಕ್ಕೆ ಕಾರಣವಾಗದೆ ಇವುಗಳ ನಡುವೆಯೂ ಸಮನ್ವಯವನ್ನು ಸಾಧಿಸುವ ಪ್ರಯತ್ನ ನಡೆದಿದೆ. ಇದನ್ನು ಪರಸ್ಪರ ವಿರುದ್ಧ ಸಂಗತಿಗಳೆಂದು ಪರಿಭಾವಿಸಿ ನೋಡುವುದಕ್ಕೆ ಸಾಧ್ಯವಿಲ್ಲ. ಇವುಗಳು ಪರಸ್ಪರ ಜೊತೆಗೆ ಸಾಗುವಂತೆ ಮಾಡುವ ಪ್ರಕ್ರಿಯೆಯೊಂದು ಕನ್ನಡದಲ್ಲಿ ನಡೆದಿದೆ.

ಕುವೆಂಪು ಅವರ 'ಮೆಟ್ಟುವ ನೆಲ ಕರ್ನಾಟಕ' ಕವಿತೆ ಕವಿಯು ಹೊಂದಿರುವ ಸಮನ್ವಯದ ಧೋರಣೆಯ ಶ್ರೇಷ್ಠ ಕವಿತೆಗಳಲ್ಲೊಂದು. ಕನ್ನಡದ ಅಭಿಮಾನವನ್ನು ಹೇಳುತ್ತಾ, ಕನ್ನಡ ನಾಡಿನ ವಿಸ್ತಾರವನ್ನು ಭೌಗೋಳಿಕ ಗಡಿಗಳಿಗೆ ಸೀಮಿತಗೊಳಿಸದೆ ವಿಶ್ವ ವಿಸ್ತಾರದೊಂದಿಗೆ ಸೇರಿಸುತ್ತಾರೆ. "ಎಲ್ಲದರೂ ಇರು, ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು" "ನೀ ಮೆಟ್ಟುವ ನೆಲ ಅದೆ ಕರ್ನಾಟಕ, ನೀನೇರುವ ಮಲೆ ಸಹ್ಯಾದ್ರಿ" ಎನ್ನುವ ಸಾಲುಗಳು ನೀಡುವ ಅರ್ಥ ವಿಸ್ತಾರವನ್ನು ಗಮನಿಸಬೇಕು. ಕರ್ನಾಟಕದ ಬಗೆಗೆ, ಕನ್ನಡದ ಬಗೆಗೆ ಹೇಳುತ್ತಿರುವ ಪದ್ಯ ಕನ್ನಡಿಗನನ್ನು 'ಎಂದೆಂದಿಗೂ ನೀ ಕನ್ನಡವಾಗಿರು' ಎನ್ನುತ್ತಲೇ ಜಗದ್ವ್ಯಾಪಿ ಅನುಭವದ ಜೊತೆಗೆ ಸೇರಿಸುತ್ತದೆ. ಭೌಗೋಳಿಕ ಕರ್ನಾಟಕವನ್ನು ಭಾವವ್ಯಾಪ್ತಿಯ ಕರ್ನಾಟಕದ ಜೊತೆ ಸಮನ್ವಯಗೊಳಿಸುವ ಬಗೆ ಇಲ್ಲಿ ವಿಶಿಷ್ಟವಾಗಿದೆ. ಕುವೆಂಪು ಅವರು ಕನ್ನಡದ ಮೇಲೆ ತೋರುವ ಪ್ರೀತಿಗೆ ಜಗತ್ತು 'ಅನ್ಯ'ವಾಗುವುದಿಲ್ಲ. ಜಗತ್ತನ್ನು ಅನ್ಯವಾಗಿಸದೇ 'ಸ್ವ'ವನ್ನು, 'ಸ್ವ ವಿಶಿಷ್ಟತೆ'ಯನ್ನು ಕಾಣುವುದನ್ನು ಇಲ್ಲಿ ನೋಡಬಹುದಾಗಿದೆ. ಇಲ್ಲಿ ಕನ್ನಡ, ಕರ್ನಾಟಕ ಒಂದಲ್ಲ. ಏಕಕಾಲಕ್ಕೆ ಹಲವಾಗುತ್ತದೆ. 'ನೀ ಮೆಟ್ಟುವ ನೆಲ ಕರ್ನಾಟಕ' ಎನ್ನುವಾಗ ಕವಿ ಕರ್ನಾಟಕವನ್ನು ಖಡ್ಗದ ಮೂಲಕ ವಿಸ್ತರಿಸಲು ಬಯಸುತ್ತಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಹೀಗೆ ಹೇಳುವಾಗ ಈಗಾಗಲೇ ಖಡ್ಗದ ಮೂಲಕ ತಮ್ಮ ರಾಷ್ಟ್ರಗಳನ್ನು ವಿಸ್ತರಿಸಿದ ಆಕ್ರಮಣಕಾರಿ ಪರಂಪರೆ, ಅದರಲ್ಲೂ ಬ್ರಿಟಿಷ್ ವಸಾಹತುಶಾಹಿ ಪ್ರಭುತ್ವವನ್ನು ಕವಿತೆ ಮುಖಾಮುಖಿಯಾಗಿಸುತ್ತದೆ. ಇದು ಅಧಿಕಾರದ ವಿಸ್ತರಣೆಯಲ್ಲ. ಗುಲಾಮಗಿರಿಯ ವಿಸ್ತರಣೆಯೂ ಅಲ್ಲ. ಕನ್ನಡಿಗ ಕಾಲಿಟ್ಟಲ್ಲಿ ಸ್ಥಳೀಯ

ಸಂಸ್ಕೃತಿ, ಭಾಷೆಗೆ ಅಪಾಯವೂ ಇಲ್ಲ. ಆದರೆ ಕನ್ನಡಿಗ ಮಾತ್ರ ತಾನು ಕಾಲಿಟ್ಟ ನೆಲವನ್ನೇ ಕರ್ನಾಟಕ ಎಂದು ಭಾವಿಸಿಕೊಳ್ಳುತ್ತಾ, ಆ ಕರ್ನಾಟಕವನ್ನು ಕಟ್ಟುವುದಕ್ಕೆ, ಆ ಕರ್ನಾಟಕದಲ್ಲಿ ಬದುಕುವುದಕ್ಕೆ ಪೂರಕವಾಗಿರುವುದನ್ನು ಒತ್ತಾಯಿಸುತ್ತದೆ. ನಾಡಿನ ಸೀಮೆ, ರಾಷ್ಟ್ರದ ಸೀಮೆ, ಭಾಷೆಯ ಬೆಳವಣಿಗೆಗೆ, ಅದರ ವಿಸ್ತಾರಕ್ಕೆ ತೊಡಕಾಗಬೇಕಾಗಿಲ್ಲ ಎಂಬ ಸಮನ್ವಯ ದೃಷ್ಟಿ ಇಲ್ಲಿರುವುದನ್ನು ಗಮನಿಸಬಹುದು.

ಕುವೆಂಪು ಅವರ 'ಅಖಂಡ ಕರ್ನಾಟಕ' ಕವಿತೆ ರಾಜಕೀಯ ನಾಯಕರ ಹೊರತಾದ ಒಂದು ಸಾಂಸ್ಕೃತಿಕ ಸ್ವರೂಪದ ಅಂದರೆ ಜಿಜ್ಞಾಸೆಗೆ ಮುಕ್ತವಾದ, ವಾಗ್ವಾದಕ್ಕೆ ಅವಕಾಶವಿರುವ ಕರ್ನಾಟಕದ ಚಿತ್ರಣವನ್ನು ಕಟ್ಟಿಕೊಡುತ್ತಾರೆ. 'ಅಖಂಡ ಕರ್ನಾಟಕ; ಅಲ್ತೊ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ' ಎನ್ನುವಾಗ ರಾಜಕೀಯ ಕರ್ನಾಟಕದಿಂದ ಭಿನ್ನವಾದ ಒಂದು ಸಾಂಸ್ಕೃತಿಕ ಕರ್ನಾಟಕವನ್ನು ಮಂಡಿಸುತ್ತಾರೆ. ಈ ಸಾಂಸ್ಕೃತಿಕ ಕರ್ನಾಟಕಕ್ಕೆ ಕನ್ನಡದ ಸಾಂಸ್ಕೃತಿಕ ನಾಯಕರೇ ರಾಜ್ಯ ನಾಯಕರೂ ಆಗುತ್ತಾರೆ. 'ನೃಪತುಂಗ, ಪಂಪ, ರನ್ನ, ರಾಘವಾಂಕ, ಬಸವಾದಿಗಳು ಇಲ್ಲಿನ ಸಚಿವ ಮಂಡಲವಾಗುತ್ತಾರೆ. ಇದು ಸರಸ್ವತಿಯೇ ರಚಿಸಿದ ನಿತ್ಯ ಸಚಿವ ಮಂಡಲವೂ ಹೌದು. ಈ ಕವಿತೆಯು ವರ್ತಮಾನದ ರಾಜಕೀಯ ನಾಯಕತ್ವದ ಗೊಂದಲಕ್ಕೆ ತನ್ನ ಪರಂಪರೆಯಲ್ಲಿ ಪರಿಹಾರವನ್ನು ಹುಡುಕುತ್ತದೆ. ಕನ್ನಡನಾಡನ್ನು ಕಟ್ಟುವ, ಮರುಸಂಘಟಿಸುವ ಉತ್ಸಾಹದಲ್ಲಿರುವ ಕವಿಗೆ ವರ್ತಮಾನದ ರಾಜಕೀಯ ನಾಯಕತ್ವವೇ ಸಮಸ್ಯೆಯಾಗಿ, ಸವಾಲಾಗಿ ಕಾಣುತ್ತದೆ. ಹೀಗಾಗಿ ಕವಿ ಅದನ್ನು ಮೀರುವುದಕ್ಕಾಗಿ ಪರಂಪರೆಯ ಜೊತೆ ಮುಖಾಮುಖಿಯಾಗುತ್ತಾ ಸಮನ್ವಯದ ದಾರಿಯನ್ನು ಹುಡುಕುತ್ತಾರೆ. ಇಲ್ಲಿ ಕವಿತೆ ಹೊಂದುವ ಆಶಯ ಕನ್ನಡ ನಾಡನ್ನು ಮುನ್ನಡೆಸಬೇಕಾದ ವರ್ತಮಾನದ ನಾಯಕರೂ ಕೂಡ ನೃಪತುಂಗ, ಪಂಪ, ರನ್ನರಂತೆ ಆಗಬೇಕು. ಹೊರತು ರಾಜಕೀಯ ನಾಟಕಕಾರರು ಅಲ್ಲ ಎನ್ನುತ್ತಿದೆ. ತಾಯಿ, ದೇವಿ, ಬೆಂಕಿ, ಸಿಡಿಲು, ಶಕ್ತಿ, ಮಂತ್ರವಾದ ಕರ್ನಾಟಕವನ್ನು ಇಂತಹ ಸಾಂಸ್ಕೃತಿಕ ನಾಯಕತ್ವ ಮಾತ್ರ ಮುನ್ನಡೆಸಬಲ್ಲುದು. ಕವಿಯು ಪರಂಪರೆಯೊಂದಿಗೆ ಮಾಡಿಕೊಳ್ಳುವ ಈ ಸಮನ್ವಯದ ಮಾರ್ಗ ಸಮೃದ್ಧ ಕರ್ನಾಟಕವನ್ನು ಕಟ್ಟುವುದಕ್ಕೆ ಪೂರಕವಾಗಿದೆ.

ಕುವೆಂಪು ಅವರ 'ಜಯ ಹೇ ಕರ್ನಾಟಕ ಮಾತೆ' ಕರ್ನಾಟಕದ ನಾಡಗೀತೆಯಾಗಿ ಮಾನ್ಯತೆ ಪಡೆದ ಕವನ. ಇದು ಕರ್ನಾಟಕದ ಸ್ತುತಿ ಗೀತೆ. ಕನ್ನಡದ

ಪರಂಪರೆಯನ್ನು ಒಂದು ಕ್ರಮದೊಳಗೆ ಕಟ್ಟಿಕೊಡುವ ಪ್ರಯತ್ನವನ್ನು ಈ ಕವಿತೆ ಮಾಡುತ್ತಿದೆ. ಕನ್ನಡದ ಪ್ರಕೃತಿ, ಕನ್ನಡದ ರಾಜಪರಂಪರೆ, ಕನ್ನಡದ ಕವಿ ಪರಂಪರೆಯನ್ನು ಒಂದು ಚೌಕಟ್ಟಿನೊಳಗೆ ವಿವರಿಸುವ ಕೆಲಸವನ್ನು ಈ ಕವಿತೆ ಮಾಡುತ್ತದೆ. ಈ ನಾಡಗೀತೆ ಕಟ್ಟುವ ಕರ್ನಾಟಕದ ಚಿತ್ರಣಕ್ಕೆ ವಿಶೇಷವಾದ ಮಹತ್ವವೂ ಇದೆ. ಆರಂಭದಲ್ಲೇ, ಈ ಕವಿತೆ ಕರ್ನಾಟಕವನ್ನು ಒಂದು ವಿಶಾಲ ತಾತ್ವಿಕ ಭಿತ್ತಿಯೊಳಗೆ ತಂದು ನಿಲ್ಲಿಸುತ್ತದೆ.

'ಜಯ್ ಭಾರತ ಜನನಿಯ ತನುಜಾತೆ,

ಜಯ್ ಹೇ ಕರ್ನಾಟಕ ಮಾತೆ' ಎಂಬ ಸಾಲನ್ನು ಗಮನಿಸಿದರೆ, ಕುವೆಂಪು ಕಲ್ಪಿಸುವ, ಕಟ್ಟುವ ಕರ್ನಾಟಕದ ಚಿತ್ರಣದ ದರ್ಶನವಾಗುತ್ತದೆ. ಕವಿ ಕರ್ನಾಟಕವನ್ನು 'ಭಾರತ ಜನನಿಯ ತನುಜಾತೆ' ಎನ್ನುವಾಗಲೇ ಕವಿಯ ಮುಂದಿರುವ ಧೋರಣೆ ಸ್ಪಷ್ಟವಾಗಿರುವುದನ್ನು ನೋಡಬಹುದು. ಕರ್ನಾಟಕಕ್ಕೆ ಸಿಗುವ ಅಸ್ತಿತ್ವ, ಆತ್ಮಗೌರವ ಎಲ್ಲದಕ್ಕೂ ಭಾರತ ಎಂಬ ಒಂದು ದೊಡ್ಡ ಭಿತ್ತಿ ಕಾರಣ ಎನ್ನುವಂತಿದೆ. ಇಲ್ಲಿ ಭಾರತ ಜನನಿಯಾಗುತ್ತಾಳೆ. ಕನ್ನಡ ಮಾತೆ ಮಗಳಾಗುತ್ತಾಳೆ. ಈ ತಾಯಿ–ಮಗಳು ಎನ್ನುವ ಸಂಬಂಧವೇ ಸಮನ್ವಯದ ಮಾರ್ಗವೂ ಹೌದು. "ಕುವೆಂಪುರವರು ತಮ್ಮ 'ಕರ್ನಾಟಕ ರಾಷ್ಟ್ರಗೀತೆ'ಯಲ್ಲಿ ಭಾರತ ಮತ್ತು ಕರ್ನಾಟಕದ ಸಂಬಂಧವನ್ನು ತಾಯಿ–ಮಗಳ ಸಂಬಂಧದಲ್ಲಿ ರೂಪಿಸಿದ್ದಾರೆ. ಈ ರೀತಿಯಾಗಿ ಕಳ್ಳು– ಬಳ್ಳಿಯ ಸಂಬಂಧದಲ್ಲಿ ಕರ್ನಾಟಕ ಮತ್ತು ಭಾರತವೆಂಬ ಎರಡು ಕಲ್ಪಿತ ಸಮುದಾಯಗಳನ್ನು ನಿರ್ವಹಿಸಿದ್ದು ಅವೆರಡರ ನಡುವೆ ಇದ್ದ ಟೆನ್ಷನ್‌ಗಳಲ್ಲಿ ಅನೇಕವನ್ನು ಕಡಿಮೆ ಮಾಡುತ್ತದೆ" [೩] ಎನ್ನುತ್ತಾರೆ ತಾರಕೇಶ್ವರ ವಿ.ಬಿ. ಅವರು. ತಾಯಿ– ಮಗಳಾಗಿ ಕಲ್ಪಿಸಿಕೊಂಡದ್ದು ಕರ್ನಾಟಕ ಭಾರತಕ್ಕೆ ಅಥವಾ ಭಾರತ–ಕರ್ನಾಟಕಕ್ಕೆ ಯಾವುದೊ ರೀತಿಯಲ್ಲಿ ಆತಂಕಕ್ಕೆ ಕಾರಣವಾಗಬಹುದಾದ ಸಾಧ್ಯತೆಯನ್ನು ಇಲ್ಲವಾಗಿಸಲು ಎನ್ನುವುದನ್ನು ಪೂರ್ಣವಾಗಿ ಒಪ್ಪಿಕೊಳ್ಳಲಾಗದು. ಆದರೆ ಈ ಕಲ್ಪನೆ ಭಾರತ ಮತ್ತು ಕರ್ನಾಟಕದ ನಡುವಿನ ಸಂಬಂಧವನ್ನು ಹೆಚ್ಚು ಸೌಹಾರ್ದಗೊಳಿಸಿತು. ಕುವೆಂಪು ಅವರೇ ಹೇಳಿಕೊಳ್ಳುವಂತೆ "ನನ್ನ ಕರ್ನಾಟಕತ್ವ ಭಾರತೀಯತ್ವಕ್ಕೆ ಎಂದಿಗೂ ಎದುರು ನಿಲ್ಲುವುದಿಲ್ಲ, ಕರ್ನಾಟಕತ್ವ ಭಾರತೀಯತ್ವಕ್ಕೆ ಎಂದೆಂದಿಗೂ ಅವಿರೋಧಿಯಾಗಿ ಸೇವೆ ಸಲ್ಲಿಸುವುದರಿಂದಲೇ ತನ್ನ ಅಸ್ತಿತ್ವವನ್ನು ರಕ್ಷಿಸಿಕೊಳ್ಳುತ್ತದೆ. ಭಾರತಿ ತಾಯಿ–ಕರ್ನಾಟಕ

ಮಗಳು ಭಾರತಕ್ಕೆ ಧಕ್ಕೆ ಒದಗಿದರೆ ಕರ್ನಾಟಕ ಉಳಿಯುವುದಿಲ್ಲ;ಮಗಳು ಕರ್ನಾಟಕಕ್ಕೆ ಕೇಡಾದರೆ ತಾಯಿ ಭಾರತಮಾತೆ ಸಹಿಸುವುದಿಲ್ಲ. ಪರಸ್ಪರ ಕ್ಷೇಮ ರಕ್ಷಣೆಯಿಂದಲೆ ಸರ್ವರ ಕ್ಷೇಮವೂ ರಕ್ಷಿತವಾಗುತ್ತದೆ." [೬]. ಕವಿಯ ಈ ಸಮನ್ವಯವಾದಿ ಪ್ರಜ್ಞೆ ಕವಿತೆಗಳಲ್ಲಿ ಹೇಗೆ ಕೆಲಸ ಮಾಡಿದೆ ಎನ್ನುವುದನ್ನು ಈ ಮಾತಿನ ಹಿನ್ನೆಲೆಯಿಂದ ಅರ್ಥಮಾಡಿಕೊಳ್ಳಬಹುದಾಗಿದೆ. "ಬೇಂದ್ರೆಯವರು 'ಕನ್ನಡ ಕಂದವ್ವನ ಲಾಲಿ' ಯನ್ನು ಬರೆದಾಗ ಕನ್ನಡ ಕಂದವ್ವವಾಗುತ್ತಾಳೆ. ಅವಳನ್ನು ತೊಟ್ಟಿಲಿನಲ್ಲಿಟ್ಟು ತೂಗುವಂಥ ತಾಯಿ ಭಾರತಿಯಾಗುತ್ತಾಳೆ. ಓರ್ವ ತಾಯಿಯು ತನ್ನ ಕೂಸಿರುವ ತೊಟ್ಟಿಲವ ಕೈಯಿಂದ ತೂಗುತಿಹಳೋ, ಪೂರ್ವ ಪಶ್ಚಿಮ ಘಟ್ಟಗದಲ್ಲಿ ಪಟ್ಟಿರುವಂಥ ನಾಡನ್ನೆ ತೂಗುತಿಹಳೋ ಎನ್ನುವ ಮಾತು ಬಳಸುತ್ತಾರೆ. ಅಥವಾ ಪುಟ್ಟಪ್ಪನವರು ' ಜಯ್ ಭಾರತ ಜನನಿಯ ತನುಜಾತೆ ಜಯಹೇ, ಕರ್ನಾಟಕ ಮಾತೆ' ಎಂದಾಗ ಆ ಪದ್ಯದ ಅರ್ಧಭಾಗ ಭಾರತ ಜನನಿಯ ವರ್ಣನೆಯಾಗಿದೆ. ಆ ಪದ್ಯವನ್ನು ಎಚ್ಚರಿಕೆಯಿಂದ ಗಮನಿಸಿದರೆ, ' ಭಾರತ ಜನನಿ ಎಂದು ಹೇಳುವ ಮಾತು ಬರುತ್ತದಲ್ಲ ಅದಕ್ಕಿಂತ ಹಿಂದಿನ ಮೂರ್‍ನಾಲ್ಕು ಸಾಲುಗಳು ಭಾರತದ ವರ್ಣನೆಯಾಗಿದ್ದರೆ ಆಮೇಲೆ ಕರ್ನಾಟಕದ ಪ್ರಸ್ತಾವನೆ ಬರುತ್ತದೆ. ಏಕಕಾಲದಲ್ಲಿ ಆ ಪದ್ಯ ಭಾರತದ ವರ್ಣನೆ ಮತ್ತು ಕರ್ನಾಟಕದ ವರ್ಣನೆ ಮತ್ತು ಭಾರತ ಹಾಗೂ ಕರ್ನಾಟಕದ ನಡುವೆ ಇರಬಹುದಾದಂಥ ಸಂಬಂಧವನ್ನು ಒತ್ತಿ ಹೇಳುತ್ತದೆ. ಎಲ್ಲಿಯೂ ಇದು ಪರಸ್ಪರ ವಿರುದ್ಧವಾದ ಪರಸ್ಪರ ಸಂಘರ್ಷಕ ಸಾಧ್ಯತೆಗಳನ್ನು ಒಳಗೊಂಡಿರತಕ್ಕಂಥ ಸಂಸ್ಕೃತಿಯನ್ನು ಹೊಂದಿರುವುದಿಲ್ಲ' [೭] ಎಂದು ಡಾ.ಎಚ್.ಎಸ್ ರಾಘವೇಂದ್ರ ರಾವ್ ಹೇಳಿದ್ದು ಸಮ್ಮತವಾಗಿಯೇ ಇದೆ. ಜೈ ಭಾರತ ಜನನಿಯ ತನುಜಾತೆ ಎನ್ನುವಲ್ಲಿ ಭಾರತದ ಸಂಸ್ಕೃತಿ ಪರಂಪರೆಯ ಮೌಲ್ಯಗಳನ್ನು, ಗುರುತುಗಳನ್ನು ಪ್ರಸ್ತಾಪಿಸುತ್ತಾ, ಕರ್ನಾಟಕ – ಭಾರತವನ್ನು ಒಂದಾಗಿಸುತ್ತರೆ. ಕವಿ ಈ ಕವಿತೆಯಲ್ಲಿ ಬಳಸಿ ಕೊಳ್ಳುವ ವಸ್ತು ಸಾಮಾಗ್ರಿಗಳನ್ನು ನೋಡಿದರೆ ಅದರೊಳಗೆ ಒಂದು ಹಿರಿದಾದ ಆಶಯವಿದೆ ಎನ್ನುವ ಸತ್ಯ ಅರಿವಾಗುತ್ತದೆ. 'ನಾಡಗೀತೆ' ನಿಜವಾದ ಅರ್ಥದಲ್ಲಿ ನಾಡಿನ ಗೀತೆಯಾಗುವುದು ಅದು ನಾಡನ್ನು ಸಮಗ್ರವಾಗಿ ಒಳಗೊಳ್ಳುವ ಮೂಲಕ. ನಾಡಿನ ಬಹುಮುಖಿತ್ವವನ್ನು ತನ್ನೊಳಗೆ ಸೇರಿಸಿಕೊಳ್ಳುವ ಮೂಲಕ. ಈ ಕವಿತೆಯಲ್ಲಿ ಬಳಸಲಾದ ವಿವಿಧ ಪರಂಪರೆ ಮತ್ತು ಅದರ ಪ್ರತಿನಿಧಿತ್ವ ಛಿದ್ರಗೊಂಡ ಕಾಲದ ನಾಡನ್ನು ಸಮೀಪಕ್ಕೆ ತರುವಷ್ಟೇ ಮುಖ್ಯವಾಗಿ ಮತ್ತೆ ಸದಾ ಒಂದಾಗಿಯೇ

ಇರಬೇಕಾದಷ್ಟು ಆಪ್ತವಾದ ಭಾವನೆಯನ್ನು ಉಂಟು ಮಾಡಬೇಕಾಗಿದೆ ಎಂಬ ಅರಿವಿನಿಂದ ಹುಟ್ಟಿದ್ದು. ಆ ಮೂಲಕ ನಾಡಗೀತೆ ಕವಿತೆ ಒಂದು ಅಖಿಲ ಭಾರತ ಪರಂಪರೆಯನ್ನು ಕ್ರಮವತ್ತಾಗಿ ಸಂಯೋಜಿಸಿಕೊಂಡು ತಾನೇ ಒಂದು ಪರಂಪರೆಯೇ, ಮಾದರಿಯೇ ಆಗುವ ಹಾದಿಯನ್ನು ಸೃಷ್ಟಿಸಿಕೊಂಡಿತು. ಕುವೆಂಪು ಅವರ ರಾಷ್ಟ್ರೀಯತೆಗೆ ಒಂದು ಬಗೆಯ ದಾರ್ಶನಿಕ ಸ್ವರೂಪವಿತ್ತು. ಭೂಮಿಯ ವಿಸ್ತಾರವನ್ನು ಗಡಿಯನ್ನು ನಿರ್ದಿಷ್ಟವಾಗಿ ಇರುವಂತೆ ಅವರು ಬಯಸಲಿಲ್ಲ. ನಾಡು ಕೂಡ ಗಡಿಯನ್ನು ಮೀರಿದ ಕಲ್ಪನೆಯೇ ಆಗಿತ್ತು. ಅವರು ಬಹುತ್ವದ ಕಲ್ಪನೆಯನ್ನು ಒಪ್ಪಿಕೊಂಡೆ ಕರ್ನಾಟಕದ ಹಾಗೂ ಭಾರತದ ಕಲ್ಪನೆಯನ್ನು ಮುಂದಿಡುತ್ತಾರೆ. ಸೃಷ್ಟಿಯ ವ್ಯೂಹದಲ್ಲಿರುವ ಕೀಟಗಳಿಂದ ತೊಡಗಿ ಸಕಲ ಜೀವ ಸಮೂಹದ ಹಿತವನ್ನು ಕಾಣುವ ರಾಷ್ಟ್ರ ಪರಿಕಲ್ಪನೆ ಅವರದ್ದು. ಭಾಷೆಯ ಅಭಿಮಾನ, ಪ್ರಾಂತದ ಅಭಿಮಾನಗಳು ದ್ವೇಷಕ್ಕೊ, ಅಸಹನೆಗೊ ಅವಕಾಶ ನೀಡದೆ ಅಂತಿಮವಾಗಿ ಅವೆಲ್ಲವೂ ಭಾರತಾಭಿಮಾನದ ಆಶ್ರಯದಲ್ಲಿ ಸಂಕುಚಿತತೆಗಳನ್ನು ಮೀರಿ ಎಲ್ಲದರ ಏಳ್ಗೆಯನ್ನು ಬಯಸುವಂತಹದು.

ವ್ಯಕ್ತಿ ತನ್ನ ಬದುಕಿನ ಹಿತವನ್ನು ಬಯಸುವುದು ಸಹಜ ಸಾಮಾನ್ಯ ಸಂಗತಿ. ಆದರೆ ಒಬ್ಬ ವ್ಯಕ್ತಿ ಸಮಾಜದ ಇತರ ವ್ಯಕ್ತಿಗಳ, ಸಮುದಾಯದ ಹಿತವನ್ನು ಬಯಸುವ ಮತ್ತು ಹಾಗೆ ಉಳಿದವರ ಹಿತದಲ್ಲೇ ತನ್ನ ಹಿತವನ್ನು ಕಾಣುವುದು ವಿಶೇಷ ಸಂಗತಿ. ರಾಷ್ಟ್ರವಾಗಲಿ, ನಾಡಾಗಲಿ ಅದಕ್ಕೆ ಒಂದು ನಿರ್ದಿಷ್ಟ ಮೂರ್ತರೂಪ ಎನ್ನುವುದು ಇಲ್ಲ. ಒಂದು ಪ್ರದೇಶದ ಅಥವಾ ಒಂದು ಸಮಾನ ಸಂಸ್ಕೃತಿಯ, ಒಂದು ಭಾಷೆಯ ಜನ ಸಮುದಾಯಗಳೇ ತಮ್ಮದು ಒಂದು ಸಮೂಹ ಎಂದು ಭಾವಿಸಿಕೊಂಡು ಆ ಇಡೀ ಸಮೂಹದ ಹಿತವನ್ನು ಬಯಸುವಂತವರಾಗುತ್ತಾರೆ. ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮ ಹಾಗೂ ಕರ್ನಾಟಕ ಏಕೀಕರಣ ಚಳವಳಿಯ ಸಂದರ್ಭದಲ್ಲಿ ವ್ಯಕ್ತಿ ರಾಷ್ಟ್ರಕ್ಕಾಗಿ ಅಥವಾ ನಾಡಿಗಾಗಿ ಬದುಕುವುದನ್ನು, ಕೆಲವೊಮ್ಮೆ ಬಲಿದಾನ ಮಾಡುವುದನ್ನೂ ಕೂಡ ಒಂದು ಶ್ರೇಷ್ಠ ಮೌಲ್ಯವಾಗಿ ಪ್ರತಿಪಾದಿಸಲಾಗುತ್ತಿತ್ತು. ಕುವೆಂಪು ಅವರ 'ಪಾಂಚಜನ್ಯ' ಕವಿತೆಯಲ್ಲಿನ

" ಭರತ ಖಂಡದ ಹಿತವೆ
ನನ್ನ ಹಿತ ಎಂದು
ಭರತ ಮಾತೆಯ ಮತವೇ
ನನ್ನ ಮತ ಎಂದು
ಭಾರತಾಂಬೆಯ ಸುತರೆ
ಸೋದರರು ಎಂದು
ಭಾರತಾಂಬೆಯ ಮುಕ್ತಿ
ಮುಕ್ತಿ ನನಗೆಂದು"[೬] (ಪಾಂಚಜನ್ಯ)

ಎನ್ನುವ ಸಾಲುಗಳು ವ್ಯಕ್ತಿಯು ಸಮಷ್ಟಿಯ ಹಿತವನ್ನು ಬಯಸುತ್ತಾ ಭಾರತದ ಹಿತದಲ್ಲಿ ತನ್ನ ಹಿತವನ್ನು ಭಾರತದ ಮುಕ್ತಿಯಲ್ಲಿ ತನ್ನ ಮುಕ್ತಿಯನ್ನು ಕಾಣುವ ಚಿತ್ರಣವಿದೆ. ಈ ಕವಿತೆ ಮುಂದುವರಿದು 'ನುಗ್ಗು ಮರಣಕೆ ವೀರ ಸಗ್ಗದಾ ನೆಲೆಗೆ' ಎನ್ನುತ್ತದೆ. ಅವರ 'ರಕ್ತತರ್ಪಣ' ಕವಿತೆಯಲ್ಲಿ ಇನ್ನೂ ಮುಂದುವರಿದು ವ್ಯಕ್ತಿ–ಸಮಷ್ಟಿಯ ಸಮನ್ವಯದ ಬಯಕೆ ಕಾಣುತ್ತದೆ. 'ಇಂದು ಭಾರತಿ ಹಡೆದಳಲ್ತು ನಿಮ್ಮನು ಸುಖಕೆ ಪಶುಗಳೈ ನೀವೆಲ್ಲರಮೃತ ಮುಖಕೆ' ಎನ್ನುತ್ತದೆ ಈ ಕವಿತೆ. ಬಲಿದಾನವನ್ನು ಮೌಲ್ಯವಾಗಿ ಬಿಂಬಿಸಿ, ದೇಶದ ಸಂಕಟದ ಕಾಲದಲ್ಲಿನ ವ್ಯಕ್ತಿಗಳ ಬದುಕಿನ ಉದ್ದೇಶ ಕೇವಲ ಸ್ವಂತ ಬದುಕಿನ ಸುಖವಲ್ಲ. ಬದುಕು ಸಮಷ್ಟಿಯ ಹಿತಕ್ಕಾಗಬೇಕು. ಇಲ್ಲವಾದರೆ ಅಂತಹ ಬದುಕು ಪಶುತನವಾಗುತ್ತವೆ ಎನ್ನುತ್ತದೆ ಈ ಸಾಲುಗಳು. ಕವಿ ರಾಷ್ಟ್ರವನ್ನು ಕಟ್ಟುವ ಆಶಯವನ್ನು ಈಡೇರಿಸುವುದಕ್ಕಾಗಿ ರಾಷ್ಟ್ರದ ಬದುಕಿನೊಂದಿಗೆ ಅಂದರೆ ಸಮಷ್ಟಿಯ ಜೊತೆಗೆ ಯಾವ ರೀತಿ ವ್ಯಕ್ತಿ ಬದುಕನ್ನೂ ಸೇರಿಸಬಹುದು ಎಂಬುದರ ಚಿಂತನೆ ಈ ಕವಿತೆಯ ಸಾಲುಗಳಲ್ಲಿದೆ. ಬಿಡುಗಡೆಯ ಹೋರಾಟದ ಕಾಲದ ಹಿನ್ನೆಲೆಯಿಂದ ನೋಡಿದರೆ ಕವಿ ಪ್ರಜ್ಞೆ ಯಾವ ಎತ್ತರದಲ್ಲಿ ನಿಂತು ಇಂತಹದೊಂದು ಸೂಕ್ಷ್ಮ ಸಂಗತಿಯನ್ನು ವಿವೇಚನೆ ಮಾಡುತ್ತದೆ ಎನ್ನುವುದು ಅರಿವಿಗೆ ಬರುತ್ತದೆ.

ಕುವೆಂಪು ಅವರದ್ದು ಒಂದು ರೀತಿಯ ದಾರ್ಶನಿಕವಾದ ವೈಚಾರಿಕ ಪ್ರಜ್ಞೆ . ಎಲ್ಲಾ ಬಗೆಯ ದಾಸ್ಯಗಳನ್ನು ವಿರೋಧಿಸಿದವರು. ಭಾರತೀಯ ವೈದಿಕ ಸಂಪ್ರದಾಯದ ಬಗೆಗೂ, ಪಶ್ಚಿಮದ ಆಧುನಿಕತೆಯ ಬಗೆಗೂ ವಿಮರ್ಶಾತ್ಮಕ ಎಚ್ಚರವನ್ನು ಹೊಂದಿದ್ದವರು. ಪರಂಪರೆ ಮತ್ತು ಆಧುನಿಕತೆಯೊಂದಿಗೆ ಸಮನ್ವಯವನ್ನು ಸಾಧಿಸಿಕೊಂಡಿದ್ದ ಕವಿ. ಹಳೆಕಾಲದಿಂದ ಕಳಚಿಕೊಂಡು ಹೊಸ ಕಾಲಕ್ಕೆ ಪ್ರವೇಶಿಸುವ, ಆ ಮೂಲಕ ಹೊಸ ದೃಷ್ಟಿಯನ್ನು ಪಡೆಯುವ ಹಂಬಲ ಹೊಂದಿದ್ದವರು. ಮೌಢ್ಯಕ್ಕೆ ಕಾರಣವಾಗಿದ್ದ, ಆ ಮೂಲಕ ಶೋಷಣೆಗೂ ಕಾರಣವಾಗಿದ್ದ ಹಳೆ ಮತವನ್ನು

ವಿಜ್ಞಾನದ ಪರೀಕ್ಷೆಗೆ ಒಳಪಡಿಸುತ್ತಿದ್ದವರು. ಅವರ 'ತರುಣರಿರ ಎದ್ದೇಳಿ!' ಕವಿತೆ ಈ ಬಗೆಯ ಸಮನ್ವಯ ಮಾರ್ಗವನ್ನು ತೋರಿಸುತ್ತದೆ.

"ಬೀಸುತಿದೆ ಪಶ್ಚಿಮದ ರಸಪೂರ್ಣ ಹೊಸಗಾಳಿ
ಭಾರತದ ಬಣಗು ಬಾಳ್ಮರವನಲುಗಾಡಿ;
ಉದುರುತಿವೆ ಮುದಿಕಡ್ಡಿ ತರಗು ಹಣ್ಣೆಲೆಗಳೆಲ್ಲ
ನಲಿಯುತಿವೆ ನಳ ನಳಿಸಿ ಹೊಸಚಿಗುರು ಮೂಡಿ
ತರುಣರಿರ, ಎದ್ದೇಳಿ! ಎಚ್ಚರಗೊಳ್ಳಿ! ನೋಡಿ!
ಹಳೆ ಮತದ ಕೊಳೆಯೆಲ್ಲ ಹೊಸಮತಿಯ ಹೊಳೆಯಲ್ಲಿ
ಕೊಚ್ಚಿಹೋಗಲಿ; ಬರಲಿ ವಿಜ್ಞಾನ ಬುದ್ಧಿ
ವೇದ ಪ್ರಮಾಣತೆಯ ಮರುಮರೀಚಿಕೆಯಲ್ಲಿ
ನೀರರಸಿ ಕೆಡದಿರಲಿ ಸ್ವಾತಂತ್ರ್ಯ ಸಿದ್ಧಿ
ತರುಣರಿರ ಎದ್ದೇಳಿ! ಎಚ್ಚರಗೊಳ್ಳಿ ! ಬಾಳಿ! "

(ತರುಣರಿರ ಎದ್ದೇಳಿ)[೭]

ಎಂಬ ಸಾಲುಗಳನ್ನು ನೋಡಿದರೆ ಕುವೆಂಪು ಅವರ ಒಲವನ್ನು ಗುರುತಿಸಬಹುದು. ತರುಣರು ಎದ್ದೇಳಬೇಕು. ಎಚ್ಚರಗೊಳ್ಳಬೇಕು. ಕುವೆಂಪು ಅವರು ಇಂಗ್ಲಿಷರ ಆಳ್ವಿಕೆಯನ್ನು ತೀವ್ರವಾಗಿ ವಿರೋಧಿಸಿದವರು. ಅದರೆ ಇಂಗ್ಲಿಷ್ ಭಾಷೆಯ ಬಗೆಗೆ ಅವರಿಗೆ ಗೌರವದ ಭಾವವೇ ಇತ್ತು. ವಸಾಹತುಶಾಹಿಯ ಪ್ರವೇಶದೊಂದಿಗೆ ಪಶ್ಚಿಮದಿಂದ ಬೀಸಿದ್ದು ಹೊಸಗಾಳಿಯೇ. ಅದು ರಸಪೂರ್ಣವೂ ಹೌದು. ಇದರ ಪರಿಣಾಮವಾಗಿ ಭಾರತೀಯರಲ್ಲಿದ್ದ ಅರ್ಥರಹಿತ, ಕಾಲಬಾಹಿರವಾಗಿದ್ದ ನಂಬಿಕೆ, ಆಚರಣೆಗಳು ಈ ಹೊಸ ಗಾಳಿಗೆ ಉದುರಿ ಹೋಗುತ್ತಿದೆ. ಜೀವಂತಿಕೆಯನ್ನು ಕಳೆದುಕೊಂಡಿದ್ದ ಹಣ್ಣೆಲೆಗಳು ಉದುರಿ ಆ ಭಾಗದಲ್ಲಿ ಹೊಸತನದ ಸಂಕೇತವಾದ ಹೊಸಚಿಗುರು ಮೂಡುತ್ತಿದೆ ಎಂಬ ಕಲ್ಪನೆಯನ್ನು ಕವಿ ವ್ಯಕ್ತಪಡಿಸುತ್ತಾರೆ. ಹಳೆಯ ಮತದಲ್ಲಿರುವ ಕೊಳೆಗಳು, ವಿಜ್ಞಾನ ಪ್ರೇರಿತ ಆಧುನಿಕತೆಯಿಂದ ಹುಟ್ಟಿದ ಹೊಸ ಬುದ್ಧಿಯಿಂದ ಕೊಚ್ಚಿ ಹೋಗಬೇಕು. ಮತ್ತೆ ವೇದ ಪ್ರಮಾಣತೆಯಲ್ಲಿ ಜೀವಂತಿಕೆಯನ್ನು ಅರಸುವುದರಲ್ಲಿ ಅರ್ಥವಿಲ್ಲ. ಹೊಸಕಾಲದಲ್ಲಿ ಸ್ವಾತಂತ್ರ್ಯದ ಸಿದ್ಧಿಯಾಗಬೇಕಾಗಿದೆ ಎನ್ನುತ್ತಾರೆ. ಈ ಹೊಸ ಸಂದೇಶವನ್ನು ಎಲ್ಲ ದಿಕ್ಕುಗಳಲ್ಲಿಯೂ ಪಸರಿಸುವಂತೆ

ಮಾಡಬೇಕಾಗಿದೆ. ಇದೇ ಬಗೆಯ ಆಲೋಚನೆಯನ್ನು ಅವರ 'ಓ ಬನ್ನಿ, ಸೋದರರೆ, ಬೇಗ ಬನ್ನಿ!' ಕವಿತೆಯಲ್ಲೂ ನೋಡಬಹುದಾಗಿದೆ. ಪರಂಪರೆಯಲ್ಲಿರುವ ಮತ ಮೌಢ್ಯವನ್ನು ಮೀರಿ ಹೊಸತನದ ವಿಜ್ಞಾನ ಜ್ಯೋತಿಯನ್ನು ಹಿಡಿಯುವ ಅಗತ್ಯವನ್ನು ಇಲ್ಲಿ ಪ್ರತಿಪಾದಿಸುತ್ತಾರೆ. ಮತಗಳೆನ್ನುವುದು ಮೋಹದ ಅಜ್ಞಾನ. ಬುದ್ಧಿಯಿಂದ ಮಾತ್ರ ಲೋಕದ ಹಿತ ಸಾಧ್ಯ. ಸನಾತನ ಧರ್ಮದೊಂದಿಗೆ, ಆ ಮೂಲಕ ಅಧ್ಯಾತ್ಮದೊಂದಿಗೆ ಗಾಢ ವಿಶ್ವಾಸ ಹೊಂದಿಯೂ ಜನರನ್ನು ಅಂಧಶ್ರದ್ಧೆಗೆ ಎಳೆಸಬಲ್ಲ ಜಾತಿ ಪದ್ಧತಿ, ವರ್ಣಪದ್ಧತಿ, ಪುರೋಹಿತಶಾಹಿ ವ್ಯವಸ್ಥೆ, ಧರ್ಮದ ಸಾಂಸ್ಥಿಕ ರೂಪಗಳಾದ ಗುಡಿ–ಚರ್ಚು–ಮಸೀದಿಗಳನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿ ಸಂಕುಚಿತತೆಗೆ ಕಾರಣವಾಗಬಲ್ಲ ಇಂತಹ ಎಲ್ಲ ಮತಗಳ ಸಹವಾಸವನ್ನು ದೂರಮಾಡುವ ಕುರಿತು ಮಾತನಾಡುತ್ತಾರೆ. ಮನುಜ ಮತವನ್ನು ಎತ್ತಿ ಹಿಡಿದು, ವಿಶ್ವ ಪಥದಲ್ಲಿ ಸಾಗುವಂತೆ ಆಹ್ವಾನಿಸುತ್ತಾರೆ. ಕುವೆಂಪು ಅವರ ಸಾಮಾಜಿಕ ವೈಚಾರಿಕತೆಯ ಪ್ರತೀಕವಾಗಿದೆ ಈ ನಿಲುವು. ಕವಿ ಸಮಗ್ರತೆಯ ಭಾವನೆಯೊಂದಿಗೆ ಮತದ ಬಿರುಕುಗಳನ್ನು ತೊರೆಯುವ, ನುಡಿಗಳೊಡಕುಗಳನ್ನು ಮರೆವ ಮೂಲಕ ವ್ಯಕ್ತಿ ಬದುಕು ಸಮಷ್ಟಿಯೊಂದಿಗೆ ಐಕ್ಯಗೊಳ್ಳುವಂತೆ ಮಾಡುತ್ತಾರೆ.

ಭಾರತಕ್ಕೆ ಸ್ವಾತಂತ್ರ್ಯ ದೊರಕಿದಂದು ಅವರು ಬರೆದ "ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ" ದಲ್ಲಿ ಸ್ವತಂತ್ರಗೊಂಡ ಭಾರತದ ಮಹಾನ್ ರೂಪವನ್ನು ಅನಾವರಣ ಮಾಡುತ್ತಾರೆ.

> "ಆ ವಿಭಕ್ತೆ ತಾನಿಲ್ಲಿ ಅವಿಭಕ್ತೆ ನಿತ್ಯಮೈಕ್ಯಭೂತೆ
> ದ್ವೈತೆ ಮೃತ್ತಿನಲಿ, ಅದ್ವೈತಿ ಚಿತ್ತಿನಲಿ, ದಿವ್ಯೆ ಮಹಾಶ್ವೇತೆ
> ಒಡಲು ಬಿರಿದೊಡೇನ್? ಉಸಿರು ಒಡೆಯುವುದೆ? ಭಕ್ತಿಭಾವ ಜಾತೆ
> ಅನೇಕವಾಗಿಯೂ ಏಕವಾಗಿಹಳು ನೋಡು ಭರತಮಾತೆ,
> ಸರ್ವತತ್ವ ಮತ ಧರ್ಮಸತ್ವ ಪೀಯೂಷ ಸ್ತನ್ಯದಾತೆ
> ಹಿಂದು ಮುಸಲ ಸಿಖ ಕ್ರೈಸ್ತ ಪಾರಸಿಕ ಮುಖಾಖಿಲಾತೀತೆ !" [೮]
>
> (ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ)

ಎನ್ನುವ ಸಾಲುಗಳಿವೆ. ಭಾರತವನ್ನು ವರ್ಣಿಸುವ ಈ ಸಾಲುಗಳು ಭಾರತದ ಬಹುಸ್ವರೂಪವನ್ನು ಕುರಿತು ಹೇಳುತ್ತಿದೆ. ಐಕ್ಯ ತತ್ವದ ಬಗೆಗೆ ಮಾತನಾಡುವ ಕವಿಗೆ ವೈವಿಧ್ಯತೆ ಸುಂದರವಾಗಿ ಕಾಣುತ್ತದೆ. ಇದು ದ್ವೈತ ಮತ್ತು ಅದ್ವೈತ ಎನ್ನುವ ಪರಿಭಾಷೆಯಲ್ಲಿ ವ್ಯಕ್ತವಾಗುತ್ತದೆ. ಏಕವೂ ಹೌದು, ಅನೇಕವೂ ಹೌದು. ದೇಹ ಹಲವಿದೆ. ಆದರೆ ಉಸಿರು ಒಂದೇ. ಹೀಗೆ ಅನೇಕವಾಗಿಯೂ ಕೂಡ ಭರತಮಾತೆ ತಾನು ಸ್ವರೂಪದಲ್ಲಿ ಏಕವಾಗಿರುವಳು. ಹಲವು ತತ್ವಗಳು, ಹಲವು ಮತಧರ್ಮಗಳು, ಹಿಂದು, ಮುಸ್ಲಿಂ, ಸಿಖ್, ಕ್ರೈಸ್ತ, ಪಾರಸಿಕ ಎನ್ನುವ ಧಾರ್ಮಿಕ ರೂಪಗಳು. ಹೀಗಿದ್ದೂ ಭಾರತ ಏಕ. ಯಾಕೆಂದರೆ ಅವುಗಳೆಲ್ಲದರ ಸತ್ವವನ್ನೇ ಹೀರಿ ಬೆಳೆದ ದೇಶವಿದು ಎಂಬ ಭಾವನೆ ಇಲ್ಲಿದೆ. ಒಂದಾಗುವುದಕ್ಕೆ ಹೊರಟ ಭಾರತಕ್ಕೆ ಅನೇಕದೊಳಗೆ ಯಾವುದೂ ತಿರಸ್ಕಾರಕ್ಕೆ ಕಾರಣವಾಗುವ, ಅನ್ಯವಾಗುವ ಸಂಗತಿಗಳಲ್ಲ. ಈ ಸ್ವಾತಂತ್ರ್ಯ ಕೆಲವರಿಗೆ ಮಾತ್ರ ಅಲ್ಲ. ರಾಷ್ಟ್ರದ ಸರ್ವರ ಉದ್ಧಾರಕ್ಕೆ, ಸಂತೋಷಕ್ಕೆ ಕಾರಣವಾಗಬೇಕಾದ ಸಂಗತಿಯಾಗುತ್ತದೆ.

## ೫.೩ ಬೇಂದ್ರೆಯವರ ಕವಿತೆಗಳಲ್ಲಿ ಸಮನ್ವಯ ಪ್ರಜ್ಞೆ:

ಬೇಂದ್ರೆಯವರ ಕವನಗಳಲ್ಲೂ ಕೂಡ ಸಮನ್ವಯ ಪ್ರಜ್ಞೆಯನ್ನು ವಿಶೇಷವಾಗಿ ಕಾಣಬಹುದಾಗಿದೆ. ಕವಿಗೆ 'ಕರ್ನಾಟಕ ಒಂದೇ' ಎಂಬ ಭಾವನೆ ದೃಢವಾಗಿದ್ದರೂ ಕರ್ನಾಟಕದೊಳಗಿನ ವೈವಿಧ್ಯತೆಯ ಕುರಿತು, ಅವುಗಳ ನಡುವಿನ ಐಕ್ಯ ಪ್ರಜ್ಞೆಯ ಕುರಿತು ಸತತವಾದ ಎಚ್ಚರ ಇದೆ. ಜನ ಸಮುದಾಯಗಳ ಭಾಷೆಯ, ಧಾರ್ಮಿಕತೆಯ ವೈವಿಧ್ಯತೆಗಳು ಸಹಜ ಸಮನ್ವಯತೆಯ ಸಾಕ್ಷಿಗಳಾಗಬೇಕೇ ಹೊರತು ಅವುಗಳು ಎಂದೂ ಪ್ರತ್ಯೇಕತೆಯ ಭಾವನೆಗಾಗಲಿ, ಅಥವಾ ಬಹುತ್ವವನ್ನು ಕಳೆದುಕೊಂಡು ಏಕರೂಪೀಕರಣಕ್ಕೊಳಗಾಗುವುದಕ್ಕಾಗಲೀ ಕಾರಣವಾಗಬಾರದು ಎಂಬ ಅರಿವೂ ಇದೆ. ಅವರ 'ದಿವ್ಯ ಧ್ವನಿ' ಎಂಬ ಕವಿತೆಯಲ್ಲಿ

"ಕೂಡಲಿ ಜಿನ ಹರಿ ಹರ ಶರಣ

ನವ ಧರ್ಮದ ಐಕ್ಯಾವರಣ" ಎಂಬ ಸಾಲುಗಳು ಇದೇ ಅರ್ಥವನ್ನು ನೀಡುತ್ತಿದೆ. ಬಹುತ್ವ ಕರ್ನಾಟಕದ ಅಂತಃಸತ್ವವೇ ಆಗಿದೆ. ಜಿನ,ಹರಿ,ಹರ, ಶರಣ ಪಂಥಗಳ ನಡುವೆ ಐಕ್ಯಭಾವ ಬೆಳೆದಾಗ ನವಧರ್ಮದ ಉದಯವಾಗುತ್ತದೆ ಎಂದು

ಹೇಳುವ ಮೂಲಕ ವಿಸ್ತಾರವಾದ ಕರ್ನಾಟಕದ ಜೀವನ ಲಹರಿಯ ಕುರಿತು ಹೇಳುತ್ತಾರೆ. ಇದೇ ಪ್ರಜ್ಞೆ ಅವರ 'ಪಾರ್ವತಿ ನೀನೇ ಸಲಹು' ಕವಿತೆಯಲ್ಲಿ ಇನ್ನಷ್ಟು ವಿಸ್ತರಿಸಿದೆ.

"ಜೈನರ ಕಾವ್ಯದ ಶರಣರ ವಚನದ
ದಾಸರ ಹಾಡಿನದೀ ನಾಡು
ವಿಶ್ವದ ಕಬ್ಬದ ಹಬ್ಬ ಹುಣ್ಣಿವೆಗೆ
ಕನ್ನಡ ಹೃದಯವ ಹದ ಮಾಡು" (ಪಾರ್ವತಿ ನೀನೇ ಸಲಹು)

ಎನ್ನುತ್ತಾ ಈ ನಾಡಿನ ವೈವಿಧ್ಯಮಯ ಸ್ವರೂಪದೊಂದಿಗೆ ಸಮನ್ವಯವನ್ನು ಸಾಧಿಸುತ್ತಿದ್ದಾರೆ. ಏಕೀಕರಣ ಎನ್ನುವುದು ಪರಸ್ಪರ ಕೂಡುವಿಕೆಯೇ ಹೊರತು ವೈವಿಧ್ಯತೆಯನ್ನು ಕಳೆದುಕೊಂಡ 'ಏಕರೂಪೀಕರಣ' ಅಲ್ಲ ಎನ್ನುವುದನ್ನು ಕವಿ ಯಾವ ಸ್ವರೂಪದಲ್ಲಿ ಗ್ರಹಿಸಿದ್ದರು ಎನ್ನುವುದನ್ನು ಇಲ್ಲಿ ನೋಡಬಹುದಾಗಿದೆ. ಪಶ್ಚಿಮದ ರಾಷ್ಟ್ರ ಪರಿಕಲ್ಪನೆಗೆ ಬಹುತ್ವ ನಿರಾಕರಿಸಲ್ಪಡುವ ಸಂಗತಿ. ಅಲ್ಲಿ ಒಂದು ಭಾಷೆ, ಒಂದು ಮತ-ಧರ್ಮಗಳೇ ಒಂದು ರಾಷ್ಟ್ರದ ಉಗಮದ ಹಿಂದಿರುವ ಕಾರಣಗಳಾಗಿರುತ್ತವೆ. ಭಾರತೀಯ ಸಂದರ್ಭದಲ್ಲಿ ರಾಷ್ಟ್ರದ ಒಳಗೆ ಹಲವು ಭಾಷಿಕ ನಾಡುಗಳು, ನಾಡೊಳಗೆ ಒಂದು ಭಾಷೆಯ ಹಲವು ಬಳಕೆಯ ಕ್ರಮಗಳು, ಹಲವು ಭಾಷೆಗಳ ಒಮ್ಮತದ ಕೂಟವಾಗಿ , ಮತ-ಧರ್ಮಗಳಲ್ಲಿನ ವೈವಿಧ್ಯತೆ ಇವೆಲ್ಲವನ್ನೂ ಕಾಣಲು ಸಾಧ್ಯವಿದೆ. ಇವುಗಳು ಇಲ್ಲಿ ನಿರಾಕರಿಸಲ್ಪಡುವುದಾಗಲಿ, ನಿಗ್ರಹಿಸಲ್ಪಡುವುದಾಗಲೀ ಇಲ್ಲ. ಜೈನರ ಕಾವ್ಯ, ಶರಣರ ವಚನ, ದಾಸರ ಹಾಡು ಎನ್ನುವುದು ಮತಪಂಥಗಳ ವೈವಿಧ್ಯತೆಯನ್ನೂ ಅಂದರೆ ಜೈನರು, ವೀರಶೈವರು, ಬ್ರಾಹ್ಮಣರು, ಕುರುಬರು ಎಂಬ ಬಹುರೂಪಿ ಕರ್ನಾಟಕವನ್ನು ಹೇಳುತ್ತಿರುವಂತೆ, ಹಳೆಗನ್ನಡ ಕಾವ್ಯದ ಕನ್ನಡ, ವಚನದ ಕನ್ನಡ, ಕೀರ್ತನೆಗಳ ಕನ್ನಡದ ನಡುವೆ ಭಾಷೆಯು ಪಡೆದ ಹೊಸತನ, ಬದಲಾವಣೆಗಳನ್ನು ಹೇಳುವ ಮೂಲಕ ಒಂದು ಕರ್ನಾಟಕ, ಒಂದು ಕನ್ನಡ ಎನ್ನುವಾಗಲೂ ಅದರೊಳಗಿನ ವಿಶ್ವರೂಪವನ್ನು ಹೇಳುತ್ತಿದೆ. ನಾಡಿನ ಒಳಗಿನ ವೈವಿಧ್ಯತೆಯು ಹೇಗೆ ಕವಿಯ ಗಮನದಲ್ಲಿರುವುದೋ ಬಾಹ್ಯ ವೈವಿಧ್ಯತೆಯ ಬಗೆಗೂ ಕವಿ ಅನ್ಯ ಭಾವವನ್ನು ತೋರದೆ ಹಲವು ಸೇರಿ ಒಂದಾದ ಸಂಗತಿಯನ್ನು

ಸುಂದರವಾಗಿ ನಿರೂಪಿಸುತ್ತಾರೆ. ಅವರ 'ಕನ್ನಡದ ಪಾವನ ಪರಂಪರೆ' ಕವಿತೆಯಲ್ಲಿ ಹೇಳುವಂತೆ,

"ತೆಂಕಣಕೆ ಕೇರಳವು, ದ್ರಾವಿಡವು ಮೂಡಲಕೆ

ಆಂದ್ರ ಬಡಗಣಕೆ ಮರಾಷ್ಟ್ರ ನಾಡು

ಈ ಚತುರ್ದಳ ಮಧ್ಯಬೀಜ ಕರ್ನಾಟಕವು

ಧರ್ಮಗುಂಜಾರವದ ಕವಿಯ ಬೀಡು" [೧೦] (ಕನ್ನಡದ ಪಾವನ ಪರಂಪರೆ)

ಎಂದು ಕರ್ನಾಟಕದ ಕುರಿತು ಹೇಳುತ್ತಾರೆ. ಕೇರಳ, ತಮಿಳುನಾಡು, ಅಂಧ್ರಪ್ರದೇಶ, ಮಹಾರಾಷ್ಟ್ರಗಳು ಕರ್ನಾಟಕದ ಸುತ್ತಲಿನ ರಾಜ್ಯಗಳು. ಕನ್ನಡ ಕರ್ನಾಟಕದ ಪ್ರಾಣವಾಗಿರುವಂತೆ ಆ ಸುತ್ತಲಿನ ರಾಜ್ಯಗಳಿಗೂ ಅವುಗಳದೇ ಪ್ರಾಣ ಸ್ವರೂಪಿಯಾದ ಭಾಷೆಗಳಿವೆ. ಆದರೆ ಆ ನೆರೆಯ ರಾಜ್ಯಗಳ ಜೊತೆಗೆ ಕವಿಗೆ ಸ್ಪರ್ಧೆಯ ಅಥವಾ ಸಂಘರ್ಷದ ಮನೋಭಾವವಿಲ್ಲ. ಏಕೀಕರಣೋತ್ತರ ರಾಜಕೀಯ ದೃಷ್ಟಿಯಿಂದ ನೋಡಿದರೆ ನೆರೆಯ ರಾಜ್ಯಗಳ ಜೊತೆ ಗಡಿಯ, ನದಿ ನೀರಿನ ವಿವಾದಗಳಿವೆ. ಸಂಘರ್ಷಗಳಿವೆ. ಈ ವಿವಾದಗಳು ರಾಜಕೀಯ ಕಾರಣಗಳಿಂದ ಸೃಷ್ಟಿಯಾಗಿರುವಂತಹದು. ಆದರೆ ರಾಜ್ಯ ರಾಜ್ಯಗಳ ನಡುವೆ, ಭಾಷೆ ಭಾಷೆಗಳ ನಡುವೆ ಕವಿ ಬಯಸುವ ಸಮನ್ವಯದ ದೃಷ್ಟಿ ಈ ಇಡೀ ಕವನದಲ್ಲಿ ವ್ಯಾಪಿಸಿದೆ. ಈ ಎಲ್ಲಾ ರಾಜ್ಯಗಳೂ, ಭಾಷೆಗಳೂ ಒಂದೇ ಮೂಲದ ಭಿನ್ನರೂಪದ ಪ್ರಕಟೀಕರಣ ಎನ್ನುವ ಭಾವ ಕವಿಯದ್ದು. ಹಾಗಾಗಿ ಕವಿ ಇದನ್ನು 'ಈ ಚತುರ್ದಳ ಮಧ್ಯಬೀಜ ಕರ್ನಾಟಕವು' ಎನ್ನುತ್ತಾರೆ. ಈ ರಾಜ್ಯಗಳು ಒಂದೇ ಹೂವಿನ ನಾಲ್ಕು ದಳಗಳು. ಅವುಗಳ ಮಧ್ಯಬೀಜ ಕರ್ನಾಟಕ ಎನ್ನುವಾಗ ದಳಗಳಾಗಲೀ, ಬೀಜವಾಗಲಿ ಬೇರೆ ಬೇರೆ ಎಂಬ ಭಾವ ಇಲ್ಲ. 'ಚತುರ್ದಳ ಮಧ್ಯಬೀಜ' ಎನ್ನುವ ಕಲ್ಪನೆಯೇ ಸಮನ್ವಯ ಭಾವದ ಶ್ರೇಷ್ಠ ನಿದರ್ಶನವಾಗಿದೆ. ಯಾವುದು ಸಾಮಾನ್ಯ ಹೋರಾಟಗಾರನಿಗೆ 'ಅನ್ಯ' ಎಂಬ ಭಾವಕ್ಕೆ ಕಾರಣವಾಗಬಹುದಾಗಿತ್ತೋ ಇದೇ ಸಂಗತಿ ಕವಿಯ ರಚನೆಯೊಳಗೆ 'ಸ್ವ'ದ ಒಂದು ಭಾಗವೇ ಆಗಿ ರೂಪು ತಾಳುವುದನ್ನು ಗಮನಿಸಬೇಕು.

ಇದೇ ರೀತಿಯ ಚಿಂತನೆ ಅವರ 'ಕೇಳಿ ನುಡಿ– ಕಂಡು ನಡೆ' ಕವನದಲ್ಲೂ ಇರುವುದನ್ನು ನೋಡಬಹುದು.

"ಭರತಖಂಡ ಇದು ಅಖಂಡ
ಹತ್ತು ದೇಶ ಸೇರಿಕೆ
ಸಾಕು ತ್ವೇಷ, ಬೇಡ ದ್ವೇಷ
ಬೇರೆ ಭಾಷೆ, ಬೇರೆ ವೇಷ
ಹೃದಯದೊಂದೆ ಹಾರಿಕೆ
ಭಾಗ್ಯದಿಳಿವು ಏರಿಕೆ" [೧೧] (ಕೇಳಿ ನುಡಿ– ಕಂಡು ನಡೆ)

ಎನ್ನುವ ಸಾಲುಗಳನ್ನು ಗಮನಿಸಿದರೆ, ಇದು ಕವಿಯು ರಾಷ್ಟ್ರದೊಂದಿಗೆ, ಬೇರೆ ಭಾಷೆಗಳೊಂದಿಗೆ ಹೊಂದುವ ಸಮನ್ವಯ ಭಾವದ ಪ್ರತೀಕವಾಗಿದೆ. ಕನ್ನಡದ ಕವಿಯೊಬ್ಬ ಭರತಖಂಡದ ಬಗೆಗೆ ಹೊಂದುವ ಅಖಂಡತ್ವದ ಭಾವವೇ ಸಂಘರ್ಷ ರಹಿತ ಸಂಬಂಧವನ್ನು ಸೂಚಿಸುತ್ತದೆ. ಭರತಖಂಡ ಎಂದರೆ ಅದು ಹತ್ತು ದೇಶಗಳ ಸೇರಿಕೆ ಎನ್ನುವಾಗಲೇ ತಾನು ಕೂಡ ಅಂತಹ ಒಂದು ದೇಶ (ಪ್ರದೇಶ)ದ ಭಾಗವೇ ಆಗಿರುವೆ ಎಂಬ ಎಚ್ಚರವೂ ಇದೆ. ಹಾಗಾಗಿಯೇ 'ದ್ವೇಷ ಭಾವ ಬೇಡ' ಎನ್ನುತ್ತಾರೆ. ಇದಕ್ಕಿಂತಲೂ ಕವಿಯ ಗ್ರಹಿಕೆಯಲ್ಲಿನ ಒಂದು ಸೂಕ್ಷ್ಮವನ್ನು ಈ ಕವಿತೆಯಲ್ಲಿ ನೋಡಬಹುದಾಗಿದೆ. ಅದೆಂದರೆ ಅಖಂಡವೆನ್ನಲಾದ ಭಾರತದೊಳಗೆ ಬೇರೆ ಭಾಷೆಗಳಿವೆ, ಬೇರೆ ವೇಷಗಳಿವೆ. ಈ ಭಾಷೆ 'ಬೇರೆ' ಯಾದ ಸ್ಥಿತಿ, ವೇಷ 'ಬೇರೆ'ಯಾದ ಸ್ಥಿತಿ ಪರಸ್ಪರರ ಅಪನಂಬಿಕೆ, ಆತಂಕ, ಸಂಘರ್ಷಕ್ಕೆ ಕಾರಣವಾಗಬೇಕಾಗಿಲ್ಲ. ಈ ಸ್ಥಿತಿಗೆ ಕಾರಣವಾಗುವುದು ಇವುಗಳ ಕೂಡುವಿಕೆಯ ಭಾವ. ಹಾಗಾಗಿ ಹೃದಯದಲ್ಲಿ ಇರುವ ಹಾರೈಕೆಯೊಂದೇ ಆಗಿದೆ. ಈ ಸಾಲುಗಳು ಕವಿಯ ಸಮನ್ವಯ ಭಾವಕ್ಕೆ ನಿದರ್ಶನವಾಗುವಂತೆ, ಭಾರತೀಯ ರಾಷ್ಟ್ರವಾದದ ವ್ಯಾಖ್ಯಾನವೂ ಆಗುತ್ತದೆ. 'ಬಹುತ್ವ' ತನ್ನ ಅಸ್ತಿತ್ವಕ್ಕೆ ಅಪಾಯಕಾರಿ ಅಲ್ಲ ಎನ್ನುವ ತಿಳುವಳಿಕೆಯೇ ಭಾರತೀಯ ರಾಷ್ಟ್ರವಾದದ ಮೂಲ ಗ್ರಹಿಕೆ. ಈ ಗ್ರಹಿಕೆಯೇ ಹತ್ತು ದೇಶದ ಸೇರಿಕೆಯಾಗಿಯೂ, ಬೇರೆ ಭಾಷೆ, ಬೇರೆ ವೇಷ ಆಗಿಯೂ ಭರತಖಂಡವನ್ನು ಅಖಂಡವಾಗಿಯೇ ಉಳಿಸಿದೆ.

ಹಲವು ಪ್ರದೇಶವನ್ನು ಒಳಗೊಂಡು ಒಂದು ಭಾರತ ಅಖಂಡವಾದುದನ್ನು, ಅದರೊಳಗೆ ಹಲವು ಭಾಷೆಗಳನ್ನೂ, ವೇಷಗಳನ್ನೂ ಗೌರವಿಸುವ ಕವಿ ಪ್ರಜ್ಞೆ ಇನ್ನೂ ಬೆಳೆದು

"ಭೂ ಮಂಡಲ ಏಕ ರಾಷ್ಟ್ರ

ಸರ್ವ ವರ್ಣಮಾನವ"

ಎಂಬುದಾಗಿ ಹೇಳಲು ಸಾಧ್ಯವಾಗುತ್ತದೆ. ಈ ಕವಿಗೆ ಹಲವು ರಾಷ್ಟ್ರಗಳನ್ನು ಹೊಂದಿದ ಭೂಮಂಡಲದ ವೈವಿಧ್ಯತೆಯನ್ನು ಒಂದು ರಾಷ್ಟ್ರ ಎಂಬ ವಿಶಾಲ ಭಾವದಲ್ಲಿ ಬೆಸೆಯುವುದು ಅಸಾಧ್ಯವಾಗುವುದಿಲ್ಲ. ಕವಿಯ ಭೂ ಮಂಡಲ 'ಏಕರಾಷ್ಟ್ರ' ಎಂಬ ಮನೋಭಾವ ವಸಾಹತುಶಾಹಿ ಪ್ರಭುತ್ವ ಹುಟ್ಟುಹಾಕಿದ 'ಸಾಮ್ರಾಜ್ಯಶಾಹಿ' ಮನೋಭಾವದಿಂದ ಉತ್ಪನ್ನವಾದುದಲ್ಲ. ಸೃಷ್ಟಿಯ ಅಖಂಡತೆಯಲ್ಲಿ ಮತ್ತು ಅದರ ವೈವಿಧ್ಯತೆಯಲ್ಲಿ ನಂಬಿಕೆ ಉಳ್ಳ ಉನ್ನತ ಅಧ್ಯಾತ್ಮದ ಮನಸ್ಥಿತಿಯಲ್ಲಿ ಮಾತ್ರ ಇಂಥ ಸಮನ್ವಯ ಪ್ರಜ್ಞೆಯನ್ನು ಕಾಣಬಹುದಾಗಿದೆ. ತಾತ್ವಿಕವಾಗಿ ಈ ಕವಿತೆಯು ಬ್ರಿಟಿಷ್ ವಸಾಹತುಶಾಹಿಗೆ ಭಾರತೀಯ ಪರಂಪರೆಯನ್ನು ಮುಖಾಮುಖಿಯಾಗಿಸಿ ಬ್ರಿಟಿಷ್‌ರ ಸಾಮ್ರಾಜ್ಯವಾದದ ಪ್ರವೃತ್ತಿಗೆ ಕವಿ ಕೊಟ್ಟ ಉತ್ತರವೂ ಹೌದು ಎನ್ನಬಹುದು. ಅವರ 'ನವ ಯುಗಾರಂಭ' ಕವಿತೆಯ,

" ಹಳ್ಳಿ ಹಳ್ಳಿ ಸಕಲ ಭೋಜ್ಯ

ಭಾರತವಿದು ಅವಿಭಾಜ್ಯ

ಜಗತ್ತೆಲ್ಲ ಏಕರಾಜ್ಯ

ಸಾರಲಿ ಶೃತಿಗೆ " [೧೨] (ನವಯುಗಾರಂಭ)

ಸಾಲುಗಳು ಕೂಡ ಇದೇ ಭಾವದ ಪುನರುಚ್ಚರಣೆಯಾಗಿದೆ. 'ಜಗತ್ತೆಲ್ಲ ಏಕರಾಜ್ಯ' ಎನ್ನುವುದು 'ಭೂ ಮಂಡಲ ಏಕರಾಷ್ಟ್ರ' ಎಂಬ ಮನೋಭಾವದ ಮುಂದುವರಿಕೆಯೇ ಆಗಿದೆ. ಬೇಂದ್ರೆಯವರ ಕಾವ್ಯದ 'ರಾಷ್ಟ್ರ ಮೀಮಾಂಸೆ' ಯನ್ನು ಅರ್ಥಮಾಡಿ ಕೊಳ್ಳಬೇಕಾದರೆ ಈ ಎರಡೂ ಕವನಗಳು ಅವಶ್ಯಕ. ಸೃಷ್ಟಿಯಲ್ಲಿ ಯಾವುದೇ ತಾರತಮ್ಯವನ್ನು ತೋರದ, ಸೃಷ್ಟಿಯ ಸಮಸ್ತವನ್ನೂ ಒಳಗೊಳ್ಳುವ ಮಾದರಿಯ ರಾಷ್ಟ್ರೀಯತೆಯನ್ನು ಇಲ್ಲಿ ನೋಡಬಹುದಾಗಿದೆ. ಎಲ್ಲವನ್ನೂ ಒಂದಾಗಿ ನೋಡುವ ಪ್ರಜ್ಞೆ ಇಲ್ಲಿದೆ. ಈ 'ಒಂದು' ಎನ್ನುವುದು ಒಂದಲ್ಲದ ಹಲವುಗಳ ನಡುವಿನ ಸಮನ್ವಯದಿಂದ ಸಾಧಿಸಲ್ಪಡುತ್ತದೆ. ಈ ಸಮನ್ವಯ ಪ್ರಜ್ಞೆಯ ಹಿಂದೆ ಯಾವುದೇ ಬಗೆಯ 'ಯಾಜಮಾನ್ಯ'ದ ಕಲ್ಪನೆ ಇಲ್ಲ. ಒಂದು ಪ್ರಭುತ್ವವನ್ನು, ಒಂದು ತತ್ವವನ್ನು ಇನ್ನೊಂದರ ಮೇಲೆ ಹೇರುವ ಬಗೆಯ, ಯಜಮಾನ ಕೇಂದ್ರಿತ ಕಲ್ಪನೆ ಇದಲ್ಲ. ಈ ಕಾರಣದಿಂದಲೇ

ಜಗತ್ತೆಲ್ಲ ಏಕರಾಜ್ಯ ಎನ್ನುವಾಗಲೂ, ಭೂಮಂಡಲ ಏಕರಾಜ್ಯ ಎನ್ನುವಾಗಲೂ ಸೌಜನ್ಯದ, ಪ್ರೀತಿಯ ಭಾಷೆ ಬಳಕೆಯಾಗುತ್ತದೆ.

ವ್ಯಕ್ತಿ ರಾಷ್ಟ್ರದ ಅಂಗವಾಗಿರುವುದು ಸಹಜ ಸಾಮಾನ್ಯ ಸಂಗತಿ. 'ರಾಷ್ಟ್ರ' ಮುಖ್ಯವಾಗಿ ಜನ ಅಮುಖ್ಯವಾಗಬಹುದಾದ ಸಂದರ್ಭವೂ ಇದೆ. ರಾಷ್ಟ್ರದ ಅಸ್ತಿತ್ವ, ಗುರುತಿಗಾಗಿ ಜನ ತಮ್ಮ ಅಸ್ತಿತ್ವವನ್ನೂ, ಗುರುತನ್ನು ತ್ಯಾಗಮಾಡಬೇಕಾಗಬಹುದು ಎಂಬಂತೆಯೂ ಪ್ರತಿಪಾದಿಸಲಾಗುತ್ತದೆ. ಸಮಷ್ಟಿಗಾಗಿ, ಸಮುದಾಯಕ್ಕಾಗಿ ವ್ಯಕ್ತಿ ತಾನು ಇಲ್ಲವಾಗುವ ಅಥವಾ ಗೌಣವಾಗುವ ಸಾಧ್ಯತೆಯನ್ನೂ ಕೂಡ ನಿರಾಕರಿಸಲಾಗದು. ಬೇಂದ್ರೆಯವರ 'ಜನವೇ ರಾಷ್ಟ್ರ' ಕವಿತೆಯನ್ನು ನೋಡಿದಾಗ ಇದಕ್ಕೆ ವಿರುದ್ಧವಾದ ಒಂದು ಸಾಧ್ಯತೆಯನ್ನು ಕವಿ ಮಂಡಿಸಿರುವುದನ್ನು ನೋಡಬಹುದು. ವ್ಯಕ್ತಿ ಮತ್ತು ರಾಷ್ಟ್ರದ ನಡುವಿನ ಸಮನ್ವಯದ ಒಂದು ವಿಶಿಷ್ಟ ಮಾದರಿಯಾಗಿ ಇದನ್ನು ನೋಡಬಹುದು.

'ಜನವೇ ರಾಷ್ಟ್ರವು, ರಾಷ್ಟ್ರವೇ ಜನವು
ಸಾರ್ವಭೌಮ ಮಾನವನ ಸ್ತುತಿ'

ಎಂಬ ಸಾಲುಗಳಲ್ಲಿ 'ಜನವೇ ರಾಷ್ಟ್ರವು; ರಾಷ್ಟ್ರವೇ ಜನವು' ಎನ್ನುವುದು – ರಾಷ್ಟ್ರದ ಕುರಿತು ಮಾಡಲಾಗಿರುವ ಈವರೆಗಿನ ಹಲವು ವ್ಯಾಖ್ಯಾನಗಳನ್ನೇ ಬದಲಾಯಿತ್ತದೆ. ಜನ ರಾಷ್ಟ್ರದ ಭಾಗವಾಗುವುದಷ್ಟೇ ಅಲ್ಲ, ಜನ ತಾವೇ ರಾಷ್ಟ್ರವೂ ಆಗುವುದು, ರಾಷ್ಟ್ರ ಜನವೇ ಆಗುವುದನ್ನು ಚಿತ್ರಿಸುತ್ತದೆ. ಆ ಮೂಲಕ ಸೃಷ್ಟಿಯ ಎಲ್ಲರೂ ಜೊತೆಗೂಡಿದ ಒಂದು ಸಮನ್ವಯತೆಯನ್ನು ಕಾಣುವುದು ಕವಿಯ ಉದ್ದೇಶ. ಇಲ್ಲಿ ಜನದೊಂದಿಗೆ ರಾಷ್ಟ್ರಕ್ಕಾಗಲಿ, ರಾಷ್ಟ್ರದೊಂದಿಗೆ ಜನಕ್ಕಾಗಲೀ ಸಂಘರ್ಷ ಇಲ್ಲ. ಅಲ್ಲಿ ಮಾನವನೇ ಸಾರ್ವಭೌಮ ಎನ್ನುತ್ತಾರೆ ಕವಿ. ವ್ಯಕ್ತಿ ಘನತೆಯನ್ನು ಎತ್ತಿ ಗೌರವಿಸಿದ ಸಂಕೇತ ಇದು ಎನ್ನಬಹುದು. ಬೇಂದ್ರೆಯವರು ಕನ್ನಡ ಮತ್ತು ಭಾರತ ರಾಷ್ಟ್ರಗಳ ನಡುವಿನ ಸಂಬಂಧವನ್ನು ಪೋಷಕವಾಗಿಯೇ ಗುರುತಿಸುತ್ತಾರೆ. ಕನ್ನಡದ ಕುರಿತ ಭಾವನೆ ಭಾರತ ರಾಷ್ಟ್ರ ಭಾವಕ್ಕೆ ಪೋಷಕವಾಗಿ ಬೆಳೆದು ಪರಸ್ಪರ ಸಂಗಮವಾಗುತ್ತದೆ. ಭಾಷಾ ಸಂಸ್ಕೃತಿಯು ರಾಷ್ಟ್ರ ಸಂಸ್ಕೃತಿಯ ಅಂಗ, ರಾಷ್ಟ್ರವು ಮಾನವತೆಯ ಅಂಗ. ರಾಷ್ಟ್ರಪರಿಕಲ್ಪನೆಯನ್ನು ಮಾನವೀಯಗೊಳಿಸುತ್ತಲೇ ಅದಕ್ಕೊಂದು ಸಾಂಸ್ಕೃತಿಕ

ಸ್ವರೂಪವನ್ನು ನೀಡುತ್ತಾರೆ. ಮಾನವತೆಯ ಸಂಪತ್ತಿನಿಂದ ಭಾವೈಕ್ಯ ನಿನದಿಸಿದಾಗ ಕನ್ನಡವೂ– ಭಾರತವೂ –ಜಗವೆಲ್ಲವೂ ಒಂದೇ ಎನ್ನುತ್ತಾರೆ.

ಬೇಂದ್ರೆಯವರ ಸೀಮೋಂಲ್ಲಘನ ಕವಿತೆಯ ಆರಂಭದಲ್ಲಿ,

"ಪಂಗಡವ ಪಂಗಡವ ವಿಂಗಡಿಸಿ ಕೆಟ್ಟು
ಸಂಗಡಿಸಿ ಕೂಡಿರುವ ಬಾಳುವೆಯ ಗುಟ್ಟು
ಕಂಗೊಳಿಸೆ ಹಾಗಿರುವ ಬಿರುದನ್ನು ತೊಟ್ಟು
ಹೋಗೋಣ ಬಾ ಇನ್ನು ಸೀಮೆಯನು ದಾಟಿ"

ಎಂಬ ಸಾಲುಗಳಿವೆ. ಕವಿತೆಯ ಕೊನೆಗೆ

"ದೇವಿಯರ ನಾಡೆಂತು ಹಿಂದುಳಿಯಬಹುದು?
ಭಾವಭಕ್ತಿಯವೆಂತು ಹಗೆಯಾಗಲಹುದು ?" [೧೩] (ಸಿಮೋಲ್ಲಂಘನಾ)

ಎಂಬ ಮಾತಿದೆ. ಈ ಇಡೀ ಕವಿತೆಯನ್ನು ಗಮನಿಸಬೇಕಾದದ್ದು ಕವಿತೆಯ ಆರಂಭದಲ್ಲಿರುವ ವಿಭಜಿತ ಮನಸ್ಥಿತಿಯನ್ನು ಕುರಿತ ಸೊಲ್ಲುಗಳು ಕೊನೆಯಲ್ಲಿ ಯಾರೂ ಹಗೆಯಲ್ಲ ಎಂಬ ಮನಸ್ಥಿತಿಯೊಂದಿಗೆ ಮುಕ್ತಾಯ ಹೊಂದುತ್ತದೆ. ಮಾನವತೆ ಕೆಟ್ಟಿರುವುದು ವಿಂಗಡನೆಯಿಂದಾಗಿ. ಇಲ್ಲಿ ಕೆಟ್ಟಿರುವುದು ಕೇವಲ ಕನ್ನಡತನವೋ, ಭಾರತೀಯತೆಯೋ ಅಲ್ಲ. ಅದು ಮಾನವತೆಯು ಕೆಟ್ಟು ನಿಂತ ಸ್ಥಿತಿಯನ್ನು ಸಂಕೇತಿಸುತ್ತದೆ. ಕವಿ ಇಲ್ಲಿ 'ಕೂಡಿ ಬಾಳುವುದು' ಬದುಕಿನ ಗುಟ್ಟು ಎನ್ನುತ್ತಾ, ವಿಂಗಡನೆಗೆ ಕಾರಣವಾಗಿರುವ ಮನಸ್ಥಿತಿಯನ್ನು ನಿರಾಕರಿಸುತ್ತಾ, ಎಲ್ಲರನ್ನೂ ಒಳಗೊಳ್ಳುವ ಮೂಲಕ ಸೀಮೆಯನ್ನು ದಾಟುವ ಕಲ್ಪನೆಯನ್ನು ಮುಂದಿಡುತ್ತಾರೆ. ಇಲ್ಲಿ ಸೀಮೆಯನ್ನು ದಾಟುವುದು ಭೌಗೋಳಿಕವಾದ ಗಡಿಗಳನ್ನಷ್ಟೇ ಆಗಿರಲಾರದು. ನಮ್ಮನ್ನು ವಿಂಗಡಿಸಿಕೊಳ್ಳುವುದಕ್ಕಾಗಿ ನಾವೇ ಹಾಕಿಕೊಂಡ ಸಂಕುಚಿತತೆಯ, ಹಗೆಯ ಬೇಲಿಗಳನ್ನು ದಾಟಿಕೊಂಡು ಮುಂದುವರಿಯುವುದನ್ನು ಹೇಳುತ್ತಿದೆ. ಹಾಗಾಗಿ ಕವಿತೆಯ ಕೊನೆಯಲ್ಲಿ ಈ ನೆಲವನ್ನು ದೇವಿಯರ ನಾಡಾಗಿಸಿ ನೆಲವನ್ನು ಪವಿತ್ರೀಕರಿಸುತ್ತಾ ಇಂತಹ ನಾಡು ಯಾವ ಕಾರಣದಿಂದಲೂ ಹಿಂದುಳಿಯಲಾರದು, ಇಲ್ಲಿ ಹಗೆ ಉಳಿಯಲಾರದು ಎಂಬ ಮಾತುಗಳಿಂದ ಎಲ್ಲವನ್ನೂ ಸ್ವೀಕರಿಸುವ, ದ್ವೇಷವಿಲ್ಲದೆ ಬೆಸೆಯುವ, ಐಕ್ಯದ ಅನುಸಂಧಾನದ ಹಾದಿಯನ್ನು ಕ್ರಮಿಸುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಕವಿತೆ ಎಲ್ಲಾ ಬಗೆಯ ಸೀಮೆಗಳನ್ನು ನಿರಾಕರಿಸುತ್ತಾ, ಅದನ್ನು ಇಲ್ಲವಾಗಿಸಿ 'ನಾಡು' ಆ ಮೂಲಕ

ಸಮಗ್ರ ಮಾನವತೆಯು 'ಇಡಿಯಾಗುವ' ಕನಸನ್ನು ಬಿತ್ತುತ್ತದೆ. 'ಹರಕುತನವನ್ನು ಕಳೆದು ಹಿರಿದಾಗುವ' ಮತ್ತು 'ಸೀಮೆಯನು ದಾಟಿ ಇಡಿಯಾಗುವ' ಎರಡು ಕನಸುಗಳು ಕವಿ ಮುಂದಿಟ್ಟ ಅದ್ಭುತವಾದ ಕಲ್ಪನೆಗಳೆಂದೇ ಭಾವಿಸಬೇಕು. ಗಡಿಯ ವಿಸ್ತಾರದಿಂದ ಹಿರಿದಾಗುವುದಲ್ಲ. ನಮ್ಮ ಹರಕುತನವನ್ನು ಕಳೆದುಕೊಂಡೇ ಹಿರಿದಾಗುವುದು ಮತ್ತು ಸೀಮೆಯನ್ನು ದಾಟಿ ಇಡಿಯಾಗುವುದು ಕವಿ ತೋರಿದ ಸಮನ್ವಯದ ಹೊಸ ಮಾರ್ಗ ಎಂದೇ ಭಾವಿಸಬೇಕು.

ಅವರ 'ಒಂದೇ ಕರ್ನಾಟಕ' ಕವಿತೆಯು ಮೇಲ್ನೋಟದಲ್ಲಿ ಕನ್ನಡದ ಅಭಿಮಾನವನ್ನು 'ಅನ್ಯ'ದ ನಿರಾಕರಣೆಯ ಮೂಲಕ ಹೇಳುತ್ತಿರುವ ಒಂದು ತೀವ್ರವಾದಿ ಸ್ವರೂಪದ ಕವಿತೆ ಎಂದೆನ್ನಿಸುತ್ತದೆಯಾದರೂ ಅದರ ಆಳದಲ್ಲಿರುವುದು 'ಅನ್ಯ'ವಾಗಿಸುವ ಧ್ವನಿಯಲ್ಲ. 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ' ಎನ್ನುತ್ತಾರೆ. ಜಗದ ಏಳಿಗೆಗೆ ಕನ್ನಡ ಕಾರಣವಾಗುವುದಾದರೆ ಕನ್ನಡದ ಪ್ರವೃತ್ತಿ, ಕನ್ನಡದ ಶಕ್ತಿ ಅದೆಷ್ಟು ಉನ್ನತ ಸ್ವರೂಪದ್ದಿರಬೇಕು? 'ಕರ್ನಾಟಕ ಹಿತ–ವಿಹಿತವು ಕನ್ನಡ ಕುಲದಿಂದೇ' ಎನ್ನುವ ಕವಿಗೆ 'ಕನ್ನಡವೂ ಭಾರತವೂ, ಜಗವೆಲ್ಲವೂ ಒಂದೇ' ಎಂದೂ ಹೇಳುವುದಕ್ಕೆ ಸಾಧ್ಯವಾಗುತ್ತದೆ. ಇಲ್ಲಿ ಕನ್ನಡತನ ಭಾರತದಿಂದ ಅನ್ಯವಾಗುವುದಿಲ್ಲ, ಭಾರತ ಜಗತ್ತಿನಿಂದ ಅನ್ಯವಾಗುವುದಿಲ್ಲ. ಹಾಗಾಗಿ ನಾಡಿನ, ಕನ್ನಡತನದ ಗುರುತು ಭಾರತೀಯತ್ವಕ್ಕೆ, ಜಗತ್ತಿಗೆ ಅಪಾಯಕಾರಿಯಲ್ಲ ಎನ್ನುವುದೇ ಕವಿಯ ಆಶಯ. ತನಗೊಂದು ಬಲವಾದ ಗುರುತನ್ನು ಕಂಡುಕೊಂಡೂ ಆ ಗುರುತಿನಾಚೆಗೆ ಇರುವುದನ್ನೂ ಒಮ್ಮತದಿಂದ ಸ್ವೀಕಾರ ಮಾಡುವ ಬಗೆ ಗಮನಾರ್ಹವಾದುದು. ಇನ್ನೊಂದರಿಂದ ಪ್ರತ್ಯೇಕವಾಗಿರಬಹುದಾದ ತನ್ನ ಗುರುತನ್ನು ಹೊಂದಿಯೂ ತಾನು ಪ್ರತ್ಯೇಕವಾಗದೆ ತನ್ನ ಗುರುತಿನೊಂದಿಗೆ ಒಂದಾಗಿಯೇ ಇರುವುದನ್ನು ಈ ಕವಿತೆ ಸಾಧ್ಯವಾಗಿಸಿದೆ. ವಿವಿಧತೆಯನ್ನು ಅನ್ಯವಾಗಿಸದೆ, ಅನನ್ಯತೆಯ ಕುರುಹಾಗಿಸಿ ಅದನ್ನು ಕಾಣಿಸುತ್ತಾರೆ. ಅವರ 'ಕನ್ನಡ ಜೀವನ ಲಹರಿ' ಕವಿತೆಯಲ್ಲೂ ಕನ್ನಡ ಜೀವನ ಲಹರಿಯ ಹಲವು ಪ್ರವಾಹಗಳನ್ನು ತೋರಿಸುತ್ತಾ, ಅವುಗಳ ನಡುವೆ ತರತಮರಹಿತ ಸಂಬಂಧವು ಇರುವುದನ್ನು ಗುರುತಿಸುತ್ತಾರೆ.

" ಇದು ವೈಷ್ಣವ, ಇದು ಜೈನವು ಇದು ಶಾಕ್ತವು ಶೈವ
ಇದು ಜೀವನು ಇದು ಜೀವನ ಪುರುಷಾರ್ಥವು ದೈವ

ಒಮ್ಮುಖವಿದು ಹಲ ಮೊಗದೊಳು ತೋರುವ ತರತಮತೆ
ಇದು ನಿಮ್ಮದು ಇದು ನಮ್ಮದು ಇದು ಎಲ್ಲರ ಮಮತೆ" [೧೪]

(ಕನ್ನಡ ಜೀವನ ಲಹರಿ)

ಎನ್ನುವಾಗ ಇಲ್ಲಿನ ಜೀವ ಪ್ರವಾಹದ ವೈವಿಧ್ಯತೆಯ ಬಹುಸ್ತರಗಳನ್ನು ದರ್ಶಿಸುತ್ತಾರೆ. ವೈಷ್ಣವ, ಜೈನ, ಶಾಕ್ತ, ಶೈವ ಎನ್ನುವುದು ಕರ್ನಾಟಕ ಪರಂಪರೆಯ ಭಿನ್ನರೂಪಗಳು. ಇದು ಜೀವನೂ ಹೌದು, ಜೀವನವೂ ಹೌದು. ನಿಮ್ಮದು, ನಮ್ಮದು ಎನ್ನುವ ಸಂಗತಿಗಳು ಯಾರನ್ನೂ ವಿಭಜಿಸದೆ, ಎಲ್ಲರ ಮಮತೆಗೂ ಪಾತ್ರವಾಗುವಂತಿದೆ. ಇದು ಕನ್ನಡ ನೆಲದ ಗುಣವೂ ಹೌದು. ಎಲ್ಲವನ್ನು ಸ್ವೀಕಾರ ಯೋಗ್ಯವನ್ನಾಗಿಸುವ ಗುಣ ಇಲ್ಲಿನದು ಎನ್ನುವುದನ್ನು ಕವಿ ಎತ್ತರಿಸಿ ತೋರಿಸುತ್ತಾರೆ. ನಾಡಿನ ಈ ಸ್ವಭಾವ ವಿವಿಧ ಮತಪಂಥಗಳ, ವಿವಿಧ ಭಾಷೆಗಳ ನಡುವೆಯೂ ಐಕ್ಯವನ್ನು ಸಾರಿದೆ. 'ಎಲ್ಲೆ ಎಲ್ಲ ಆದಾತನಿಗೆ' ಕವಿತೆಯಲ್ಲಿ ಕನ್ನಡ ತಾಯಿಯು 'ಕನ್ನಡ ಭಾರತಿ'ಯಾಗಿ ಮಾಡಿಸಿಕೊಳ್ಳುವ ಆರತಿಯಲ್ಲಿ 'ಜಿನ ಮುಕ್ತಿ, ಶಿವಶಕ್ತಿ, ಹರಿಭಕ್ತಿ' ಯು ಸೇರಿದೆ. ನಾಡಿನ ಐಕ್ಯದ, ಸಮನ್ವಯದ ಶ್ರೇಷ್ಠ ರೂಪವಾಗಿ ಈ ಕಲ್ಪನೆ ಮೂಡಿದೆ. ಧಾರ್ಮಿಕ ಪಂಥದ ವೈವಿಧ್ಯತೆಯಷ್ಟೇ ಅಲ್ಲ. ಮುಂದುವರಿದು ಭಾಷಿಕ ವೈವಿಧ್ಯತೆಯನ್ನೂ ತನ್ನ ರೂಪವಾಗಿ ಕನ್ನಡ ಭಾರತಿ ಹೊಂದಿರುವುದನ್ನು ಚಿತ್ರಿಸುತ್ತಾರೆ.

"ವಿಶ್ವಂಭರ ಶ್ರುತಿ ಹಿಡಿ,ಮಾರುತಿಯಲು ವಿರಾಟ ಮೂರುತಿ ಮೆರೆಯುತಿರೆ
ಸೊಲಗನು, ಕೊಡಗನು, ತುಳುವನು, ಕೊಂಕಣ
ಮೂಡಲ ಪಡುವಲ ಬಡಗಣ ತೆಂಕಣ
ಕಳನೂ ಕುಳನೂ ಕನ್ನಡ ಕೊಂಕಣ
ಕಟ್ಟಲು ನೆರೆಯುತಿರೆ
ಅನಂತ ಸ್ವರಗಳು ಬೆರುಯುತಿರೆ
ದಿವ್ಯ ಕರ್ಮ ರೂಪಿಸು
ದಿವ್ಯವ ಆಲಾಪಿಸು" [೧೫] (ಎಲ್ಲೆ ಎಲ್ಲ ಆದಾತನಿಗೆ)

ಎನ್ನುವ ಸಾಲನ್ನು ನೋಡಿದಾಗ ಕನ್ನಡದ ಮೂಲಕ ಕಟ್ಟುವುದಕ್ಕೆ ಹೊರಟ ನಾಡಿನ ಸ್ವರೂಪದ ಅರಿವಾಗುತ್ತದೆ. ಕನ್ನಡ ನಾಡು ಅದು ಭಾರತ ರೂಪಿಯೇ ಆಗಿದೆ. 'ಕಟ್ಟಲು ನೆರೆಯುತಿರೆ ಅನಂತ ಸ್ವರಗಳು ಬೆರುಯುತಿರೆ' ಎಂಬ ಮಾತು

ಕವಿಯು ಬಹುತ್ವವನ್ನು ಗೌರವಿಸಿದ ಉನ್ನತ ಮಾದರಿ ಎಂದೆ ಭಾವಿಸಬೇಕು. ನಾಡು ಒಂದಾಗಬೇಕಾಗಿರುವುದು ಯಾವ ನೆಲೆಗಟ್ಟಿನಲ್ಲಿ? ಎಂಬ ಪ್ರಶ್ನೆಗೆ ಕವಿ ಇಲ್ಲಿ ಮುಖಾಮುಖಿಯಾಗಿದ್ದಾರೆ. ಏಕರೂಪೀಕರಣದ ಮಾದರಿ ಇದಲ್ಲ ಎನ್ನುವ ಎಚ್ಚರದಲ್ಲಿ ಮಾತ್ರ 'ಅನಂತ ಸ್ವರಗಳು ಬೆರುಯುತಿರೆ' ಎಂಬ ಸಾಲು ಹುಟ್ಟಬಹುದು. ಒಂದಲ್ಲದ ಅನಂತ ಸ್ವರಗಳು ಈ ನಾಡು ಎಂಬ ಭಾವ ಕವಿ ಪ್ರಜ್ಞೆಯ ದೃಷ್ಟಿ ಧೋರಣೆಯ ಸಾಕ್ಷಿ. ಈ ಅನಂತ ಸ್ವರದಲ್ಲಿ ಕನ್ನಡ, ತುಳು, ಕೊಂಕಣಿ, ಕೊಡವ ಸೇರಿಕೊಳ್ಳುತ್ತದೆ. ದುಡಿಯುವ ಜನವರ್ಗವೂ ಸೇರಿಕೊಳ್ಳುತ್ತದೆ. ಆ ಮೂಲಕ ಎಲ್ಲಾ ಧ್ವನಿಗಳು ಕೂಡುವ ನಾಡನ್ನು ಮುಂದಿಡುತ್ತಾರೆ. ವೈಚಾರಿಕವಾಗಿ ನಾಡನ್ನು ಗ್ರಹಿಸುವ ಸೂಕ್ಷ್ಮ ಸಂವೇದನೆ ಇಲ್ಲಿದೆ. ಬಹುಸ್ವರದ, ಬಹುಧ್ವನಿಯ ಬಹು ಶ್ರುತಿಯ ನಾಡನ್ನು ಕಟ್ಟಲು ಹೊರಟ ಕವಿಗೆ ಕನ್ನಡ ತಾಯಿ, ಸಿರಿಗನ್ನಡ ಭಾರತಿಯಾಗಿ ಮಾನವತೆಯ ಹೊಸ ರೂಪವಾಗಿ ಗೋಚರಿಸುತ್ತಾಳೆ. ಸಾಂಸ್ಕೃತಿಕವಾಗಿ ಶ್ರೀಮಂತವಾದ ಕರ್ನಾಟಕದ ಸ್ವರೂಪವಿದು. ಕರ್ನಾಟಕ ಎಂದಾಗ ಅದರೊಳಗಿನ ಜನಭಾಷೆಯ ವೈವಿಧ್ಯತೆಗೆ ನಾಶವಿಲ್ಲ. ಜನಪದವನ್ನು ಒಳಗೊಂಡ ನಾಡಾಗಿಯೇ ಮುಂದುವರಿಯುವ ಆಶಯದ ಕಾರಣದಿಂದ ಈ ಬಹುದ್ವನಿಗಳು, ಬಹುಶ್ರುತಿಗಳು ನಾಡಿನ ಸಹಜ ಭಾಗವೇ ಆಗಿ ಉಳಿಯುತ್ತದೆ. 'ನನ್ನದು ಈ ಕನ್ನಡ ನಾಡು' ಕವಿತೆಯೂ ಕೂಡ ಇದೆ ಭಾವವನ್ನು ಸ್ಫುರಿಸುತ್ತದೆ.

"ಎಲ್ಲದರ ಹಿಂದೆ ಆ ಸೋತ್ರ ಒಂದೆ
ಭೂ ಭುವನ ತಂದೆ ಕವಿಚೈತ್ರಾ ನೋಡಿದಾ
ಬಹುರಾಗಿವಾಗಿ ಅನುರಾಗ ಮಾಗಿ
ಮಧು ಭಕ್ತಿಗಾಗಿ ದಾಸಾರ್ಯಾ ಹಾಡಿದಾ'
ಎನ್ನುವ ಸಾಲಾಗಲೀ,

' ಮಲೆಯಾಳ ಮಂದ್ರ, ದ್ರಾವಿಡವು ಸಾಂದ್ರ
ಮಾರಾಷ್ಟ್ರ ಆಂಧ್ರ ಸುತ್ತೂ ಮುತ್ತಲೂ
ಇಗೋ ನಡುವಿನ ಕನ್ನಡ ನಾಡುSS ನನ್ನದು" [೧೬] (ನನ್ನದು ಈ ಕನ್ನಡ ನಾಡು)

ಎಂಬ ಸಾಲುಗಳು ಇದಕ್ಕೆ ಪೂರಕವಾಗಿದೆ. ಬಹುತ್ವದ, ಬಹುರಾಗದ ಹಿಂದೆ ಒಂದು ಸಾಮಾನ್ಯ ಸೂತ್ರ ಇದೆ ಎನ್ನುವ ಕವಿ ಸುತ್ತಲಿನ ಹಲವು

ಭಾಷಿಕ ನಾಡುಗಳ ನಡುವೆ ನನ್ನ ಈ ಕನ್ನಡ ನಾಡು ಕೂಡ ಒಂದು ಸಾಮಾನ್ಯ ಸೂತ್ರಕ್ಕೆ ಒಳಪಟ್ಟು ನಿಂತಿದೆ ಎನ್ನುತ್ತಾರೆ. ಹಾಗಾಗಿ ಅನ್ಯ ಭಾಷಿಕ ನಾಡಿನ ನಡುವೆ ಕನ್ನಡದ ಅಸ್ತಿತ್ವದ ಪ್ರಶ್ನೆ ಆತಂಕದ್ದಲ್ಲ, ಅಪಾಯಕಾರಿಯೂ ಅಲ್ಲ ಎಂಬ ಭಾವ ಇದೆ. ಸರ್ವ ಪಂಥಗಳ – ಮತಗಳಿಂದ ಸಮನ್ವಿತವಾದ ಸಾಮರಸ್ಯದ ಕನ್ನಡ ನಾಡನ್ನು ಕಾಣುವ ಅಪೇಕ್ಷೆ ಹೊಂದಿದವರಾಗಿದ್ದು ಇದೇ ಆಶಯ ಅವರ ಕವಿತೆಗಳಲ್ಲಿ ಕಾಣುತ್ತಿದೆ. ವೈವಿಧ್ಯತೆಯ ಒಳಗಿರುವ ಪ್ರತಿಯೊಂದೂ ಅನನ್ಯವೇ ಎಂಬ ತಿಳುವಳಿಕೆಗೆ ಕಾರಣವಾಗಿರುವುದು ಒಂದು ಸೂತ್ರಕ್ಕೆ ಒಳಪಟ್ಟದ್ದು ಎಂಬ ಭಾವ. 'ಭಾವವೇ ಹೂತು, ಭಾವವೇ ನೂತು, ಮಾಲೆಯಾತು' ಎನ್ನುತ್ತಾರೆ. ಎಲ್ಲದರ ಹಿಂದಿರುವುದು ಏಕಭಾವ. ಆ ಭಾವವೇ ಬೆಸೆದ ಸ್ಥಿತಿಯಲ್ಲಿ ಒಂದು ಮಾಲೆಯಾಯಿತು. ಅವರ 'ಇದು ನಭೋವಾಣಿ' ಕವಿತೆಯು ಕೂಡ ಕನ್ನಡ ಎನ್ನುವುದು ಜೀವ ಜಗತ್ತಿನ ಜೊತೆಗೆ ಹೇಗೆ ಒಂದಾಗಿದೆ, ಬೆಸೆದಿದೆ ಎನ್ನುವುದನ್ನೇ ಹೇಳುತ್ತಿದೆ.

> "ಕನ್ನಡದ ಹಾಗೆ ಕೇಳಿಸಬಹುದು ಈ ಮಾತು
> ಆದರೂ ಇದು ಮಾನವ್ಯ ಜೀವದಿಂ ಜೀವಕ್ಕೆ
> ಕಟ್ಟಿದ ಸೇತು ಬಾಂಧವ್ಯ ಜಾತ ಜೀವಾತು" [೧೭] (ಇದು ನಭೋವಾಣಿ)

ಎನ್ನುತ್ತಾರೆ. ಭಾಷೆ ಜೀವ ಸಂಜೀವಿನಿ. ಭಾಷೆಯೇ ವಿಶ್ವಪ್ರಜ್ಞೆಯನ್ನು ಬಿತ್ತುವುದು ಕೂಡ. ಹಾಗಾಗಿಯೇ ಇದು 'ಮಾನವ್ಯ ಜೀವದಿಂ ಜೀವಕ್ಕೆ ಕಟ್ಟಿದ ಸೇತು' ಆಗುತ್ತದೆ. ಭಾಂಧವ್ಯ ಬೆಸೆವ ಸಂಕೇತವಾಗುತ್ತದೆ. 'ಕನ್ನಡದ ಹಾಗೆ ಕೇಳಿಸಬಹುದು' ಎನ್ನುವ ಮಾತನ್ನು ಗಮನಿಸಿದರೆ, ಕನ್ನಡ ನಾಡೊಳಗೆ ಇದು ಕನ್ನಡವಾದಂತೆ, ಇದರಾಚೆಗೆ ತಮಿಳೊ, ತೆಲುಗೋ, ಮರಾಟಿಯೂ ಕೂಡ ಆಗಬಹುದು. ಆದರೆ ಅವುಗಳ ನಡುವೆ ಸಂಘರ್ಷ ಇರಲಾರದು. ಯಾಕೆಂದರೆ ಇದು 'ಜೀವದಿಂ ಜೀವಕ್ಕೆ ಕಟ್ಟಿದ ಸೇತು' ಎಂಬ ಪ್ರಜ್ಞೆ ಕನ್ನಡ ಭಾಷೆಯ ಒಳಗೆ ಇದೆ. ಈ ಕಾರಣದಿಂದ ಕನ್ನಡಿಗರ ಕನ್ನಡ ಪ್ರಜ್ಞೆ, ಕರ್ನಾಟಕ ಪ್ರಜ್ಞೆ, ಭಾರತೀಯ ರಾಷ್ಟ್ರ ಪ್ರಜ್ಞೆಗೋ ವಿಶ್ವಪ್ರಜ್ಞೆಗೋ ಅಪಾಯಕಾರಿಯೂ ಅಲ್ಲ, ಆತಂಕಕಾರಿಯೂ ಅಲ್ಲ. ಕೇಳುವ ಸೂತ್ರ ಸರಿ ಇದ್ದು ಹೃದಯ ತೆರೆದಿದ್ದರೆ ಇಲ್ಲಿ ಭಾಷಾ ಪ್ರಜ್ಞೆಯೋ, ರಾಷ್ಟ್ರಪ್ರಜ್ಞೆಯೋ ಸಂಕುಚಿತ ಭಾವವಾಗಿ, ಭಾಷಾಂಧತೆಯಾಗಿ ಬದಲಾಗುವುದಿಲ್ಲ. ಕವಿ ಕೊಟ್ಟ ಸೂತ್ರ ಸಾರ್ವಕಾಲಿಕ ಮಾನವತೆಯ ಸೂತ್ರವಾಗಿದೆ. ೧೯೭೦ರಲ್ಲಿ ಬರೆದ ಈ ಕವನಕ್ಕೆ ಆ ಕಾಲದ

ಸಾಮಾಜಿಕ, ರಾಜಕೀಯ ಸನ್ನಿವೇಶಗಳನ್ನು ಹಿನ್ನೆಲೆಯಾಗಿ ನೋಡಿದರೆ ಮಹತ್ವ ಅರ್ಥವಾಗುತ್ತದೆ. ಭಾಷಾವಾರು ಪ್ರಾಂತಗಳ ರಚನೆಯ ಕಾರಣದಿಂದ ಉಂಟಾದ ವೈಮನಸ್ಸುಗಳು ದೇಶಾದ್ಯಂತ ಕಂಡು ಬರುತ್ತಿತ್ತು. ಭಾಷಾಂಧತೆಯ ಕಾರಣದಿಂದ ಸಂಘರ್ಷಗಳು ಹುಟ್ಟುಕೊಂಡಿತ್ತು. ಇಂತಹ ಸಂದರ್ಭದಲ್ಲಿ ಕನ್ನಡದ ಕವಿಯೊಬ್ಬ ಎಲ್ಲ ಭಾಷೆಗಳನ್ನೂ ಒಳಗೊಳ್ಳಬಹುದಾದ ಧ್ವನಿಯಲ್ಲಿ ತನ್ನ ಕನ್ನಡ ಭಾಷೆಯನ್ನು ಕುರಿತು ಕಟ್ಟಿದ ಕವಿತೆಯಲ್ಲಿ ಅನ್ಯ ದ್ವೇಷದ ಲವಲೇಶವೂ ಇಲ್ಲವಾಗಿ ಮಾನವೀಯತೆ ಕಾರಣವಾಗಿ ಕಟ್ಟಿದ ಬಾಂಧವ್ಯ ಸೇತು ಎಂದು ಹೇಳುತ್ತಾರೆ. ಕನ್ನಡದ ವಿಶ್ವಪ್ರಜ್ಞೆ ಕನ್ನಡ ಕವಿತೆಯಲ್ಲಿ ಈ ರೂಪದಲ್ಲಿ ಪ್ರಕಟವಾದದ್ದು ಕವಿಯು ಆ ಪ್ರಜ್ಞೆಯೊಂದಿಗೆ ಮಾಡಿಕೊಂಡ ಅನುಸಂಧಾನದಿಂದ ಸಾಧ್ಯವಾದದ್ದು.

ಬೇಂದ್ರೆಯವರ 'ಚೇತನ' ಕವಿತೆಯು ಪರಂಪರೆಯೊಂದಿಗೆ ಮುಖಾಮುಖಿಯಾಗುತ್ತಾ, ಭಾರತೀಯ ಸಂತಾನವಾದ ಅವತಾರ ಮಾಲೆಗಳ ಜೊತೆಗೆ ಸಂಧಿಸುತ್ತಾರೆ. ಪುರಾತನ ಎನ್ನುವುದು ಕವಿಗೆ ಚಿರ ನೂತನವಾಗಿ ಕಾಣುತ್ತದೆ. ಅದೇ ಭಾರತಮಾತೆಯ ಚೇತನವಾಗಿ ಗೋಚರಿಸುತ್ತದೆ. ರಾಮಕೃಷ್ಣ ಪರಮಹಂಸ, ಮಹಾವೀರ, ಬುದ್ಧ, ಶ್ರೀ ಅರವಿಂದ, ಗಾಂಧೀಯವರಲ್ಲಿ ಆ ಚೇತನವನ್ನು ಕಾಣುತ್ತಾರೆ. ಇವರುಗಳ ಹುಟ್ಟಿನಿಂದ ಜಡಗೊಂಡ ಶಾಸ್ತ್ರಗಳು ಹೊಸ ಚೈತನ್ಯವನ್ನು ಪಡೆದವು.

"ಭಾರತ ಮಾತೆಯ ಚೇತನ
ಸಾರುತಿಹುದು ಸಹಜೀವನ
ಪುರಾತನದ ನವನೂತನ"

ಎನ್ನುವ ಕವಿ ಭಾರತದ ನಿಜವಾದ ಚೇತನ ಸಹಜೀವನದಲ್ಲಿದೆ, ಸಹಜೀವನವೇ ಇಲ್ಲಿನ ಸಹಜ ಮಂತ್ರವಾಗಿದೆ ಎನ್ನುತ್ತಾರೆ. ಈ ಸಹಜೀವನ ರಾಷ್ಟ್ರದೊಳಗಿನ ಸಮಸ್ತರೊಂದಿಗೂ ನಡೆದಾಗ, ಆ ಮೂಲಕ ಸಮಾನತೆ ನೆಲೆಸಲು ಸಾಧ್ಯ ಎನ್ನುವ ಭಾವ ಇಲ್ಲಿದೆ.

### ೫.೪ ಬಿ.ಎಂ.ಶ್ರೀ ಕವಿತೆಗಳಲ್ಲಿ ಸಮನ್ವಯ ಭಾವ:

ಬಿ.ಎಂ.ಶ್ರೀಯವರು ಮೈಸೂರಿನ ಪ್ರಭುತ್ವದೊಂದಿಗೆ ಬಹಳ ನಿಕಟವಾದ ಸಂಬಂಧವನ್ನು ಇಟ್ಟುಕೊಂಡು ಅದನ್ನು ಬೆಳೆಸಿಕೊಂಡವರು. ಹೀಗಾಗಿ ಅವರನ್ನು ಅರ್ಥೈಸಿಕೊಳ್ಳುವುದು ಕುವೆಂಪು, ಬೇಂದ್ರೆಯವರನ್ನು ಅರ್ಥೈಸಿ ಕೊಳ್ಳುವ ಬಗೆಗಿಂತ ಭಿನ್ನವಾಗಿಯೇ ಪ್ರಯತ್ನಿಸಬೇಕು. ಶ್ರೀಯವರು ವಸಾಹತು ಪ್ರಭುತ್ವದ ಕೊಡುಗೆಯಾದ ಇಂಗ್ಲಿಷ್‌ನ ಜೊತೆಗೂ, ಮೈಸೂರು ಒಡೆಯರ ಜೊತೆಗೂ ಸಖ್ಯ ಹೊಂದಿದವರಾಗಿದ್ದರು. ಈ ಅರ್ಥದಲ್ಲಿ ಶ್ರೀಯವರ ಸಮನ್ವಯ ಪ್ರಜ್ಞೆಯನ್ನು ಹೇಗೆ ಗುರುತಿಸುವುದು? ಎಂಬ ಪ್ರಶ್ನೆಯೂ ಎದುರಾಗುತ್ತದೆ. "ಶ್ರೀಯವರು ಇಂಗ್ಲಿಷ್ ಜತೆ, ತನ್ಮೂಲಕ ವಸಾಹತುಶಾಹಿಯೊಡನೆ ಕನ್ನಡವನ್ನು ಇಟ್ಟು ನಡೆಸಿದ ಅನುಸಂಧಾನದ ಕ್ರಮದಲ್ಲಿ ಎರಡು ವಿಭಿನ್ನ ಸಂಸ್ಕೃತಿಗಳನ್ನು ಬೆಸುಗೆ ಹಾಕುವ, ಒಂದರಲ್ಲಿ ಇನ್ನೊಂದನ್ನು ಆವಿರ್ಭವಿಸುವ ಪ್ರಕ್ರಿಯೆ ಮೇಲುನೋಟಕ್ಕೆ ಎದ್ದು ಕಾಣುತ್ತದೆ. ತಮ್ಮ ಇಂಗ್ಲಿಷ್ ಗೀತಗಳನ್ನು ಅವರು 'ಯಾರು ಭಾರತ ಆಂಗ್ಲದೇಶಗಳ ಆತ್ಮ ಸಮ್ಮಿಲನದಲ್ಲಿ ನಂಬುವವರೋ ಅವರಿಗೆ ಅರ್ಪಿಸಿದ್ದಾರೆ. ಇಂಗ್ಲಿಷ್ ಭಾಷೆ ಕನ್ನಡ ನುಡಿ ಎಂಬ 'ಇಬ್ಬರು ಇನಿಯರ ನಡುವಿನ ಸರಸದ ವಿಲಾಸ' ಎಂದೂ ಹೇಳಿಕೊಂಡಿದ್ದಾರೆ"[೧೮] ಎಂಬ ವಿ.ಎಸ್. ಶ್ರೀಧರ್ ಅವರ ಮಾತು ಶ್ರೀಯವರ ಸಮನ್ವಯ ಪ್ರಜ್ಞೆಯನ್ನು ಕುರಿತು ಹೇಳುತ್ತಿದೆ. ಅವರ 'ಕಾಣಿಕೆ' ಕವನ ಕನ್ನಡ– ಇಂಗ್ಲಿಷ್‌ಗಳ ನಡುವಿನ ಸಮನ್ವಯದ ಹೊಸ ಪರಿಕಲ್ಪನೆಯೊಂದನ್ನು ಮುಂದಿಡುತ್ತದೆ.

"ಇನಿಯ ರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ" [೧೯] (ಕಾಣಿಕೆ)

ಎನ್ನುತ್ತಾರೆ. ಇಲ್ಲಿ ಬಳಸಲಾದ 'ಇವಳು' ಮತ್ತು 'ಅವಳು' ಕನ್ನಡ ಮತ್ತು ಇಂಗ್ಲೀಷನ್ನು ಸಂಬೋಧಿಸುತ್ತದೆ. ಇಲ್ಲಿ ಈ ಎರಡು ಭಾಷೆಗಳ ನಡುವೆ ಒಂದು ಬಗೆಯ ನಂಟನ್ನು ಬೆಸೆಯಲಾಗುತ್ತಿದೆ. ಪರಕೀಯ ಭಾಷೆಯೊಂದಿಗೆ ಕನ್ನಡಕ್ಕೆ ಸಂಘರ್ಷ ಬೇಡ, ಪರಸ್ಪರರ ತೊಡುಗೆಗಳನ್ನು ಬದಲಿಸಿಕೊಳ್ಳುವ ಮೂಲಕ ಹೊಸ

ರೂಪದಲ್ಲಿ ಕಾಣಿಸುತ್ತಾರೆ. ಇಲ್ಲಿ ಒಂದರ ಸಂಬಂಧ ಇನ್ನೊಂದಕ್ಕೆ ಧಕ್ಕೆಯಾಗದಂತೆ ಮತ್ತು ಆ ಸಂಬಂಧ ಭಾಷೆಯ ಹೊಸತನಕ್ಕೆ ಪೂರಕವಾಗುವಂತಿದೆ ಎನ್ನುವುದನ್ನು ಗಮನಿಸಬೇಕು. ಶ್ರೀಯವರ 'ಇಂಗ್ಲಿಷ್ ಗೀತಗಳು' ಸಂಕಲನವೇ ಅವರ ಕನ್ನಡವು ಇಂಗ್ಲಿಷ್ ಜೊತೆಗೆ ಸಾಧಿಸುತ್ತಿರುವ ಸಮನ್ವಯದ ಸಂಕೇತವಾಗಿದೆ. ಅವರ 'ಶ್ರೀ ಕೃಷ್ಣರಾಜ ರಜತೋತ್ಸವ ಪ್ರಗಾಥ'ದಲ್ಲಿ ಕೂಡ ಇದೇ ಅಂಶವನ್ನು ಕಾಣಬಹುದಾಗಿದೆ.

"ಆವ ದೇವಿಯರಿವರು ಮೂವರು? ಕನ್ನಡದ ಸಿರಿಯೊಬ್ಬಳು
ಅಕ್ಕ ತಂಗಿಯರಂತೆ ತಬ್ಬುತ ಕಡಲ ರಾಣಿಯದೊಬ್ಬಳು
ಶ್ರೀ ಭರತಮಾತೆಯದೊಬ್ಬಳು" [೨೦]

(ಶ್ರೀ ಕೃಷ್ಣರಾಜ ರಜತೋತ್ಸವ ಪ್ರಗಾಥ)

ಎನ್ನುವ ಮೂಲಕ ಮೂರು ಕೇಂದ್ರಗಳ ಜೊತೆಗೆ ಮೈತ್ರಿಯನ್ನು ಬೆಸೆಯುತ್ತಾರೆ. ಆ ಮೂರು ಕೇಂದ್ರಗಳೆಂದರೆ, ಕನ್ನಡ ನಾಡು, ಭರತಖಂಡ ಹಾಗೂ ಇವೆರಡರ ಮೇಲೂ ಅಧಿಕಾರ ಹೊಂದಿದ ಬ್ರಿಟನ್ ರಾಣಿ. ಇವರ ನಡುವಿನ ಸಂಬಂಧದ ಸ್ವರೂಪ ಅಕ್ಕ ತಂಗಿಯರದ್ದು. ಈ ಮೊದಲಿನ ಕವಿತೆಯಲ್ಲಿ 'ಇನಿಯರು' ಎಂದಿದ್ದ ಸಂಬಂಧವು ಇಲ್ಲಿ 'ಅಕ್ಕ ತಂಗಿಯರು' ಎಂದಾಗುತ್ತದೆ. ಹಾಗಾಗಿ ಇವರುಗಳ ನಡುವೆ ಜಗಳ ಸಂಘರ್ಷದ ಕಾರಣಗಳಿಲ್ಲ. ಒಬ್ಬರು ಇನ್ನೊಬ್ಬರ ಏಳಿಗೆಗೆ ಪೂರಕ. ವಸಾಹತುಶಾಹಿಯು ಇಲ್ಲಿ ಅಪಾಯಕಾರಿಯಾಗಿಯೋ, ಕನ್ನಡದ, ಭರತಖಂಡದ ನಿಗ್ರಹಾತ್ಮಕ ಶಕ್ತಿಯಾಗಿಯೋ ಕಾಣಿಸುವುದಿಲ್ಲ. ಪರಸ್ಪರರ ಸಖ್ಯದಿಂದ ಪರಸ್ಪರರ ಸಂಬಂಧ ಬೆಳೆಯುತ್ತಾ, ಒಬ್ಬರ ಇರುವಿಕೆ ಇನ್ನೊಬ್ಬರಿಗೆ ಯಾವುದೇ ಬಗೆಯಲ್ಲೂ ಅಪಾಯಕಾರಿಯಾಗದಂಥ ಒಂದು ಮನೋಭಾವ ಇಲ್ಲಿದೆ. ಅವರು ಮತ್ತೆ ಮತ್ತೆ ಪೂರ್ವ- ಪಶ್ಚಿಮಗಳ ಸಂಬಂಧವನ್ನು ಅನುಸಂಧಾನದ ಹೊಸ ಮಾರ್ಗವೆಂದೇ ಭಾವಿಸಿದ್ದರು. ಹಾಗಾಗಿ 'ಭರತಮಾತೆಯ ನುಡಿ' ಕವನ ಭರತಮಾತೆಯ ಕೊರಗನ್ನು ವಿಷಾದದ ಧ್ವನಿಯಲ್ಲಿ ಚಿತ್ರಿಸುತ್ತಲೇ, ಅವರು ಹೀಗೆ ಹೇಳುತ್ತಾರೆ.

"ಕಡಲ ರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು

ಗೆಲಿದು ನಾಡನು ಬೆಸೆದಳು- ನೆಲ

ದೊಲುಮೆ ಕಟ್ಟನು ಹೊಸೆದಳು" ಎಂಬ ಸಾಲುಗಳಿವೆ.

ಈ ಸಾಲುಗಳು ರಾಜಕೀಯ ಉದ್ದೇಶವನ್ನು ಹೇಳುವುದಕ್ಕಿಂತಲೂ ಮುಖ್ಯವಾಗಿ ಒಂದು ಬಗೆಯ ಸಾಂಸ್ಕೃತಿಕ ಮಹತ್ವವನ್ನು ಹೊಂದಿವೆ. ವಸಾಹತುಶಾಹಿಯ ಇರುವಿಕೆಯನ್ನು ಆತಂಕಕಾರಿಯಾಗಿ ನೋಡದೆ ಇರುವುದು ಇಲ್ಲಿ ವಿಶೇಷ. ದೇಶದೆಲ್ಲೆಡೆ ಬ್ರಿಟಿಷರ ವಿರುದ್ಧ ತೀವ್ರ ಸ್ವರೂಪದ ಪ್ರತಿಭಟನೆ ವ್ಯಕ್ತವಾಗುತ್ತಿದ್ದಾಗ, ಶ್ರೀಯವರು ವಸಾಹತುಶಾಹಿಯೊಂದಿಗೆ ಸಂಬಂಧವನ್ನು ಸಾಧಿಸಲು ಯತ್ನಿಸಿದ ಈ ಕ್ರಮ ಅಚ್ಚರಿಯನ್ನುಂಟು ಮಾಡುವುದು ಸಹಜ. ವಸಾಹತು ಪ್ರಭುತ್ವದೊಂದಿಗೆ ಸಾಧಿಸುವ ಈ ಸಖ್ಯ ಪೂರ್ವದ ನಾಡೊಂದು ಪಶ್ಚಿಮದೊಂದಿಗೆ ಪಡೆಯುತ್ತಿರುವ ಸಖ್ಯದ ಗುರುತು. ಪೂರ್ವವನ್ನು ಉದ್ಧರಿಸಬಲ್ಲವರು ಎಂಬ ಪೂಜ್ಯತೆಯ ಮನೋಭಾವ ಕಾಣದಿದ್ದರು ಪೂರ್ವಕ್ಕೆ ಪಶ್ಚಿಮದ ಜೊತೆಗಿನ ನಂಟು ಅಗತ್ಯ ಎನ್ನುವುದನ್ನು ಸ್ಪಷ್ಟವಾಗಿ ಭಾವಿಸಿದ್ದರು.

ಪರಂಪರೆಯೊಂದಿಗೂ ಶ್ರೀಯವರು ಬೆಸೆದ ನಂಟು ಗಮನಾರ್ಹ ಸಂಗತಿಯಾಗಿದೆ. ಅವರ 'ಪಂಪನ ಒರತೆ' ಕವನವನ್ನು ಇಲ್ಲಿ ಗಮನಿಸಬಹುದು. ಪಂಪನಲ್ಲಿ ಅವರು ಕನ್ನಡದ ಪರಂಪರೆಯನ್ನು, ಪ್ರಾಚೀನತೆಯನ್ನು, ಹಿರಿತನವನ್ನು ಕಾಣುತ್ತಾರೆ. ವರ್ತಮಾನದ ಛಿದ್ರಗೊಂಡ ಕನ್ನಡ ನಾಡನ್ನು ಈ ಸ್ಥಿತಿಯಿಂದ ಪಾರು ಮಾಡಬೇಕಾದರೆ ಅದಕ್ಕೆ ಪಂಪನಿಂದ ಸ್ಫೂರ್ತಿಯನ್ನು ಪಡೆಯುತ್ತಾರೆ ಆ ಸ್ಫೂರ್ತಿಯಿಂದ ಹುಟ್ಟಿದ ಸಾಲುಗಳು ಹೀಗಿದೆ.

" ಪೞೆಯ ಕರ್ನಾಟಕಂ ಮತ್ತೊರ್ಮೆ ಕಟ್ಟುಗೆ !  
ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ!  
ಪಿರಿಯತನಮನ ಮಱೆತ ಕಿಱು ಮಕ್ಕಳನ್ ಪರಸು  
ಪರಸು ನೀನೆಮ್ಮನ್ "[೨೧] (ಪಂಪನ ಒರತೆ)

ಮರೆತುಹೋದ ಗತ ಕರ್ನಾಟಕದ ನೆನಪನ್ನು ಅವರು ಪಂಪನ ಒರತೆಯಲ್ಲಿ ಮರಳಿ ಪಡೆಯಲು ಯತ್ನಿಸುತ್ತಾರೆ. ವರ್ತಮಾನಕ್ಕೆ ಪರಿಹಾರ ರೂಪವಾಗಿ ಪರಂಪರೆಯೊಂದಿಗೆ ಮುಖಾಮುಖಿಯಾಗುವ ಮೂಲಕ ಅವೆರಡರ ನಡುವೆ ಸಂಬಂಧವನ್ನು ಮರುಸ್ಥಾಪಿಸುತ್ತಾರೆ. ಮರೆಯಲಾರದ ಮಹಾ ಪರಂಪರೆಯಾಗಿ ಪಂಪನನ್ನು ಕಂಡು ಆಹ್ವಾನಿಸುತ್ತಾ, ಕನ್ನಡ ನಾಡನ್ನು ಕಟ್ಟುವ ತಮ್ಮ ಕಾರ್ಯಕ್ಕೆ ಹರಸು ಎನ್ನುತ್ತಾರೆ. ಅವರ 'ಭರತಮಾತೆಯ ನುಡಿ' ಕವನವೂ ಕೂಡ ಪರಂಪರೆ ಜೊತೆಗೆ

ಮಾಡುವ ಅನುಸಂಧಾನವಾಗಿಯೇ ಕಾಣುತ್ತದೆ. ಆ ಕವಿತೆ ಭಾರತದ ಪೂರ್ವ ಪರಂಪರೆಯಲ್ಲಿ ಘನತೆಯನ್ನು ಕಂಡು ಅದು ವರ್ತಮಾನದಲ್ಲಿ ಕಾಣೆಯಾಗಿರುವುದಕ್ಕಾಗಿ ವಿಷಾದವನ್ನು ಸೂಚಿಸುವ ಧ್ವನಿಯಲ್ಲಿದೆ. ಆ ಘನತೆಯನ್ನು ಮರಳಿ ಪಡೆಯುವುದಕ್ಕಾಗಿ ಕವಿ ಬಯಸುತ್ತಾರೆ.

"ಎಲ್ಲಿ ಧರ್ಮವ ಕಂಡು ಸಾರಿದ ನಿನ್ನ ಪೂರ್ವದ ಋಷಿಗಳು?
ಎಲ್ಲಿ ಘನತೆಯ ಬದುಕ ಹಾಡಿದ ನಿನ್ನ ಸತ್ವದ ಕವಿಗಳು?
ಎಲ್ಲಿ ಧರ್ಮದ ದಣಿಗಳು – ಅವ
ರೆಲ್ಲಿ ಜ್ಞಾನ ಕಣಿಗಳು ?" (ಭತಮಾತೆಯ ನುಡಿ) [೨೨]

ಎನ್ನುವ ಸಾಲುಗಳಲ್ಲಿ ಸಾಲು ಸಾಲು ಪ್ರಶ್ನೆಗಳಿವೆ. ಈ ಪ್ರಶ್ನೆಗಳಲ್ಲಿ ಕಾಣುವುದು ವಿಷಾದವೇ. ಧರ್ಮವನ್ನು ಕಂಡು ಸಾರಿದ ಋಷಿಗಳಿದ್ದರು, ಸತ್ವಯುತರಾದ ಕವಿಗಳಿದ್ದರು, ಜ್ಞಾನ ನಿಧಿಗಳೇ ಆಗಿದ್ದರು. ವರ್ತಮಾನ ಈ ಎಲ್ಲದರ ಕೊರತೆಯನ್ನು ಅನುಭವಿಸುತ್ತಿದೆ. ಹಾಗಾಗಿ ಮತ್ತೆ ಭರತಮಾತೆ ತಲೆ ಎತ್ತಿ ನಿಲ್ಲಬೇಕಾದರೆ ಈ ಎಲ್ಲದರ ನೆನಪಿನೊಂದಿಗೆ ಮತ್ತೆ ಮೇಲಕ್ಕೇಳಬೇಕಾಗಿದೆ ಎಂಬ ಧ್ವನಿ ಅಡಗಿದೆ. ಕಲೆಯನ್ನು ಬೆಳೆಸಿದವರ, ರಾಜ್ಯ ಕಟ್ಟಿದವರ, ವೀರರ ನೆನಪುಗಳೊಂದಿಗೆ ಭರತಮಾತೆ ಮೇಲೆದ್ದು ನಿಲ್ಲುವ ಭರವಸೆ ಕವಿಗಿದೆ.

ಪಶ್ಚಿಮದ ಜೊತೆಗೆ ಬೆಸೆದ ನಂಟಿನಂತೇ ಅವರು ಮೈಸೂರಿನ ರಾಜಮನೆತನದ ಬಗೆಗೂ ವಿಶೇಷವಾದ ಒಲವನ್ನು ಹೊಂದಿದ್ದರು. ಮೈಸೂರನ್ನು 'ಇಳೆಯ ಮಾದರಿ', 'ಕನ್ನಡಿಗನುಸಿರು' ಎಂದೆನ್ನುತ್ತಾ ನಾಲುಮಡಿ ಕೃಷ್ಣನನ್ನು ಸ್ತುತಿಸುತ್ತಾರೆ. ಜಯಚಾಮರಾಜನನ್ನು ಮೆಚ್ಚಿಕೊಳ್ಳುತ್ತಾರೆ. ಒಟ್ಟಾರೆಯಾಗಿ ರಾಜಪ್ರಭುತ್ವ ಮತ್ತು ಬ್ರಿಟಿಷ್ ಪ್ರಭುತ್ವಗಳ ನಡುವೆ ಶ್ರೀಯವರ ಕನ್ನಡ ಪ್ರಜ್ಞೆ ಮತ್ತು ರಾಷ್ಟ್ರ ಪ್ರಜ್ಞೆ ಅದ್ಭುತವಾದ ಬಗೆಯಲ್ಲಿ ಸಮನ್ವಯವನ್ನು ಸಾಧಿಸಿರುವುದನ್ನು ನೋಡಬಹುದು. ಅವರು ಯುರೋಪಿನ ಆಧುನಿಕತೆಯ ಜೊತೆ ಮಾಡಿಕೊಂಡ ಅನುಸಂಧಾನವೇ ಕನ್ನಡ ಕಾವ್ಯಕ್ಕೆ ಹೊಸ ಭಾಷೆ, ಲಯಗಾರಿಕೆ, ರೂಪಗಳನ್ನು ಶೋಧಿಸಿಕೊಟ್ಟು ಕನ್ನಡ ಭಾಷೆಯಲ್ಲಿ ಒಂದು ಹೊಸಬಗೆಯ ಸಂಚಲನೆಯನ್ನೆ ಮೂಡಿಸಿತು. ಆ ಮೂಲಕ ಕನ್ನಡವನ್ನು ಆವರಿಸಿದ್ದ ಜಡತೆಯಿಂದ ಬಿಡುಗಡೆಗೊಳಿಸುವ ಕೆಲಸವನ್ನು ಮಾಡಿದರು. ಅಲ್ಲದೆ ಹೊಸತನವನ್ನು ಆಹ್ವಾನಿಸುವ ಆಶಯ ಅವರಲ್ಲಿದೆ.

"ವಿವಿಧ ಭಾಷೆ, ಸಂಸ್ಕೃತಿಗಳ ಭಾರತವನ್ನು ಒಂದುಗೂಡಿಸಿ, ಪರಕೀಯರ ಆಳ್ವಿಕೆ ವಿರುದ್ಧ ಸಂಘಟಿಸಲು ಹವಣಿಸಿದರು. ಹಾಗೆಂದು ಏಕತ್ವಗೊಳಿಸುವ ಭರದಲ್ಲಿ ವೈವಿಧ್ಯತೆಯನ್ನು ಅವರು ಕಡೆಗಣಿಸಲಿಲ್ಲ. ಹಾಗೆ ಮಾಡುವುದು ಬಹುಮುಖಿ ಭಾರತಕ್ಕೆ ಆತ್ಮಹತ್ಯಾತ್ಮಕವೆಂದು ಕೆಲವು ರಾಷ್ಟ್ರೀಯ ನಾಯಕರಾದರೂ ಅರಿತಿದ್ದರು. ಆದ್ದರಿಂದಲೇ ದೇಶಿ ಭಾಷೆ- ಸಂಸ್ಕೃತಿ, ನಡೆ-ನುಡಿಗಳ ವಿಕಸನಕ್ಕೆ ಅವರು ಅವಕಾಶ ಮಾಡಿಕೊಟ್ಟು, 'ವೈವಿಧ್ಯತೆಯಲ್ಲಿ ಏಕತೆ' ಎಂಬುದನ್ನು ರಾಷ್ಟ್ರೀಯ ಚಳವಳಿಯ ಮೂಲ ಮಂತ್ರವನ್ನಾಗಿಸಿಕೊಂಡರು"[೨೩] ಎನ್ನುವ ಎಸ್. ಚಂದ್ರಶೇಖರ್ ಅವರ ಮಾತು ಕನ್ನಡದ ಕವಿಗಳು ವೈವಿಧ್ಯತೆಯ ನಡುವೆ ಸಮನ್ವಯತೆಯನ್ನು ಸಾಧಿಸಲು ಪ್ರಯತ್ನಿಸಿದ ಬಗೆಯನ್ನು ಹೇಳುತ್ತಿದೆ. ಈ ವೈವಿಧ್ಯತೆ ನಾಡಿನೊಳಗೆ, ಹೊರಗೆ, ನಾಡು- ರಾಷ್ಟ್ರಗಳ ನಡುವೆ ಜೀವಂತವಾಗಿತ್ತು. ಹೀಗೆ ಜೀವಂತವಾಗಿರುವ ವೈವಿಧ್ಯತೆಯು ರಾಷ್ಟ್ರದ ಬಿಡುಗಡೆಯ ಹೋರಾಟದಲ್ಲಾಗಲೀ, ನಾಡಿನ ಏಕೀಕರಣ ಚಳವಳಿಯಲ್ಲಾಗಲೀ ಮರೆಗೆ ಸರಿಯದೆ ಎಚ್ಚರವಾಗಿಯೇ ಉಳಿದಿತ್ತು. ಹೀಗೆ ಉಳಿಯುವುದಕ್ಕೆ ಕಾರಣವಾದದ್ದು ಇಲ್ಲಿನ ರಾಷ್ಟ್ರೀಯತ್ವ ಹೇಗೋ ಇಲ್ಲಿನ ಸಾಹಿತ್ಯ ಪರಂಪರೆಯೂ ಅಷ್ಟೇ ಕಾರಣವಾಗಿದೆ. ಈ ಬಗೆಯ ವೈವಿಧ್ಯತೆಯನ್ನು ಗುರುತಿಸಿ ಅವುಗಳನ್ನು ನಾಡಿನ ವೈಶಿಷ್ಟ್ಯವೆಂದು ಸಾರಿದ್ದು ಕೂಡ ಸಾಹಿತ್ಯವೇ. ಶ್ರೀಯವರ ' ಭರತಮಾತೆಯ ನುಡಿ' 'ಕನ್ನಡ ತಾಯ ನೋಟ' ಬೇಂದ್ರೆಯವರ 'ನರಬಲಿ' 'ಮಕ್ಕಳಿವರೇನಮ್ಮ' ಕುವೆಂಪು ಅವರ 'ಜೈ ಭಾರತ ಜನನಿಯ ತನುಜಾತೆ' ಮುಂತಾದ ಕವನಗಳು ಒಟ್ಟಿಗೆ ತಾಯಿ ಭಾರತಿ ಮತ್ತು ಕನ್ನಡಾಂಬೆಯನ್ನು ಸ್ತುತಿಸುತ್ತಾ, ರಾಷ್ಟ್ರೀಯತೆಯ ಮತ್ತು ಉಪರಾಷ್ಟ್ರೀಯತೆಯ ನಡುವೆ ಜಿಜ್ಞಾಸೆಯನ್ನು ಹುಟ್ಟುಹಾಕಿಸುತ್ತದೆ. ರಾಷ್ಟ್ರೀಯತೆ ಹಾಗೂ ಕನ್ನಡ ನಾಡಿನ ಕುರಿತು ಆ ಕಾಲಘಟ್ಟದಲ್ಲಿ ಬಂದ ಕಾವ್ಯಗಳು ಚಳವಳಿಯ ಪ್ರಚಾರ ಸಾಹಿತ್ಯವಾಗಿ ಬಂದುದಲ್ಲ. ಕವಿಯ ಪ್ರಜ್ಞೆಯನ್ನು ಕಾಡಿದ ಗಂಭೀರ ಸಂಗತಿಗಳು ಇದಾಗಿದ್ದವು.

ಕನ್ನಡದ ಕವಿಗಳು ಕರ್ನಾಟಕದ ಉನ್ನತಿಯಲ್ಲಿ ಕರ್ನಾಟಕ- ಭಾರತ- ವಿಶ್ವದ ಕಲ್ಯಾಣವಿದೆ ಎಂದು ನಂಬಿದ್ದರು. ಕರ್ನಾಟಕಾಂತರ್ಯಾಮಿ ಭಾರತ, ಭಾರತಾಂತರ್ಯಾಮಿ ವಿಶ್ವ ಇದೇ ನಿಜವಾದ ಕನ್ನಡದ ಚಿಂತನೆ ಎನ್ನುವುದು ಅವರ ಬಲವಾದ ನಂಬಿಕೆಯಾಗಿತ್ತು. ಕನ್ನಡ – ಕರ್ನಾಟಕದ ಮೂಲಕ ಸರ್ವತೋಮುಖ ಪ್ರಗತಿಯ ಆಶಯ ಅವರದ್ದಾಗಿತ್ತು. ಕನ್ನಡದ ಕವಿತೆಗಳ ಒಟ್ಟು ತಾತ್ವಿಕತೆಯು ನಾಡು-

ರಾಷ್ಟ್ರಗಳನ್ನು ಪರಸ್ಪರ ವಿರುದ್ಧವಲ್ಲದ ಸ್ವರೂಪದಲ್ಲಿ ತೋರಿಸಿರುವುದನ್ನು ಕಾಣಬಹುದು. ಒಂದು ಇನ್ನೊಂದಕ್ಕೆ ಪೂರಕ. ಒಂದರ ಇರುವಿಕೆ ಇನ್ನೊಂದರ ಅಸ್ತಿತ್ವವನ್ನು ಬಲಪಡಿಸುವಂತಹದು. ಹಾಗಾಗಿ ಮತ್ತೆ ಮತ್ತೆ 'ಜನನಿ' ಮತ್ತು 'ತನುಜಾತೆ'ಯ ಸಂಬಂಧದ ನೆಲೆ ಪ್ರಸ್ತಾಪಿತಗೊಳ್ಳುತ್ತದೆ. ಕವಿಗಳು ಇವೆರಡರ ನಡುವೆ ಸಮತೋಲನವನ್ನು ಸಾಧಿಸುವ ಕೆಲಸವನ್ನು ನಿರಂತರವಾಗಿ ಮಾಡಿದ್ದಾರೆ. ಅವರ ಹಲವು ಕವಿತೆಗಳಲ್ಲಿ ಈ ಸಮನ್ವಯದ ಧೋರಣೆಯನ್ನು ಗುರುತಿಸಲು ಸಾಧ್ಯವಿದೆ. ರಾಷ್ಟ್ರೀಯತೆ ಮತ್ತು ಕರ್ನಾಟಕತ್ವದ ನಡುವೆ ಯಾವ ಬಗೆಯಲ್ಲಿ ಸಂಬಂಧವನ್ನು ಹೊಂದಿದೆ ಎನ್ನುವುದರ ಕುರಿತು ಡಾ. ಸುರೇಶ್ ಪಾಟೀಲ ಅವರು ಹೀಗೆ ಹೇಳುತ್ತಾರೆ. "ನಮ್ಮ ನಾಡಿನಲ್ಲಿ ರಾಷ್ಟ್ರೀಯತೆ ಮತ್ತು ಕರ್ನಾಟಕತ್ವದ ಪರಿಕಲ್ಪನೆಗಳು ಜೊತೆ ಜೊತೆಯಲ್ಲಿ ಪರಸ್ಪರ ಪೂರಕವಾಗಿ ಪ್ರಕಟಗೊಂಡರೂ ಬ್ರಿಟಿಷರ ಆಳ್ವಿಕೆಯಲ್ಲಿ ಭಾರತವು ರಾಜಕೀಯ ಐಕ್ಯತೆಯನ್ನು ಸಾಧಿಸುವಂತಾಗಿ ತನ್ಮೂಲಕ ರಾಷ್ಟ್ರೀಯತೆಗೆ ಪ್ರಚೋದನೆ ಸಿಕ್ಕರೆ ಇಂಥ ರಾಜಕೀಯ ಐಕ್ಯತೆಯ ಅಭಾವವೇ ಒಂದು ಹಂತದವರೆಗೆ ಕರ್ನಾಟಕತ್ವದ ಚಿಂತನೆಗೆ ಒತ್ತು ಕೊಟ್ಟಿತು."[೨೪] ಪರಸ್ಪರ ಪೂರಕವಾಗಿ ಪ್ರಕಟಗೊಂಡದ್ದು ಮಾತ್ರವಲ್ಲದೆ ಐಕ್ಯತೆಯನ್ನು ಸಾಧಿಸುವುದಕ್ಕಾಗಿ ನಡೆದ ಹೋರಾಟವು ಹೇಗೆ ಏಕೀಕರಣಕ್ಕೂ ಕಾರಣವಾಯಿತು ಎನ್ನುವುದನ್ನು ಇಲ್ಲಿ ಗುರುತಿಸಿದ್ದಾರೆ. ಆಲೂರ ವೆಂಕಟರಾಯರೂ ಕೂಡ 'ರಾಷ್ಟ್ರೀಯತ್ವಕ್ಕೆ ವಿರುದ್ಧವಾದುದು ಕರ್ನಾಟಕತ್ವ ಅಲ್ಲ, ಕರ್ನಾಟಕತ್ವಕ್ಕೆ ವಿರುದ್ಧವಾದುದು ನಿಜವಾದ ರಾಷ್ಟ್ರೀಯತೆ ಅಲ್ಲ' ಎನ್ನುವುದರ ಮೂಲಕ ಇವುಗಳ ಸಂಬಂಧದ ಗಟ್ಟಿನೆಲೆಯನ್ನು ಗುರುತಿಸುತ್ತಾರೆ. ಆಲೂರರ ಚಿಂತನೆ ಇನ್ನೂ ಮುಂದುವರಿದು ಕರ್ನಾಟಕತ್ವ ಎನ್ನುವುದನ್ನು ಒಂದು ಕಿರಣ ಕೇಂದ್ರಿತ ಗಾಜಿನ (focusing lenses) ಕಲ್ಪನೆಯಲ್ಲಿ ಮುಂದಿಡುತ್ತಾರೆ. ಅವರ ಪ್ರಕಾರ ಈ "ಕರ್ನಾಟಕತ್ವವೆಂದರೆ ಕಿರಣ ಕೇಂದ್ರದ ಕಾಜು.ಅದರೊಳಗೆ ಭರತ ಭೂಮಿ ಮಾತ್ರವೇ ಏಕೆ ವಿಶ್ವವೇ ನಮಗೆ ಗೋಚರವಾಗುತ್ತದೆ. ವಿಶ್ವದ ಕಿರಣಗಳೂ, ಭಾರತದ ಕಿರಣಗಳೂ ನಮ್ಮ ಕರ್ನಾಟಕತ್ವದ ಕಾಜಿನಲ್ಲಿ ಅಂತರ್ಯಾಮಿಯಾಗಿದೆ"[೨೫] ಎನ್ನುವುದರ ಮೂಲಕ ಕನ್ನಡತನ ಮತ್ತು ಭಾರತೀಯತ್ವಕ್ಕೆ ಯಾವುದೇ ಭಿನ್ನತೆಗಳಿಲ್ಲ, ಅವುಗಳು ಆಂತರ್ಯದಲ್ಲಿ ಒಂದೇ ಎನ್ನುವ ವಿಶಾಲ ಕಲ್ಪನೆಯನ್ನು ಮಂಡಿಸುತ್ತಾರೆ.

ಒಟ್ಟಿನಲ್ಲಿ ಕನ್ನಡ ಕಾವ್ಯದ ಒಂದು ಪ್ರಧಾನ ಧಾರೆಯು ರಾಷ್ಟ್ರೀಯತೆ ಮತ್ತು ನಾಡಿನ ಪ್ರಜ್ಞೆಗೆ ತೀವ್ರವಾಗಿ ಸ್ಪಂದಿಸಿದೆ. ಒಂದು ಕಾಲಘಟ್ಟದ ಕನ್ನಡ ಕಾವ್ಯದ ಮುಖ್ಯ ಸಂವೇದನೆಯೇ ಈ ಎರಡು ಅಂಶಗಳಿಗೆ ತೋರಿದ ಸ್ಪಂದನೆಯಾಗಿದೆ. ಬೇರೊಂದು ಬಗೆಯಲ್ಲಿ ಹೇಳುವುದಾದರೆ ರಾಷ್ಟ್ರ ಮತ್ತು ನಾಡಿನ ಕುರಿತು ಕನ್ನಡ ಕಾವ್ಯ ಸ್ಪಂದಿಸಿದ ಬಗೆಯನ್ನು ಪರಿಶೀಲಿಸದೆ ಆ ಕಾಲಘಟ್ಟದ ಕನ್ನಡ ಕಾವ್ಯದ ಪೂರ್ಣ ಪ್ರಮಾಣದ ತಾತ್ವಿಕ ವಿಶ್ಲೇಷಣೆ ಸಾಧ್ಯವಿಲ್ಲ. ಕಾವ್ಯವು ತೋರಿದ ಈ ಬಗೆಗಿನ ಸ್ಪಂದನಕ್ಕೆ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಮಹತ್ವವಿದೆ. ವಸಾಹತುಶಾಹಿಯು ಪ್ರಭುತ್ವದ ರೂಪದಲ್ಲಿ ಇದ್ದುದು ಮತ್ತು ನಾಡು ಆಳ್ವಿಕೆಯ ಉದ್ದೇಶಕ್ಕಾಗಿ ಹಲವಾಗಿ ಒಡೆಯಲ್ಪಟ್ಟದ್ದು ಈ ಸಂವೇದನೆಯನ್ನು ಎಚ್ಚರಗೊಳಿಸಿದ ಮೂಲ ಸಂಗತಿಗಳು. ಕಾವ್ಯ ವಸಾಹತುಶಾಹಿಯ ರಾಜಕೀಯ ಆಯಾಮವನ್ನು ಮಾತ್ರ ಎದುರಿಸದೆ, ಅದಕ್ಕಿದ್ದ ಬಹು ಆಯಾಮಗಳನ್ನು ಎದುರಿಟ್ಟುಕೊಂಡು ಅದನ್ನು ಮುಖಾಮುಖಿಯಾಯಿತು. ಇದರ ಪರಿಣಾಮವಾಗಿಯೇ ಕನ್ನಡ ಕಾವ್ಯ ರಾಷ್ಟ್ರ ಮತ್ತು ನಾಡಿನ ಕುರಿತು ತೋರಿದ ಸ್ಪಂದನೆಯಲ್ಲೂ ವೈವಿಧ್ಯತೆಯಿದೆ. ವೈವಿಧ್ಯತೆಯು ಕೇವಲ ಭಾವನಾತ್ಮಕ ಘೋಷಣೆಯಾಗದೆ ಕನ್ನಡ ಕಾವ್ಯದ ಮುಖ್ಯ ವೈಚಾರಿಕ ಭಿತ್ತಿಯೇ ಆಗಿದೆ. ಹಾಗಾಗಿ ವೈವಿಧ್ಯತೆಯನ್ನು ಸಮಗ್ರತೆಯ ಮತ್ತು ಪೋಷಣೆಯ ನೆಲೆಯಲ್ಲಿ ಗ್ರಹಿಸಿ ಅದನ್ನು ತಾತ್ವಿಕವಾಗಿ ಬೆಳಿಸಿದ್ದು ಕಾವ್ಯವೇ ಎನ್ನಬಹುದು.

ಹಲವು ಸಂಸ್ಥಾನಗಳ ಭಾರತವನ್ನು ಒಂದಾಗಿ ಸಮಗ್ರವಾಗಿಸುವಾಗ, ಹಲವು ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕನ್ನಡ ನಾಡನ್ನು ಏಕಗೊಳಿಸಲು ಹೋರಾಟ ನಡೆಯುವಾಗ ಅವುಗಳ ನಡುವಿನ ಸಂಬಂಧ ಯಾವ ಬಗೆಯಲ್ಲಿತ್ತು ಎನ್ನುವುದು ಕೂಡ ಮುಖ್ಯ ಅಂಶವೇ. ಈ ಅಧ್ಯಾಯದಲ್ಲಿ ಆಯ್ಕೆ ಮಾಡಿಕೊಂಡ ಮೂರು ಕವಿಗಳ ಕವಿತೆಗಳ ಪ್ರಮಾಣದಿಂದ ನೋಡಿದಾಗ ಈ ಎರಡು ತಾತ್ವಿಕ ಪರಿಕಲ್ಪನೆಗಳ ನಡುವೆ ಯಾವುದೇ ಬಗೆಯ ಸಂಘರ್ಷವಾಗಲೀ, ಸ್ಪರ್ಧೆಯಾಗಲೀ ಕಾಣುತ್ತಿಲ್ಲ. ಅವುಗಳ ನಡುವೆ ಸಮನ್ವಯ ಸ್ವರೂಪದ ಸಂಬಂಧವೇ ಕಾಣುವುದು. ನಾಡು ತಾನೇ ರಾಷ್ಟ್ರವಾಗುವುದಕ್ಕೆ ಯಾವುದೇ ಬಗೆಯಿಂದಲೂ ಆಕಾಂಕ್ಷಿಯಾಗಿ ಕಾಣುವುದಿಲ್ಲ. ಹಾಗೆಯೇ ರಾಷ್ಟ್ರವೂ ಕೂಡ ತನ್ನೊಳಗಿನ ಬಹುಬಗೆಯ ವೈವಿಧ್ಯಮಯ ನಾಡುಗಳನ್ನು ವಿರೂಪಗೊಳಿಸುವ ಬಗೆಯ ಅಥವಾ ತಾತ್ವಿಕವಾಗಿ ನಿಃಸತ್ವಗೊಳಿಸಲು ಯಾವುದೇ ಬಗೆಯಿಂದಲೂ ಕಾರ್ಯಪ್ರವೃತ್ತವಾಗಿಲ್ಲ.

ನಾಡು ತನ್ನೊಳಗಿನ ಬಹುತ್ವವನ್ನು ಉಳಿಸಿಕೊಂಡೆ ಏಕೀಕರಣಗೊಳ್ಳಲು ಹಂಬಲಸಿದ್ದು. ಕನ್ನಡದೊಳಗಿನ ಹಲವು ಕನ್ನಡತನವನ್ನು, ಕನ್ನಡ ನಾಡಿನೊಳಗಿನ ಹಲವು ಭಾಷಾ ವೈವಿಧ್ಯಗಳನ್ನು ಏಕೀಕರಣಗೊಳ್ಳುವ ಉದ್ದೇಶಕ್ಕಾಗಿ ನಾಡು ನಿರಾಕರಿಸುತ್ತಿಲ್ಲ. ಭಾಷೆಯ, ಮತದ, ಪಂಥದ ವೈವಿಧ್ಯತೆಗಳನ್ನು ಉಳಿಸಿಕೊಂಡೇ ನಾಡು ಕಟ್ಟಲ್ಪಡುತ್ತಿತ್ತು. ರಾಷ್ಟ್ರವೂ ತನ್ನೊಳಗಿನ ವೈವಿಧ್ಯತೆಗಳನ್ನು ಏಕರೂಪೀಕರಿಸಿದೆ, ಸಾಂಸ್ಕೃತಿಕ ನೆಲೆಯಿಂದ ಸಂಘಟಿತಗೊಳ್ಳುತ್ತಲೇ ರಾಜಕೀಯ ಆಯಾಮವನ್ನು ಕಂಡುಕೊಳ್ಳುತ್ತದೆ.

ಕನ್ನಡ ಕವಿತೆಗಳ ಪ್ರಧಾನ ಆಶಯವನ್ನು ನಾಡು-ರಾಷ್ಟ್ರಗಳ ನಡುವೆ ಸಮನ್ವಯವನ್ನು ಸಾಧಿಸಲು ನಡೆಸಿದ ಯತ್ನದಲ್ಲಿ ನೋಡಬಹುದು. ವ್ಯಕ್ತಿ ಮತ್ತು ಸಮಷ್ಟಿಯ ನಡುವೆ ಬಾಂಧವ್ಯ ಬೆಸೆಯುತ್ತಾ, ವ್ಯಕ್ತಿಯನ್ನು ನಾಡಿನೊಂದಿಗೆ, ರಾಷ್ಟ್ರದೊಂದಿಗೆ ಗುರುತಿಸಿಕೊಳ್ಳುತ್ತಾ ಆ ಗುರುತು ವ್ಯಕ್ತಿಯ 'ಸ್ವ'ದ ಗುರುತಾಗಿ ಬೆಳೆದು ಅದನ್ನು ಒಂದು ಆದರ್ಶ, ಮೌಲ್ಯವೆಂದು ಪ್ರತಿಪಾಧಿಸಲಾಗಿದೆ. ವ್ಯಕ್ತಿಯ ಗುರುತಾಗಿ ಬೆಳೆದ ಈ ಪ್ರಜ್ಞೆ ಮುಂದೆ ಬಿಡುಗಡೆ ಮತ್ತು ಸ್ವಾತಂತ್ರ್ಯದ ಪ್ರಜ್ಞೆಯಾಗಿ ರೂಪಾಂತರ ಹೊಂದಿ ವಿಸ್ತಾರವಾದುದನ್ನು ನೋಡಬಹುದಾಗಿದೆ. ಆದರೆ ಕನ್ನಡ ಕವಿತೆಗಳು ಕೇವಲ ಬಂಧನ ಮತ್ತು ಬಿಡುಗಡೆಗೆ ಮಾತ್ರ ಸ್ಪಂದಿಸದೆ, ಕನ್ನಡದ ಮೂಲಕ ವಿಶ್ವಪ್ರಜ್ಞೆಯನ್ನೇ ಸಾರುತ್ತಿದ್ದವು. ಹಾಗಾಗಿ ಕರ್ನಾಟಕ, ಭಾರತ, ಜಗತ್ತು ಎಲ್ಲವೂ ಒಂದೇ ಎಂಬ ಭಾವನೆ, ಭಾರತ ತಾಯಿ-ಕರ್ನಾಟಕ ಮಗಳು ಎಂಬ ಭಾವನೆ ಗಾಢವಾಗಿ ಬೆಳೆದಿತ್ತು.

### ೫.೫ ನಾಡು- ರಾಷ್ಟ್ರ: ನವೋದಯದ ನಂತರ

ಸ್ವಾತಂತ್ರ್ಯ ಪೂರ್ವ ಕಾಲಘಟ್ಟದ ವಸಾಹತುಶಾಹಿ ಪ್ರಭುತ್ವ ಭಾರತೀಯರನ್ನು ರಾಜಕೀಯ ಪಾರತಂತ್ರ್ಯಕ್ಕೆ ಒಳಪಡಿಸಿದ್ದಲ್ಲದೆ ಭಾರತೀಯ ಸಂವೇದನೆಯನ್ನು ಛಿದ್ರಗೊಳಿಸಿತ್ತು. ಇಂತಹ ಸಂದಭದಲ್ಲಿ ರಚನೆಯಾದ ಕನ್ನಡ ಕಾವ್ಯ ರಾಷ್ಟ್ರೀಯತೆಯ ಮನೋಭಾವವನ್ನು ಹೆಚ್ಚು ವ್ಯಾಪಕಗೊಳಿಸುವಂತಹ ವಸ್ತುಗಳನ್ನು ಕಾವ್ಯಕ್ಕೆ ಬಳಸಿಕೊಂಡಿತು. ವರ್ತಮಾನದ ದುಃಸ್ಥಿತಿಗಾಗಿ ವಿಷಾದವನ್ನು, ತಮ್ಮ ಗತದ ವೈಭವದ ಬಗೆಗಿನ ಹೆಮ್ಮೆಯನ್ನು , ಜಾತಿ ಮೊದಲಾದ ಸಾಮಾಜಿಕ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಸುಧಾರಣೆಗಾಗಿ ಕಾಳಜಿಯನ್ನೂ, ದಾಸ್ಯವನ್ನು ಕೊನೆಗಾಣಿಸುವುದಕ್ಕಾಗಿ ಅಗತ್ಯವಾದ ಶೌರ್ಯ-ಪರಾಕ್ರಮಗಳು, ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವುದರಿಂದ ಇಲ್ಲಿ ನೆಲೆಗೊಳ್ಳಬಹುದಾದ ಭವ್ಯ ಭವಿಷ್ಯವನ್ನು ತಮ್ಮ

ಕಾವ್ಯದ ಮೂಲಕ ಹೇಳಲು ಯತ್ನಿಸಿದರು. ಕುವೆಂಪು , ಬೇಂದ್ರೆ, ಬಿ.ಎಂ.ಶ್ರೀಯವರುಗಳ ಕಾವ್ಯಗಳಲ್ಲಿ ಮತ್ತೆ ಮತ್ತೆ ಇಂತಹ ವಸ್ತುಗಳು ಸ್ಥಾನ ಪಡೆದಿರುವುದನ್ನು ನೋಡಬಹುದಾದರೂ ಸ್ವಾತಂತ್ರ್ಯಾ ನಂತರ ಕನ್ನಡ ಕಾವ್ಯದ ಆದ್ಯತೆ ಬದಲಾದುದನ್ನು ಗುರುತಿಸಬಹುದು. ಸ್ವಾತಂತ್ರ್ಯ ಬಂದಾಗ ಉಂಟಾದ ಸಂಭ್ರಮ ಸ್ವಾತಂತ್ರ್ಯಾನಂತರ ತುಂಬಾ ಕಾಲ ಉಳಿಯಲಿಲ್ಲ. ಅಷ್ಟರಲ್ಲಾಗಲೇ ಜನರ ನಿರೀಕ್ಷೆಗಳು ಹುಸಿಯಾಗುತ್ತಾ ಸಾಗಿತ್ತು.

ಸ್ವಾತಂತ್ರ್ಯೋತ್ತರ ಕಾಲದ ಕನ್ನಡದ ಕಾವ್ಯವು ಸಾಮಾಜಿಕ ವೈರುಧ್ಯಗಳ ಕಡೆಗೆ ತನ್ನ ಗಮನ ಹರಿಸಿತು. ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದ ರಾಜಕೀಯ ನೇತಾರರ ಆದರ್ಶ ಆಶಯಗಳು ಕಾರ್ಯರಂಗದಲ್ಲಿ ವಿಫಲಗೊಳ್ಳುತ್ತಿರುವ ಬಗೆಗಿನ ಅಕ್ರೋಶ ಜನರಲ್ಲಿ ಕಾಣತೊಡಗಿತು. ಈ ಭ್ರಮನಿರಸನದ ದನಿ ಮುಂದಿನ ಕಾವ್ಯದ ಧ್ವನಿಯಾಯಿತು. ವ್ಯಕ್ತಿಯ ಅಸಹಾಯಕತೆ, ಹೊಯ್ದಾಟ, ದೌರ್ಬಲ್ಯ, ತೊಳಲಾಟಗಳು ಈ ಹೊತ್ತಿನ ಕಾವ್ಯದಲ್ಲಿ ಮುಖ್ಯವಾಗಿ ಕಾಣಿಸಿಕೊಂಡಿತು. ವ್ಯಕ್ತಿಯ ಬದುಕಿನ ಸಮಸ್ಯೆಯು ರಾಜಕೀಯ ಸಮಸ್ಯೆ, ಪರಿಸ್ಥಿತಿಗಿಂತ ಮುಖ್ಯವಾಗಿ ಪರಿಗಣಿಸಲ್ಪಟ್ಟಿತು. ರಾಷ್ಟ್ರ, ನಾಡು ಸಮೂಹವನ್ನು ಪ್ರತಿನಿಧಿಸುವ ಸಂಗತಿಗಳಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿ ಸಮೂಹವನ್ನೇ ಉದ್ದೇಶಿಸುವ ಸಂಗತಿಗಳು ಪ್ರಧಾನವಾಗಿತ್ತು. ಆದರೆ ನಂತರದಲ್ಲಿ ಸಮೂಹಕ್ಕಿಂತ ವ್ಯಕ್ತಿ ಮತ್ತು ವ್ಯಕ್ತಿಯ ನೆಲೆಗೆ ಬದಲಾಯಿತು. ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲಿ ಶಕ್ತಿಯಾಗಿ ಕಂಡ ಕನಸುಗಾರಿಕೆ, ಭಾವಾತಿರೇಕಗಳು ಸ್ವಾತಂತ್ರ್ಯೋತ್ತರ ಕಾಲಘಟ್ಟಕ್ಕಾಗುವಾಗ ದೌರ್ಬಲ್ಯಗಳಾಗಿ ಕಂಡು ಬಂದಿತು. ಹೀಗಾಗಿ ಕನ್ನಡ ನವ್ಯ ಕಾವ್ಯದ ಕಾಲಕ್ಕಾಗುವಾಗ ಕಾವ್ಯದ ಗುರಿ ಉದ್ದೇಶಗಳೇ ಬದಲಾಯಿತು. ರಾಷ್ಟ್ರೀಯತೆ ಹಾಗೂ ನಾಡಿನ ಪರಿಕಲ್ಪನೆಯನ್ನು ಮುಂದಿಟ್ಟುಕೊಂಡು ಕಾವ್ಯ ರಚಿಸುವ ಪದ್ಧತಿ ಹಿನ್ನೆಲೆಗೆ ಸರಿಯಿತು. ಈ ಕಾರಣದಿಂದ ನವೋದಯದ ನಂತರ ರಾಷ್ಟ್ರೀಯತೆಯನ್ನು ವಸ್ತುವನ್ನಾಗಿಸಿಕೊಂಡ ಕಾವ್ಯ ಹೆಚ್ಚು ಮುನ್ನೆಲೆಗೆ ಬರಲಿಲ್ಲ.

**೫.೬ ನಾಡು- ರಾಷ್ಟ್ರ: ವರ್ತಮಾನದ ಬಿಕ್ಕಟ್ಟುಗಳು:**

ಈ ಅಧ್ಯಯನವು ಕಂಡುಕೊಂಡ ಸಂಗತಿಗಳನ್ನು ಸಮಕಾಲೀನ ಸಂದರ್ಭದ ಕರ್ನಾಟಕ ಎದುರಿಸುತ್ತಿರುವ ಬಿಕ್ಕಟ್ಟುಗಳ ಹಿನ್ನೆಲೆಯಲ್ಲಿ ನಿರ್ವಚಿಸಿಕೊಳ್ಳುವ ಅವಶ್ಯಕತೆ

ಇದೆ. ನಾಡು–ರಾಷ್ಟ್ರಗಳ ನಡುವೆ ಸಮನ್ವಯವನ್ನು ಸಾಧಿಸಿಕೊಳ್ಳುತ್ತಲೇ ನಾಡು ಹಾಗೂ ರಾಷ್ಟ್ರದ ಕುರಿತು ತಮ್ಮ ಸ್ಪಷ್ಟ ನಿಲುವುಗಳನ್ನು ಅಂದಿನ ಕವಿಗಳು ವ್ಯಕ್ತಪಡಿಸಿದ್ದಾರೆ. ಒಂದು ಭಾಷೆಯನ್ನಾಡುವ ಜನರನ್ನೇ ವಿವಿಧ ಪ್ರಾಂತ್ಯಗಳ ನಡುವೆ ವಿಭಜಿಸಿ ಹೋಗುವಂತೆ ಮಾಡುವಲ್ಲಿ ಅಂದಿನ ಪ್ರಭುತ್ವ ಮಾಡಿದ್ದ ತಂತ್ರಗಳನ್ನು ಅರಿತುಕೊಂಡು ಏಕೀಕರಣಕ್ಕಾಗಿ ದುಡಿದು ಒಂದು ಕರ್ನಾಟಕವನ್ನು ರೂಪಿಸಿಕೊಂಡರೋ ಆ ಆಶಯಗಳಿಗೆ ಭಂಗ ಬರುವಂತೆ ಪ್ರಾದೇಶಿಕ ಅಸಮತೋಲನವು ಇಂದಿಗೂ ಉಳಿದುಕೊಂಡು ಬಿಟ್ಟಿದೆ. ಗಡಿನಾಡಿನ ಗೊಂದಲಗಳಿಗೆ ಸೂಕ್ತ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಏಕೀಕರಣೋತ್ತರ ಸರಕಾರಗಳು ಸಫಲವಾಗಿಲ್ಲ. ಕರ್ನಾಟಕದ ಸಾರ್ವಭೌಮತೆಯ ಸಂಕೇತವಾಗಿರುವ ಕನ್ನಡ ಭಾಷೆಯನ್ನು ಶಿಕ್ಷಣ ಮಾಧ್ಯಮನ್ನಾಗಿಸುವ ಹೋರಾಟದಲ್ಲಿ ಉಂಟಾದ ಹಿನ್ನಡೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀಯವರುಗಳು ಅನ್ಯ ಭಾಷೆಗಳ ಜೊತೆ ಸಮನ್ವಯದ ಭಾವವನ್ನು ಹೊಂದಿಯೂ ಕನ್ನಡದ ಅಸ್ಥಿತ್ವದ ಪ್ರಶ್ನೆಯನ್ನು ಅನ್ಯ ಭಾಷೆಗಳ ಸವಾಲುಗಳನ್ನು ಗಂಭೀರವಾಗಿ ಮತ್ತು ಸಮರ್ಥವಾಗಿ ಎದುರಿಸುತ್ತಾರೆ.

ಸದ್ಯದ ಸ್ಥಿತಿಯಲ್ಲಿ ನಾಡು ರಾಜಕೀಯ ಬಿಕ್ಕಟ್ಟುಗಳಿಗಿಂತ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಎದುರಿಸುತ್ತಿದೆ. ಗಡಿಪ್ರದೇಶಗಳಲ್ಲಿ ಹುಟ್ಟಿಕೊಳ್ಳುವ ತಕರಾರುಗಳು ಕೇವಲ ರಾಜಕೀಯ ಸ್ವರೂಪದ್ದಲ್ಲ. ಅದು ಸಾಂಸ್ಕೃತಿಕವಾಗಿ ಕನ್ನಡಿಗರನ್ನು ಇಲ್ಲವಾಗಿಸುವ ಪ್ರಯತ್ನ. ಮಹಾರಾಷ್ಟ್ರ, ಗೋವ, ತಮಿಳುನಾಡು, ಕೇರಳಗಳಲ್ಲಿ ಉಂಟಾಗುವ ರಾಜಕೀಯ ಬದಲಾವಣೆಗಳು ಗಡಿಭಾಗದ ಕನ್ನಡಿಗರನ್ನು ತೀವ್ರವಾಗಿ ಘಾಸಿ ಮಾಡುತ್ತಿದೆ.

ಕಾವೇರಿ, ಕೃಷ್ಣಾ ನದಿಗಳ ನೀರಿನ ಹಂಚಿಕೆಯ ವಿಷಯದಲ್ಲೂ ಕರ್ನಾಟಕ ಸಾಂಘಿಕ ಶಕ್ತಿಯನ್ನು ತೋರಿಸುವಲ್ಲಿ ಎಡವುತ್ತಿದ್ದು, ರಾಜಕೀಯ ಇಚ್ಛಾ ಶಕ್ತಿಯ ಕೊರತೆಯನ್ನೂ ಕಾಣುತ್ತಿದ್ದೇವೆ. ಕನ್ನಡದ ಕವಿಗಳು ಅನ್ಯದ ಎದುರು 'ಸ್ವ'ಗುರುತನ್ನು ಯಾವ ಸ್ವರೂಪದಲ್ಲಿ ಮಂಡಿಸಲು ಯತ್ನಿಸಿದರೋ ಅದರ ಹಿಂದಿನ ಭಾವನೆಗಳೇ ಮರೆಯಾಗಿ ಕನ್ನಡದ 'ಸ್ವ'ವು ಕನ್ನಡಿಗರ 'ಸ್ವ' ಗುರುತಾಗದೆ ಹೋಗುತ್ತಿರುವ ದ್ವಂದ್ವಗಳಿಗೆ ಸಾಕ್ಷಿಯಾಗುತ್ತಿದ್ದೇವೆ. ಐ.ಟಿ. ಕ್ಷೇತ್ರವೂ ಸೇರಿದಂತೆ ಕನ್ನಡದ ನೆಲ–ಜಲವನ್ನು ಉಪಯೋಗಿಸುತ್ತಿರುವ ರಾಷ್ಟ್ರೀಯ, ಬಹುರಾಷ್ಟ್ರೀಯ ಕಂಪನಿಗಳು ಕನ್ನಡಿಗರಿಗೆ

ಉದ್ಯೋಗ ನೀಡುವಲ್ಲಿ ಕಾಳಜಿ ವಹಿಸದಿರುವುದು ದುರಂತವೇ ಸರಿ. ವಿಶ್ವ ಪ್ರಜ್ಞೆಯನ್ನೇ ಸಾರಿದ ಕನ್ನಡವಿಂದು 'ಸ್ವಪ್ರಜ್ಞೆ'ಯನ್ನೇ ಕಳೆದು ಕೊಳ್ಳುತ್ತಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ವಿರುದ್ಧ ನಡೆಯುತ್ತಿದ್ದ ಹೋರಾಟವೂ ಸೇರಿದಂತೆ ರಾಷ್ಟ್ರೀಯತೆಯು ಕಾಲದ ಮನೋಭಾವವಾಗಿಯೇ ಇತ್ತು. ಸ್ವಾತಂತ್ರ್ಯಾನಂತರ ರಾಷ್ಟ್ರೀಯತೆಯು ಸಾಹಿತ್ಯದ ಮುಖ್ಯ ವಸ್ತುವಾಗಲಿಲ್ಲ. ಬಂಧನ ಮತ್ತು ಬಿಡುಗಡೆಯ ಪ್ರಶ್ನೆ ಸ್ವಾತಂತ್ರ್ಯ ಪೂರ್ವದಲ್ಲಿ ಮುಖ್ಯವಾಗಿದ್ದಂತೆ ಸ್ವಾತಂತ್ರ್ಯನಂತರ ಮುಖ್ಯವಾಗಲಿಲ್ಲ. ಬಿಡುಗಡೆ ಎನ್ನುವುದು ಕೇವಲ ಭೌತಿಕ ಸ್ವರೂಪದ್ದಷ್ಟೇ ಆಗದೆ ಅದು ಬೌದ್ಧಿಕ ಆಯಾಮವನ್ನೂ ಹೊಂದಿದೆ. ರಾಷ್ಟ್ರವು ಬೌದ್ಧಿಕವಾಗಿ ವಸಾಹತುಶಾಹಿಯ ಕುರುಹುಗಳಿಂದ ಬಿಡುಗಡೆಯನ್ನು ಹೊಂದಿ ನಿಜವಾದ ಅರ್ಥದ ಸ್ವರಾಜ್ಯವನ್ನು ಸ್ಥಾಪಿಸಿಕೊಳ್ಳುವ ಕುರಿತ ಚಿಂತನೆಗಳೂ ಮುಂದುವರಿಯಬೇಕಾಗಿತ್ತು. ಆದರೆ ಜಾಗತೀಕರಣದ ಹೆಸರಿನಲ್ಲಿ ನವ ವಸಾಹತೀಕರಣವು ಪ್ರವೇಶಿಸಿದ್ದು ರಾಷ್ಟ್ರದ ಶಿಕ್ಷಣ, ಮಾರುಕಟ್ಟೆ, ಉತ್ಪಾದನೆಯ ಕ್ಷೇತ್ರವನ್ನು ತನ್ನ ಕಬಂಧ ಬಾಹುಗಳಿಂದ ಕಬಳಿಸುತ್ತಿದೆ. ಪ್ರಸ್ತುತ ಕನ್ನಡ ಸಾಹಿತ್ಯ ಈ ಕುರಿತ ಎಚ್ಚರವನ್ನು ತನ್ನ ರಚನೆಗಳಲ್ಲಿ ಪ್ರತಿಪಾದಿಸಿದರೂ ಸ್ವಾತಂತ್ರ್ಯ ಪೂರ್ವದ ಸಾಹಿತ್ಯ ರಾಷ್ಟ್ರೀಯತೆಯ ವಿಚಾರಗಳನ್ನು ಪ್ರತಿಪಾದಿಸಿದಷ್ಟು ಪ್ರಭಾವಿಯಾಗಿ ಮಂಡಿಸಿಲ್ಲವೆಂದೇ ಹೇಳಬೇಕು.

ರಾಷ್ಟ್ರವನ್ನು ಸಂಘಟಿಸುವ ನಿಟ್ಟಿನಲ್ಲಿ ಪ್ರತಿಪಾದಿಸಲಾದ ಹಿಂದಿ ಭಾಷೆ ಕನ್ನಡದಂತಹ ಭಾಷೆಗಳ ಮೇಲೆ ಸವಾರಿಯನ್ನು ಮಾಡುತ್ತಿರುವ, ಅಂತರಾಷ್ಟ್ರೀಯ ಭಾಷೆಯೆಂದು ಪರಿಗಣಿಸಲಾಗುವ ಇಂಗ್ಲೀಷ್ ಶಿಕ್ಷಣವೂ ಸೇರಿದಂತೆ ಎಲ್ಲಾ ಕಡೆಯೂ ಪ್ರಾಧಾನ್ಯತೆಯನ್ನು ಪಡೆಯುತ್ತಿರುವ ಸಂದರ್ಭದಲ್ಲಿ ಕನ್ನಡ ಪ್ರಜ್ಞೆ ಎಚ್ಚರದಿಂದ ಈ ಸವಾಲುಗಳನ್ನು ಎದುರಿಸಬೇಕಾಗಿದೆ. ಕುವೆಂಪು. ಬೇಂದ್ರೆ. ಜಿ.ಎಂ.ಶ್ರೀಯವರುಗಳು ತಮ್ಮ ಸಂದರ್ಭದ ಭಾಷಿಕ, ರಾಜಕೀಯ ಒತ್ತಡ, ಸವಾಲುಗಳನ್ನು ತಮ್ಮ ಸೃಜನಶೀಲ ಮಾಧ್ಯಮದ ಮೂಲಕ ಎದುರಿಸುತ್ತಾ ಅದಕ್ಕೆ ಪ್ರತ್ಯುತ್ತರವನ್ನು ನೀಡುತ್ತಿದ್ದರು.

ನಮ್ಮ ವರ್ತಮಾನದ ಈ ಎಲ್ಲಾ ಬಿಕ್ಕಟ್ಟುಗಳನ್ನು ಎದುರಿಸಲು ಕನ್ನಡವು ಇನ್ನಷ್ಟು ಸೃಜನಶೀಲವಾಗಿ, ಬಲಿಷ್ಟವಾಗಿ ಬೆಳೆಯಬೇಕಾಗಿದೆ. ಕನ್ನಡ ಕವಿತೆಗಳು ಕಟ್ಟಿದ ನಾಡಿನ ಹಾಗೂ ರಾಷ್ಟ್ರೀಯತೆಯ ಚಿಂತನೆಗಳನ್ನು ವರ್ತಮಾನದ ಸಂದರ್ಭದಲ್ಲಿಟ್ಟು ಇನ್ನೂ ಹೆಚ್ಚಿನ ಅಧ್ಯಯನಗಳನ್ನು ನಡೆಸಬಹುದಾದ ಸಾಧ್ಯತೆಗಳು ಮುಕ್ತವಾಗಿದೆ.

ಸೃಜನಶೀಲ ಮಾಧ್ಯಮವಾದ ಸಾಹಿತ್ಯ ಈ ಸವಾಲನ್ನು ಹೇಗೆ ಎದುರಿಸುತ್ತಿದೆ ಎಂಬ ಕುರಿತು ಇನ್ನಷ್ಟು ಅಧ್ಯಯನಗಳು ನಡೆಯಬಹುದಾಗಿದೆ.

**ಕೊನೆ ಟಿಪ್ಪಣಿ :**


೧. ಡಾ.ಕೆ.ಕೇಶವ ಶರ್ಮ, ೨೦೦೩, 'ಜಾಗತೀಕರಣ: ಪರ್ಯಾಯ ಸಾಧ್ಯತೆಗಳು- ಸಾಹಿತ್ಯಿಕ ಆಯಾಮ' ಸಂವಾದ ಹೊಸತು ವಾಚಿಕೆ, (ಸಂ) ಡಾ.ಎಚ್.ಎಸ್.ರಾಘವೇಂದ್ರ ರಾವ್ ಪುಟ-೧೫೬,

೨. ಡಾ.ನಾಗಾಜಯ್ಯ ಹಂಪ, ೧೯೯೮, ಸೃಜನಾತ್ಮಕ ಪ್ರತಿಕ್ರಿಯೆ, ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ' (ಸಂ) ಕಾ.ವೆಂ. ಶ್ರೀನಿವಾಸಮೂರ್ತಿ, ಪುಟ-೦೫

೩. ಡಾ.ತಾರಕೇಶ್ವರ ವಿ.ಬಿ. ೨೦೦೫, 'ಕನ್ನಡ ಕರ್ನಾಟಕ : ಕುವೆಂಪು ಮಿಮಾಂಸೆ' ಕುವೆಂಪು ಒಂದು ಪುನರ್ ಅನ್ವೇಷಣೆ, (ಸಂ) ಡಿ.ಎನ್ ನಾಗಭೂಷಣ, ಪುಟ- ೨೨೨

೪. ಕುವೆಂಪು ೧೯೬೮, ಬಹುಜಿಹ್ವಾ ಭಾರತಿಗೆ ಐಕ್ಯತೆಯ ಆರತಿ,ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ)ಡಾ.ಕೆ.ಸಿ.ಶಿವಾರೆಡ್ಡಿ ಪುಟ-೩೭೭.

೫. ಡಾ. ರಾಘವೇಂದ್ರ ರಾವ್, ಎಚ್.ಎಸ್. 'ಹೊಸಗನ್ನಡ ಸಾಹಿತ್ಯದಲ್ಲಿ ಕರ್ನಾಟಕತ್ವದ ನೆಲೆಗಳು- ಕಾವ್ಯ' 'ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ' (ಸಂ) ಕಾ. ವೆಂ. ಶ್ರೀನಿವಾಸ ಮೂರ್ತಿ ಪುಟ- ೭೦

೬. ಕುವೆಂಪು ೧೯೨೯, ಪಾಂಚಜನ್ಯ, ಕುವೆಂಪು ಸಮಗ್ರ ಕಾವ್ಯ ಸಂಪುಟ- ೧. (ಸಂ) ಡಾಕೆ.ಸಿ.ಶಿವಾರೆಡ್ಡಿ, ಪುಟ- ೧೧೨

೭. ಕುವೆಂಪು ೧೯೩೫, ತರುಣರಿರ ಎದ್ದೇಳಿ ಕುವೆಂಪು ಸಮಗ್ರ ಕಾವ್ಯ ಸಂಪುಟ- ೧. (ಸಂ) ಡಾಕೆ.ಸಿ.ಶಿವಾರೆಡ್ಡಿ, ಪುಟ- ೩೭೦

೮. ಕುವೆಂಪು ೧೯೪೭, ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ, ಕುವೆಂಪು ಸಮಗ್ರ ಕಾವ್ಯ ಸಂಪುಟ- ೨. (ಸಂ) ಡಾಕೆ.ಸಿ.ಶಿವಾರೆಡ್ಡಿ, ಪುಟ- ೯೬

೯. ಬೇಂದ್ರೆ ದ.ರಾ ೧೯೫೭, ದಿವ್ಯಧ್ವನಿ, ಔದುಂಬರ ಗಾಥೆ - ಸಂಪುಟ- ೨, (ಸಂ) ವಾಮನ ಬೇಂದ್ರೆ, ಪುಟ - ೩೯೬

೧೦. ಬೇಂದ್ರೆ ದ.ರಾ. ೧೯೫೭, 'ಕನ್ನಡದ ಪಾವನ ಪರಂಪರೆ' ಔದುಂಬರ ಗಾಥೆ ಸಂಪುಟ- ೨, (ಸಂ) ವಾಮನ ಬೇಂದ್ರೆ, ಪುಟ- ೩೯೧

೧೧. ಬೇಂದ್ರೆ ದ.ರಾ. ೧೯೫೭, 'ಕೇಳಿ ನುಡಿ ಕಂಡು ನಡೆ' ಔದುಂಬರ ಗಾಥೆ ಸಂಪುಟ- ೨. (ಸಂ) ವಾಮನ ಬೇಂದ್ರೆ, ಪುಟ- ೪೫೬

೧೨.ಬೇಂದ್ರೆ ದ.ರಾ ೧೯೫೬ ನವಯುಗಾರಂಭ, ಔದುಂಬರ ಗಾಥೆ ಸಂಪುಟ- ೨, (ಸಂ) ವಾಮನ ಬೇಂದ್ರೆ, ಪುಟ- ೩೪೯

೧೩. ಬೇಂದ್ರೆ ದ.ರಾ. ೧೯೨೬ ಸೀಮೋಲ್ಲಂಘನಾ, 'ನಾಡಿದಿನಾ ಕನ್ನಡ ನಾಡು' ಪುಟ - ೧೩

೧೪. ಬೇಂದ್ರೆ ದ.ರಾ ೧೯೫೭, ಕನ್ನಡ ಜೀವನ ಲಹರಿ, 'ನಾಡಿದಿನಾ ಕನ್ನಡ ನಾಡು' ಪುಟ – ೨೮

೧೫. ಬೇಂದ್ರೆ ದ.ರಾ, ೧೯೫೭,ಎಲ್ಲೆ ಎಲ್ಲ ಆದಾತನಿಗೆ, 'ನಾಡಿದಿನಾ ಕನ್ನಡ ನಾಡು' ಪುಟ– ೩೩

೧೬. ಬೇಂದ್ರೆ ದ.ರಾ,೧೯೫೮ ನನ್ನದು ಈ ಕನ್ನಡ ನಾಡು, 'ನಾಡಿದಿನಾ ಕನ್ನಡ ನಾಡು'ಪುಟ– ೩೭–೩೮

೧೭. ಬೇಂದ್ರೆ ದ.ರಾ ೧೯೭೦, ಇದು ನಭೋವಾಣಿ,ನಾಡಿದಿನಾ ಕನ್ನಡನಾಡು,(ಸಂ) ವಾಮನ ಬೇಂದ್ರೆ,ಪುಟ–೪೩

೧೮. ಶ್ರೀಧರ್ ವಿ.ಎಸ್ ೨೦೦೭ ಬಿ.ಎಂಶ್ರೀ ಮತ್ತು ವಸಾಹತುಶಾಹಿ ಕೆಲವು ಟಿಪ್ಪಣಿಗಳು, ಇಂಗ್ಲಿಷ್ ಗೀತಗಳು:ಸಾಂಸ್ಕೃತಿಕ ಮುಖಾಮುಖಿ, (ಸಂ) ಡಾ.ರಹಮತ್ ತರೀಕೆರೆ,ಪುಟ– ೪೨

೧೯. ಶ್ರೀಕಂಠಯ್ಯ ಬಿ.ಎಂ. ೧೯೨೧ ಕಾಣಿಕೆ, ಶ್ರೀ ಸಾಹಿತ್ಯ ಪುಟ– ೫೯

೨೦. ಶ್ರೀಕಂಠಯ್ಯ ಬಿ.ಎಂ. ೧೯೨೭, ಶ್ರೀ ಕೃಷ್ಣರಾಜ ರಜತೋತ್ಸವ ಪ್ರಗಾಥ, ಶ್ರೀ ಸಾಹಿತ್ಯ, ಪುಟ ೧೨೯

೨೧. ಶ್ರೀಕಂಠಯ್ಯ ಬಿ.ಎಂ.೧೯೪೧, ಪಂಪನ ಒರತೆ – ಶ್ರೀ ಸಾಹಿತ್ಯ ಪುಟ – ೧೪೮

೨೨. ಶ್ರೀಕಂಠಯ್ಯ ಬಿ.ಎಂ. ೧೯೧೪,ಭರತಮಾತೆಯ ನುಡಿ,ಶ್ರೀ ಸಾಹಿತ್ಯ ಪುಟ – ೧೨೫

೨೩. ಡಾ.ಚಂದ್ರಶೇಖರ ಎಸ್, ೧೯೯೮, ಸಾಹಿತ್ಯವು ಉಪರಾಷ್ಟ್ರೀಯತೆಗೆ ತೋರಿದ ಪ್ರತಿಕ್ರಿಯೆ, ಕನ್ನಡ ಸಾಹಿತ್ಯಮತ್ತು ಕರ್ನಾಟಕತ್ವ (ಸಂ) ಕಾ.ವೆಂ.ಶ್ರಿನಿವಾಸ ಮೂರ್ತಿ ಪುಟ– ೧೪೮

೨೪. ಡಾ. ಸುರೇಶ ಪಾಟೀಲ್ ೧೯೯೮, ಹೊಸಗನ್ನಡ ಸಾಹಿತ್ಯದಲ್ಲಿ ಕರ್ನಾಟಕತ್ವದ ನೆಲೆಗಳು– ನಾಟಕಗಳು, ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ (ಸಂ) ಕಾ.ವೆಂ. ಶ್ರೀನಿವಾಸ ಮೂರ್ತಿ, ಪುಟ– ೧೦೮

೨೫. ಆಲೂರ ವೆಂಕಟರಾಯರು,೧೯೫೭, ಕರ್ನಾಟಕತ್ವದ ವಿಕಾಸ, ಪುಟ–೧೯೯.

# ಅಧ್ಯಾಯ ೬

## ಅಧ್ಯಯನದ ಫಲಿತಗಳು

ಕನ್ನಡದಲ್ಲಿ ರಾಷ್ಟ್ರೀಯತೆ ಮತ್ತು ನಾಡಿನ ಕುರಿತು ಚಿಂತನೆಗಳು ಬಹು ಆಯಾಮಗಳಲ್ಲಿ ನಡೆದಿವೆ. ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ಸಾಹಿತ್ಯ ಮಾತ್ರವಲ್ಲ, ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಈ ಪ್ರಜ್ಞೆ ವಿಶೇಷವಾಗಿ ಪ್ರಜ್ವಲಿಸಿತ್ತು. ಆಯಾ ಕಾಲದ ರಾಜಕೀಯ ಸಾಮಾಜಿಕ ಒತ್ತಡಗಳು ಇದಕ್ಕೆ ಕಾರಣ. ಸಾಹಿತ್ಯ ಅಭಿವ್ಯಕ್ತಿ ಮಾಧ್ಯಮವಾದ ಕಾರಣದಿಂದ ಈ ಕುರಿತ ಪ್ರತಿಕ್ರಿಯೆ ಹೆಚ್ಚಾಗಿ ದಾಖಲಾಗಿದೆ. ಚಿಂತನಾಶೀಲ ಮನಸ್ಸುಗಳು ಕೇವಲ ಪ್ರತಿಕ್ರಿಯೆಯ ರೂಪದಲ್ಲಿ ಈ ಪರಿಕಲ್ಪನೆಗಳಿಗೆ ಮುಖಾಮುಖಿಯಾದುದಲ್ಲ. ತಮ್ಮದೇ ಕಲ್ಪನೆಯಲ್ಲಿ ಇವುಗಳನ್ನು ವಿಸ್ತರಿಸಿದ್ದಾರೆ, ಬೆಳೆಸಿದ್ದಾರೆ. ಹಾಗಾಗಿ ಕನ್ನಡ ಕಾವ್ಯದ ಅಧ್ಯಯನದಿಂದ ಭಾರತೀಯ ರಾಷ್ಟ್ರೀಯತೆಗೆ ಹಾಗೂ ಕನ್ನಡದ ನಾಡಿನ ಪ್ರಜ್ಞೆಗೆ ಹೊಸ ವ್ಯಾಖ್ಯಾನವನ್ನೇ ನೀಡಬಹುದಾಗಿದೆ. ಪರಿಕಲ್ಪನಾತ್ಮಕವಾಗಿ ಇವೆರಡೂ ಸಾಂಸ್ಕೃತಿಕ ಸ್ವರೂಪದ ಪ್ರಜ್ಞೆಗಳು ಮೂರ್ತ ಸ್ವರೂಪದಲ್ಲಿ ರಾಜಕೀಯ ಆಯಾಮವನ್ನು ಹೊಂದಿದೆ. ಸಾಂಸ್ಕೃತಿಕ ಭಾರತ ಮತ್ತು ಸಾಂಸ್ಕೃತಿಕ ಕರ್ನಾಟಕಗಳು ಚಳವಳಿಯಿಂದ ರೂಪುಗೊಳ್ಳಬೇಕಾಗಿತ್ತು. ಆದರೆ ಮೂರ್ತ ಸ್ವರೂಪದಲ್ಲಿ ನಮ್ಮೆದುರು ಎದ್ದು ನಿಂತದ್ದು ರಾಜಕೀಯ ಪ್ರಭುತ್ವದ ಭಾರತ ಮತ್ತು ಕರ್ನಾಟಕ ಇದನ್ನು ದೋಷ ಎಂದು ಪರಿಗಣಿಸಬಹುದಾಗಿದ್ದರೂ, ಪ್ರಭುತ್ವವಾಗಿ ಇವೆರಡೂ ರಚನೆಗಳು ನಿರಂತರವಾಗಿ ಸಾಂಸ್ಕೃತಿಕ ಆಶಯದ ಕಡೆಗೆ ತುಡಿಯುತ್ತಿರುವುದನ್ನು ನೋಡಬಹುದು. ರಾಷ್ಟ್ರೀಯ ಹೋರಾಟಗಾರರ ಮತ್ತು ಏಕೀಕರಣ ಚಳವಳಿಗಾರರ ಕನಸಿನ ರೀತಿಯ ಭಾರತ ಕರ್ನಾಟಕಗಳು ತಲೆ ಎತ್ತಿದುವೆ? ಎಂಬ ಪ್ರಶ್ನೆ ಸದಾ ಜೀವಂತವಾಗಿಯೇ ಇರಬಹುದಾದರೂ ಅಂತಹ ಕನಸಿನ ಕಡೆಗೆ ಚಲಿಸುವ ಧ್ಯೇಯವನ್ನು ಜೀವಂತವಾಗಿ ಇಟ್ಟಿರುವುದು ಸಾಹಿತ್ಯವೇ.

ಪ್ರಸ್ತುತ ಅಧ್ಯಯನದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀಯವರ ಕವನಗಳಲ್ಲಿ ರಾಷ್ಟ್ರೀಯತೆ ಹಾಗೂ ನಾಡಿನ ಕುರಿತ ಆಶಯಗಳು ಯಾವ ಬಗೆಯಲ್ಲಿ ಪ್ರಕಟವಾಗಿದೆ? ಕಾವ್ಯ ಮಾಡುವ ರಾಷ್ಟ್ರೀಯತೆಯ ವ್ಯಾಖ್ಯಾನ ಯಾವುದು? ನಾಡಿನ ಚಿಂತನೆಯ ಬಗೆ ಏನು? ಎನ್ನುವುದನ್ನು ಗಮನಿಸಲಾಗಿದೆ.

ಈ ಅಧ್ಯಯನಕ್ಕೆ ಆಯ್ಕೆ ಮಾಡಿದ ಮೂವರು ಕವಿಗಳಿಂದ ಪ್ರಾತಿನಿಧಿಕ ಕವನಗಳನ್ನು ಆಯ್ಕೆಮಾಡಿಕೊಂಡು ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಈ ಕವಿಗಳ ಕವಿತೆಗಳ ನಾಡು ಹಾಗು ರಾಷ್ಟ್ರದ ಕುರಿತ ತಾತ್ವಿಕತೆಯನ್ನು ಶೋಧಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನದ ಆರಂಭದಲ್ಲಿ ಕೆಲವು ಪ್ರಶ್ನೆಗಳಿತ್ತು. ಈ ಸಂಶೋಧನಾ ಪ್ರಶ್ನೆಗಳನ್ನು, ಆಯ್ಕೆ ಮಾಡಿದ ಆಕರಗಳ ಮೂಲಕ ಪರಿಶೀಲಿಸಲಾಯಿತು. ಹೀಗೆ ಕಂಡು ಕೊಂಡ ಫಲಿತಗಳನ್ನು ಇಲ್ಲಿ ದಾಖಲಿಸಲಾಗಿದೆ.

೧. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ ಇವರು ಕರ್ನಾಟಕ ಏಕೀಕರಣ ಚಳವಳಿಯು ತೀವ್ರ ಸ್ವರೂಪದಲ್ಲಿ ನಡೆಯುತ್ತಿದ್ದ ಕಾಲಘಟ್ಟದಲ್ಲಿ ಬರೆಯುತ್ತಿದ್ದವರು. ಭೌಗೋಳಿಕವಾಗಿ ಕರ್ನಾಟಕದ ಬೇರೆ ಬೇರೆ ಪ್ರದೇಶಕ್ಕೆ ಸೇರಿದವರು. ಸಾಮಾಜಿಕವಾಗಿಯೂ ಬೇರೆ ಬೇರೆ ಹಿನ್ನೆಲೆಗೆ ಸೇರಿದವರು. ಸಾಂಸ್ಕೃತಿಕವಾಗಿ ರೂಪುಗೊಳ್ಳುತ್ತಿದ್ದ ಕರ್ನಾಟಕವನ್ನು ಇವರು ತಮ್ಮ ಕವಿತೆಗಳ ಮೂಲಕ ಕಟ್ಟುತ್ತಿದ್ದರು. ಚಳವಳಿ ಮತ್ತು ಅದೇ ಕಾಲದಲ್ಲಿ ರಚನೆಯಾದ ಸಾಹಿತ್ಯದಲ್ಲಿ ರೂಪುತಳೆದ ನಾಡಿನ ಸ್ವರೂಪ ಕುತೂಹಲಕಾರಿಯಾದುದು. ಭೌಗೋಳಿಕವಾಗಿ ಛಿದ್ರಗೊಂಡ ಕರ್ನಾಟಕವನ್ನು ಮತ್ತೆ ಒಂದು ಗೂಡಿಸುವುದಕ್ಕೆ ಬೇಕಾದ ಬೌದ್ಧಿಕ ತಳಹದಿಯನ್ನು ಕವಿತೆಗಳು ನಿರ್ಮಾಣ ಮಾಡಿದ್ದು ತಿಳಿದು ಬರುತ್ತದೆ.

೨. ಕನ್ನಡದ ಕವಿಗಳು ರಾಜಕೀಯ ಉದ್ದೇಶಕ್ಕಾಗಿ ತಮ್ಮ ಕವಿತೆಗಳನ್ನು ಬರೆದಿಲ್ಲ. ರಾಜಕೀಯ ಪ್ರಭುತ್ವವಾಗುವ ಅಪೇಕ್ಷೆಗಿಂತಲೂ ಸಾಂಸ್ಕೃತಿಕವಾಗಿ ಒಂದಾಗುವ ಆಕಾಂಕ್ಷೆ ಕನ್ನಡದ ಕವಿತೆಗಳಲ್ಲಿದೆ ಅದಕ್ಕಾಗಿಯೇ ಕನ್ನಡದ ಕವಿತೆಗಳು ನಾಡನ್ನು / ರಾಷ್ಟ್ರವನ್ನು ಸಾಂಸ್ಕೃತಿಕ ಸ್ವರೂಪದಲ್ಲಿಯೇ ನಿರ್ವಚಿಸಿಕೊಳ್ಳುತ್ತದೆ. ಪರಕೀಯ ಪ್ರಭುತ್ವಕ್ಕೊಳಪಟ್ಟಿರುವ ಭಾರತವನ್ನು ಮತ್ತು ವಿಭಜನೆಗೊಂಡಿರುವ ಕರ್ನಾಟಕವನ್ನು ಮರಳಿ ಪಡೆದುಕೊಳ್ಳುವ ಆಕಾಂಕ್ಷೆಯು ಕನ್ನಡದ ಕವಿತೆಗಳಲ್ಲಿ ವ್ಯಕ್ತವಾಗಿದೆ.

೩. ಕನ್ನಡದ ಕವಿತೆಗಳ ಅಧ್ಯಯನದಿಂದ ತಿಳಿದು ಬರುವ ಸಂಗತಿಯೆಂದರೆ. ಕನ್ನಡದಲ್ಲಿ ಪ್ರಕಟವಾದ ರಾಷ್ಟ್ರೀಯತೆಯ ಮೂಲ ಸ್ವರೂಪವು ಬಿಡುಗಡೆಯ ಆಶಯದೊಂದಿಗೆ ವಸಾಹತುಶಾಹಿಗೆ ವಿರುದ್ಧವಾಗಿದೆ. ಅಂದರೆ ಕನ್ನಡದಲ್ಲಿ

ರಾಷ್ಟ್ರೀಯತೆಯ ಭಾವ ಜಾಗೃತಗೊಂಡ ಕಾಲಘಟ್ಟ ವಸಾಹತುಶಾಹಿ ಪ್ರಭುತ್ವದ ಕಾಲಾಘಟ್ಟವಾದುದರಿಂದ ಕನ್ನಡ ಕವಿತೆಗಳಲ್ಲಿ ಪ್ರಕಟವಾಗುವ ರಾಷ್ಟ್ರೀಯತೆಯ ಸ್ವರೂಪ ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆಯಾಗಿ ಮತ್ತು ಸ್ವಾತಂತ್ರ್ಯದ ಬಯಕೆಯ ರೂಪದಲ್ಲಿ ವ್ಯಕ್ತವಾಗಿದೆ.

೪. ಭಾರತೀಯ ಸಂದರ್ಭದಲ್ಲಿ ರಾಷ್ಟ್ರೀಯತೆಗೆ ನೀಡುವ ವ್ಯಾಖ್ಯಾನವು ಪಶ್ಚಿಮದ ರಾಷ್ಟ್ರೀಯತೆಯ ವ್ಯಾಖ್ಯಾನಕ್ಕಿಂತ ಭಿನ್ನವಿರಬೇಕಾಗುತ್ತದೆ. ಮೂಲತಃ ಭಾರತೀಯ ರಾಷ್ಟ್ರೀಯತೆಯು ಪಶ್ಚಿಮದ ರಾಷ್ಟ್ರೀಯತೆಯ ಸ್ವರೂಪಕ್ಕಿಂತ ಭಿನ್ನವಾದುದು. ಇಲ್ಲಿ ಭಾಷೆ, ಜನಾಂಗ, ಚರಿತ್ರೆಯಲ್ಲಿ ಏಕರೂಪತೆ ಇಲ್ಲ. ಬದಲಾಗಿ ಬಹುತ್ವ ಇಲ್ಲಿನ ರಾಷ್ಟ್ರೀಯತೆಯ ಪ್ರಧಾನ ಲಕ್ಷಣವಾಗಿದ್ದು ಕನ್ನಡದ ಕವಿಗಳು ಈ ಬಹುಮುಖೀ, ಬಹುಸ್ತರದ ರಾಷ್ಟ್ರೀಯತೆಯನ್ನೇ ತಮ್ಮ ಕವಿತೆಗಳಲ್ಲಿ ಪ್ರಕಟಪಡಿಸಿದ್ದಾರೆ. ಹಾಗಾಗಿ ಕನ್ನಡದ ಕವಿತೆಗಳು ಮಂಡಿಸುವ ರಾಷ್ಟ್ರೀಯತೆಯು ಏಕರೂಪೀಕರಣದ ಆತಂಕವನ್ನು ಹೊಂದಿಲ್ಲ. ತಾನು ಏಕರಾಷ್ಟ್ರವಾಗುತ್ತಲೇ ರಾಷ್ಟ್ರದೊಳಗಿನ ಬಹುಸ್ವರೂಪಗಳನ್ನು ಒಪ್ಪಿ ಗೌರವಿಸುವ ಭಾವ ಇದೆ. ಯಾವುದನ್ನೂ ಅನ್ಯವಾಗಿಸದೆ ಭೂಮಂಡಲವೇ ಒಂದು ರಾಷ್ಟ್ರ ಎಂಬ ಚಿಂತನೆ, ರಾಷ್ಟ್ರದ ಬಗೆಗೆ ಮಾತನಾಡುವಾಗಲೂ ವಿಶ್ವಪ್ರಜ್ಞೆಯನ್ನು ನಿರಾಕರಿಸದ ಮಾದರಿಯಲ್ಲಿದೆ.

೫. ಕನ್ನಡ ಕವಿತೆಗಳು ಕಟ್ಟುವ ಕನ್ನಡನಾಡು ಕೂಡ ಅನ್ಯದ್ವೇಷದಲ್ಲಿ ರೂಪಪಡೆಯುವುದಿಲ್ಲ. ಕರ್ನಾಟಕ ಒಂದಾಗಬೇಕು ಎಂಬ ಬೇಡಿಕೆಯು ತೀವ್ರವಾಗಿದ್ದಾಗಲೂ ಕರ್ನಾಟಕದೊಳಗೆ ಬಹುತ್ವವನ್ನು ನಿರಾಕರಿಸಲಿಲ್ಲ. ಕನ್ನಡದ ಹಲವು ಸ್ವರೂಪಗಳನ್ನಾಗಲೀ, ಕರ್ನಾಟಕದೊಳಗಿನ ಅನ್ಯ ಭಾಷಿಕರ ಅಸ್ತಿತ್ವವನ್ನಾಗಲಿ, ತನ್ನ ಸುತ್ತಲಿನ ಇತರ ರಾಜ್ಯಗಳನ್ನಾಗಲಿ ವಿರೋಧಿಸದೆ 'ಸ್ವ'ವನ್ನು ಕಂಡುಕೊಳ್ಳುತ್ತಲೇ ನಾಡು ರೂಪುಗೊಳ್ಳುತ್ತದೆ. ಇದನ್ನು ಸ್ಪಷ್ಟವಾಗಿ ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಕುವೆಂಪು, ಬೇಂದ್ರೆಯವರ ಕವಿತೆಗಳಲ್ಲಿ ಬಹುತ್ವವನ್ನು ಒಪ್ಪುವ, ಅನ್ಯಭಾಷೆಗಳನ್ನು ದ್ವೇಷರಹಿತವಾಗಿ ಗೌರವಿಸುವ ಬಗೆಯನ್ನು ನೋಡಬಹುದಾಗಿದೆ.

೬. ನಾಡು ಹಾಗೂ ರಾಷ್ಟ್ರದ ನಡುವಿನ ಸಂಬಂಧದ ಸ್ವರೂಪವನ್ನು ಸ್ಪಷ್ಟವಾಗಿ ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ರಾಷ್ಟ್ರ ತಾಯಿಯಾಗಿ, ನಾಡು ಮಗಳಾಗಿ ಸಂಬಂಧವನ್ನು ಹೊಂದುವ ಮೂಲಕ ಇವುಗಳ ನಡುವಿನ ಸಂಬಂಧ ಸಂಘರ್ಷದ್ದಲ್ಲ, ದ್ವೇಷದ್ದಲ್ಲ ಎನ್ನುವುದನ್ನು ಕನ್ನಡದ ಕವಿತೆಗಳು ತೋರಿಸಿಕೊಟ್ಟಿವೆ. ಏಕೀಕರಣ ಚಳವಳಿಯ ರಾಷ್ಟ್ರೀಯ ವಿಮೋಚನಾ ಹೋರಾಟದಿಂದ ಎಂದೂ ಪ್ರತ್ಯೇಕಗೊಳ್ಳದೆ ಎರಡೂ ಜೊತೆ ಜೊತೆಯಲ್ಲೇ ಸಾಗುತ್ತಿತ್ತು ಮತ್ತು ಭಾರತದ ಅಖಂಡತೆಯನ್ನು ಒಪ್ಪಿಯೇ ಕರ್ನಾಟಕದ ರಚನೆಯ ಬೇಡಿಕೆಯನ್ನು ಮಂಡಿಸಲಾಗುತ್ತಿತ್ತು. ಈ ಕಾರಣದಿಂದ ಉಪರಾಷ್ಟ್ರೀಯತೆ ಎಂದು ಗುರುತಿಸಲ್ಪಡುವ ಕನ್ನಡ ನಾಡು ಭವಿಷ್ಯದ ಪೂರ್ಣ ರಾಷ್ಟ್ರೀಯತೆಯ ಬೀಜ ಅಲ್ಲ ಎನ್ನುವುದನ್ನು ಈ ಕವಿತೆಗಳ ಆಧಾರದಿಂದ ಸ್ಪಷ್ಟವಾಗಿ ಕಂಡುಕೊಳ್ಳಲಾಗಿದೆ. ಅಂದರೆ ನಾಡು ರಾಷ್ಟ್ರದಿಂದ ಪ್ರತ್ಯೇಕಗೊಳ್ಳುವ ಬಯಕೆಯನ್ನು ಈ ಕಾಲಘಟ್ಟದ ಕವಿತೆಗಳು ವ್ಯಕ್ತಪಡಿಸುವುದಿಲ್ಲ.

೭. ಸಮನ್ವಯ ಪ್ರಜ್ಞೆ ಈ ಕಾಲಘಟ್ಟದ ಕನ್ನಡ ಕವಿತೆಗಳ ಬಹಳ ಮುಖ್ಯ ಸಂವೇದನೆಯಾಗಿದೆ. ಈ ಅಧ್ಯಯನದಲ್ಲಿ ನಾಡು-ರಾಷ್ಟ್ರಗಳ ನಡುವಿನ ಸಂಬಂಧ, ವ್ಯಕ್ತಿ ಸಮಷ್ಟಿಯ ಸಂಬಂಧ, ನಾಡಿನೊಳಗಿನ ಅನ್ಯಭಾಷೆಗಳ ನಡುವಿನ ಸಂಬಂಧ, ರಾಷ್ಟ್ರದೊಳಗಿನ ಬಹುಭಾಷೆ, ಬಹುಸಂಸ್ಕೃತಿಗಳ ನಡುವಿನ ಸಂಬಂಧದ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಇದರಿಂದ ಕಂಡುಬಂದ ಅಂಶವೆಂದರೆ ಕನ್ನಡದ ಕವಿಗಳು ಇವೆಲ್ಲದರ ನಡುವೆ ಉನ್ನತ ಮಟ್ಟದಲ್ಲಿ ಸಮನ್ವಯವನ್ನು ಸಾಧಿಸಿಕೊಂಡಿದ್ದರು. ಇದು 'ಬಂಧುತ್ವ' ಮತ್ತು 'ವೈವಿಧ್ಯತೆ'ಯ ನೆಲೆಯಲ್ಲಿ ಪ್ರಕಟವಾಗಿದೆ. ರಾಷ್ಟ್ರವು ತಾಯಿಯಾಗಿ, ನಾಡು ಮಗಳಾಗಿ; 'ರಾಷ್ಟ್ರ' ತಾಯಿಯಾಗಿ, ಪ್ರಜೆ ಮಗನಾಗುವ ಬಂಧುತ್ವದ ನೆಲೆಗಳು ಅನಾವರಣಗೊಂಡರೆ, ನಾಡಿನೊಳಗಿನ ಭಿನ್ನ ಭಾಷೆ, ಭೇದಗಳು ವೈವಿಧ್ಯತೆಯ ಸಂಕೇತಗಳಾಗಿ ಕಾಣುತ್ತದೆ. ಇದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

೮. ಕುವೆಂಪು ಮತ್ತು ಬೇಂದ್ರೆಯವರ ಕವಿತೆಗಳಲ್ಲಿ ರಾಷ್ಟ್ರ ಪರಿಕಲ್ಪನೆ ವಸಾಹತುಶಾಹಿಯ ವಿರೋಧದಲ್ಲಿ ಪ್ರಕಟವಾದರೆ, ಬಿ.ಎಂ.ಶ್ರೀಯವರ ರಾಷ್ಟ್ರ ಪರಿಕಲ್ಪನೆ ಎಲ್ಲೂ ವಸಾಹತುಶಾಹಿ ಪ್ರಭುತ್ವವನ್ನು ನೇರವಾಗಿ ವಿರೋಧಿಸುವ ಬಗೆ ಕಾಣುವುದಿಲ್ಲ. ಕುವೆಂಪು ಅವರು ರಾಜಕೀಯವಾದ ಪ್ರಭುತ್ವವನ್ನೇ ವಿರೋಧಿಸುತ್ತಾರೆ. ಅದರೆ ಬಿ.ಎಂ.ಶ್ರೀಯವರು ಮೈಸೂರು ಒಡೆಯರನ್ನು ಮಾದರಿ ರಾಜರಾಗಿ ಕಂಡು ಅವರಲ್ಲೇ ಇಳೆಯ ಒಳಿತನ್ನು ಕಾಣುತ್ತಾರೆ. ರಾಜಪ್ರಭುತ್ವವನ್ನು ಸಮರ್ಥಿಸುವ ಭರದಲ್ಲಿ ವಸಾಹತುಶಾಹಿಯ ವಿರುದ್ಧ ನಡೆಯುತ್ತಿದ್ದ ಹೋರಾಟದ ಹೋರಾಟಗಾರರನ್ನು ದ್ರೋಹಿಗಳು ಎಂದು ಬಿಡುತ್ತಾರೆ. ಶ್ರೀಯವರಿಗೆ ಕರ್ನಾಟಕ ಎನ್ನುವುದು ಮೈಸೂರೇ ಆಗಿಬಿಡುತ್ತದೆ. ಕುವೆಂಪು, ಬೇಂದ್ರೆಯವರಲ್ಲಿ ವಸಾಹತುಶಾಹಿ ಪ್ರಭುತ್ವದ ಕ್ರೌರ್ಯ, ಅದು ಭಾಷೆಯ ಮೇಲೆ ಉಂಟುಮಾಡುವ ಪರಿಣಾಮಗಳ ಬಗೆಗೆ ಬಹಳ ಸೂಕ್ಷ್ಮ ವಿವೇಚನೆ ಕಾಣುತ್ತದೆ. ಶ್ರೀಯವರು ಭಾಷೆಯ ಕುರಿತ ಏಳ್ಗೆಯ ಬಗೆಗೆ ಮಾತ್ರ ಹೆಚ್ಚು ಗಮನ ಹರಿಸಿದ್ದರು.

೯. ಆಧುನಿಕ ಕನ್ನಡ ಕವಿತೆಗಳ ಮೂಲಕ ಕಟ್ಟಲಾಗುತ್ತಿದ್ದ ರಾಷ್ಟ್ರವು ಆಧುನಿಕ ಪೂರ್ವದ ಸಾಂಸ್ಕೃತಿಕ ಪರಿಕರಗಳಿಂದ ರೂಪು ತಳೆಯುತ್ತಿತ್ತು.ಅಂದರೆ ವಸಾಹತುಶಾಹಿ ಪ್ರಭುತ್ವದಿಂದ ಬಿಡುಗಡೆಗೊಳ್ಳುವ ಆಶಯವನ್ನು ಹೊಂದುತ್ತಲೇ ಭೂಗಡಿರೇಖೆಗಳಿಗೆ ಸೀಮಿತಗೊಳ್ಳದೆ, ಕೇವಲ ರಾಜಕೀಯ ಪ್ರಭುತ್ವವೊಂದನ್ನು ಮರುಸಂಘಟಿಸುವ ಬಗೆಯ ಉದ್ದೇಶವನ್ನು ಕನ್ನಡದ ಕವಿತೆಗಳು ಹೊಂದಿಲ್ಲ.ಒಂದು ಜನಾಂಗ,ಭಾಷೆ,ಬೌಗೋಳಿಕ ಗಡಿಯ ಹಂಗಿಗೆ ಒಳಗಾಗದೆ ಸಾಂಸ್ಕೃತಿಕ ಪರಿಭಾಷೆಗಳಿಂದ ಕನ್ನಡದ ಕವಿತೆಗಳ ರಾಷ್ಟ್ರ ಮೈತಾಳುತ್ತದೆ.

೧೦. ಕುವೆಂಪು ಅವರ ದಾರ್ಶನಿಕ ಹಿನ್ನೆಲೆಯ ವೈಚಾರಿಕತೆಯಲ್ಲಿ ಶ್ರೀಅರವಿಂದರು, ಪರಮಹಂಸರು, ವಿವೇಕಾನಂದರು ಮೊದಲಾದವರ ಚಿಂತನೆಯಿಂದ ರೂಪಿತವಾದ ವಿಶಾಲಾರ್ಥದ ಸಮನ್ವಯ ಭೂಮಿಕೆ ರೂಪಿತವಾಗಿದೆ.ಅವರ ಕವಿತೆಗಳು ಈ ತಾತ್ವಿಕತೆಯನ್ನು ಕವಿತೆಯ ಆಶಯದ ಪ್ರತೀಕವಾಗಿಸಿಕೊಂಡು ವಿಸ್ತರಿಸುವ ಪ್ರಯತ್ನದ ಜೊತೆ ಜೊತೆಗೆ ರಾಷ್ಟ್ರ, ಭಾಷೆ ಕುರಿತ ಪ್ರಜ್ಞೆಯನ್ನು

ಜಾಗೃತಗೊಳಿಸುವ ಆ ಕಾಲದ ವರ್ತಮಾನದ ಅವಶ್ಯಕತೆಯಾಗಿಸುತ್ತಾರೆ.ಅಂಥ ಮನೋಭಾವ ಕನ್ನಡ ಮತ್ತು ಕರ್ನಾಟಕದ ಸಾತ್ವಿಕ ತತ್ವವಾಗಿ ವಿಶ್ವಪ್ರಜ್ಞೆಯ ರೂಪಕವೂ ಆಗುತ್ತದೆ.

೧೧.ಬೇಂದ್ರೆಯವರು ಕವಿತೆಯ ವಸ್ತು ಭಾಷೆಯ ಮೂಲಕ ನಿರೂಪಿಸುವ ಅಭಿವ್ಯಕ್ತಿ ಅವರ ಜೀವಪರವಾದ ವೈಚಾರಿಕತೆಯ ಪ್ರತೀಕವಾಗಿಬಿಡುತ್ತದೆ.ಬೇಂದ್ರೆಯವರು ಕವಿತೆಯಾಗಿಸುವ ಪರಿ ಮತ್ತು ಅದು ನಿರೂಪಿಸುವ ಸೂಕ್ಷ್ಮವಾದ ಚಿಂತನೆ ಜನಪರವಾದ ನಿಲುವಾಗಿ ಜಾಗೃತಿಯನ್ನು ಮೂಡಿಸುವಂಥದ್ದು.ರಾಷ್ಟ್ರ ಮತ್ತು ಭಾಷೆಯನ್ನು ಪರಿಭಾವಿಸುವ ರೀತಿ ಮತ್ತು ಆ ಮೂಲಕ ವ್ಯಕ್ತಪಡಿಸುವ ಆಶಯ ಸಮನ್ವಯತೆಯ ಮೂಲಕವೇ ಕನ್ನಡ- ಕರ್ನಾಟಕವನ್ನು ಸಮಗ್ರವಾಗಿ ಕಾಣುವ ಪ್ರತೀಕವಾಗುತ್ತದೆ.

೧೨. ಶ್ರೀಕಂಠಯ್ಯರವರು ಆ ಕಾಲದಲ್ಲಿ ಕನ್ನಡ ಕಾವ್ಯಕ್ಕೆ ಒಂದು ಹೊಸ ರೂಪವನ್ನು ಕೊಡುವ ಪ್ರಯತ್ನ ಮಾಡಿದವರು.ಅವರು ಇಂಗ್ಲಿಷ್‌ನಿಂದ ಕವಿತೆಗಳನ್ನು ಆಯ್ದು ಅರ್ಥಾತ್ ತನ್ನ ನಿಲುವಿಗೆ ಲಭಿಸಿದ ಇಂಗ್ಲಿಷ್ ಕವಿತೆಗಳನ್ನು ಆಯ್ದು ಕನ್ನಡಿಸುವಾಗ ಕನ್ನಡ ಭಾಷೆಯ ಸೊಗಡಿಗೆ, ಜಾಯಮಾನಕ್ಕೆ, ಭಾಷಾಬಂಧಕ್ಕೆ ಪೂರಕ ಆಗುವ ಹಾಗೆ ರೂಪಾಂತರ, ಭಾವಾಂತರ ಮಾಡಿದರು.ವೈಯಕ್ತಿಕವಾಗಿ ಶ್ರೀಕಂಠಯ್ಯನವರು ಆಡಳಿತಶಾಹಿಯ ಪರವಾಗಿದ್ದರೂ ಕನ್ನಡ ಭಾಷೆಯ ಕುರಿತ ಅವರ ಚಿಂತನೆ ಮತ್ತು ಕವಿತೆಗಳನ್ನು ಕನ್ನಡಿಸುವಾಗ ರೂಪಿತವಾದ ತಾತ್ವಿಕ ಆಶಯ ಪರೋಕ್ಷವಾಗಿ ಕನ್ನಡ- ಕರ್ನಾಟಕದ ಆ ಕಾಲದ ತುರ್ತಿಗೆ ಪೂರಕವಾದುದೇ ಆಗಿತ್ತು.

# ಗ್ರಂಥ ಸೂಚಿ:

## ೧. ಪ್ರಾಥಮಿಕ ಆಕರಗಳು:

೧. ಕುವೆಂಪು: ಕುವೆಂಪು ಸಮಗ್ರ ಕಾವ್ಯ ಸಂಪುಟ ೧ ಮತ್ತು ೨. (ಸಂ) ಡಾ. ಕೆ.ಸಿ. ಶಿವಾರೆಡ್ಡಿ ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ೨೦೦೦

೨. ಬೇಂದ್ರೆ ದ.ರಾ.: ಬೇಂದ್ರೆ ಸಮಗ್ರ ಕಾವ್ಯ, ಔದುಂಬರ ಗಾಥೆ–ಸಂಪುಟಗಳು, (ಸಂ)ವಾಮನ ಬೇಂದ್ರೆ, ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ

೩. ಶ್ರೀಕಂಠಯ್ಯ ಬಿ.ಎಂ. ಶ್ರೀ ಸಾಹಿತ್ಯ– ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.೨೦೦೨

## ೨. ಪರಾಮರ್ಶನ ಗ್ರಂಥಗಳು:


೧. ಪ್ರೊ. ಅಂಬಳಿಕೆ ಹಿರಿಯಣ್ಣ, ಪ್ರೊ. ನೀಲಗಿರಿ ತಳವಾಳ(ಸಂ), ೨೦೦೪, 'ಕುವೆಂಪು: ಪುನರ್ಮನನ', ಪ್ರಸಾರಾಂಗ, ಮೈಸೂರು ವಿವಿ. ೨೦೦೪.

೨. ಅರವಿಂದರು, ೨೦೦೩ 'ಭಾರತದ ಮರುಹುಟ್ಟು', ಎನ್. ಅಮರನಾಥ(ಅನು),ದ ಮದರ್ಸ್ ಇನ್‌ಸ್ಟಿಟ್ಯೂಟ್ ಆಫ್ ರಿಸರ್ಚ್, ನವದೆಹಲಿ, ೨೦೦೩.

೩. ಆಲೂರ ವೆಂಕಟರಾಯರು, ೨೦೦೬, 'ಕರ್ನಾಟಕ ಗತವೈಭವ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೪. ಆಲೂರ ವೆಂಕಟರಾಯರು,೧೯೫೭,'ಕರ್ನಾಟಕತ್ವದ ವಿಕಾಸ',ನವಜೀವನ ಗ್ರಂಥ ಭಂಡಾರ,ಧಾರವಾಡ ೧೯೫೭.

೫. Anderson, Benedict ,1983, ' Imagined Communities' Verso, London, 1991.

೬. ಕಯ್ಯಾರ ಕಿಞ್ಞಣ್ಣ ರೈ, ೧೯೮೯, 'ಸಾಹಿತ್ಯ ದೃಷ್ಟಿ', ಕರ್ನಾಟಕ ಸಂಘ, ಪುತ್ತೂರು – ೧೯೮೯.

೭. ಕೀರ್ತಿನಾಥ ಕುರ್ತಕೋಟಿ, ೧೯೯೮, 'ನೂರು ಮರ ನೂರು ಸ್ವರ' ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೮.

೮. ಕುವೆಂಪು, ೨೦೧೧, 'ಕುವೆಂಪು ಸಮಗ್ರ ಗದ್ಯ ಸಂಪುಟ ೧ ಮತ್ತು ೨', ಡಾ.ಕೆ.ಸಿ ಶಿವಾರೆಡ್ಡಿ (ಸಂ), ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ, ೨೦೧೧.

೯. ಕೇಶವ ಶರ್ಮ ಕೆ. ೨೦೦೮, 'ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ', ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ–೨೦೦೮.

೧೦. ಕೆಂಪೇಗೌಡ ಕೆ, ಡಾ. ರಾಗೌ(ಸಂ), ೧೯೯೬, 'ಬೇಂದ್ರೆ ಸಾಹಿತ್ಯ ಸಮಾಲೋಚನೆ', ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೧೯೯೬.

೧೧. ಕೃಷ್ಣ ಕುಮಾರ್ ಸಿ.ಪಿ. ೧೯೯೫, 'ಕುವೆಂಪು ಸಾಹಿತ್ಯ ಸಂಧಾನ', ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೯೫.

೧೨. ಕೃಷ್ಣಪ್ಪ ಕೆ. ೨೦೦೧, 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ: ಒಂದು ಅಧ್ಯಯನ', ಶ್ರೀರಂಗ ಪ್ರಕಾಶನ, ಮೈಸೂರು. ೨೦೦೧.

೧೩. ಗೋವಿಂದರಾಜು ಸಿ.ಆರ್.೧೯೯೮ 'ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ', ಎಸ್.ಜಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ೧೯೯೮.

೧೪. ಗೋವಿಂದರಾಜು ಸಿ.ಆರ್. ೨೦೦೫, 'ಕನ್ನಡಮ್ಮ: ಹೆಣ್ಣು ಸಂಕಥನದ ನಾಡು ನುಡಿ', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ. ೨೦೦೫.

೧೫. ಚಕ್ಕೆರೆ ಶಿವಶಂಕರ (ಸಂ), ೨೦೦೪, 'ಸಹ್ಯಾದ್ರಿಯ ಸೂರ್ಯ' ( ಶ್ರೀ ಕುವೆಂಪು ಕೃತಿ ಅವಲೋಕನ), ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು – ೨೦೦೪.

೧೬. ಚಂದ್ರಶೇಖರ ಎಸ್. ೨೦೦೦, 'ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ', ಸಿ. ನಾಗಣ್ಣ (ಅನು), ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ – ೨೦೦೦.

೧೭. ಚಿದಾನಂದ ಮೂರ್ತಿ, ೨೦೦೩, 'ಕರ್ನಾಟಕ ಸಂಸ್ಕೃತಿ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೩.

೧೮. ಜವರೇಗೌಡ. ದೇ.(ಸಂ), ೨೦೦೬, 'ಕುವೆಂಪು ದರ್ಶನ ಸಂಪುಟ– ೧', ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೨೦೦೬.

೧೯. ಜವರೇಗೌಡ. ದೇ.(ಸಂ) ೧೯೬೮, 'ಗಂಗೋತ್ರಿ' (ಕುವೆಂಪು ಅಭಿನಂದನ ಗ್ರಂಥ), ಗೀತಾ ಬುಕ್ ಹೌಸ್, ಮೈಸೂರು ೧೯೬೮.

೨೦. ತಂಬಂಡ ವಿಜಯ ಪೂಣಚ್ಚ(ಸಂ), 'ಚರಿತ್ರೆ– ಕನ್ನಡ ವಿಶ್ವವಿದ್ಯಾನಿಲಯ ವಿಶ್ವಕೋಶ–೪', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ,೨೦೦೧.

೨೧. ನಂಜುಂಡೇಗೌಡ ಜೆ.ಆರ್. ೧೯೮೧, 'ಕುವೆಂಪು ಸಾರಸ್ವತ ಲೋಕ', ಸಹ್ಯಾದ್ರಿ ಪ್ರಕಾಶನ, ಮೈಸೂರು. ೧೯೮೧.

೨೨. ನಾಗಭೂಷಣ ಡಿ.ಎಸ್. (ಸಂ), ೨೦೦೫, 'ಕುವೆಂಪು ಒಂದು ಪುನರನ್ವೇಷಣೆ' ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೫.

೨೩. ನಾಗರಾಜ್ ಡಿ.ಆರ್. ೨೦೦೨, 'ಸಂಸ್ಕೃತಿ ಕಥನ', ಅಗ್ರಹಾರ ಕೃಷ್ಣ ಮೂರ್ತಿ ( ಸಂ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು – ೨೦೦೨.

೨೪. ನಾಗರಾಜ್ ಡಿ.ಆರ್. ೧೯೮೭, 'ಶಕ್ತಿ ಶಾರದೆಯ ಮೇಳ', ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೨.

೨೫. ನಾಗರಾಜ್ ಡಿ.ಆರ್. ೧೯೯೬, 'ಸಾಹಿತ್ಯ ಕಥನ', ಅಕ್ಷರ ಪ್ರಕಾಶನ, ಹೆಗ್ಗೋಡು ೨೦೦೬.

೨೬. ನಾಯಕ್ ಜಿ.ಎಚ್. ೧೯೮೮, 'ನಿಜದನಿ', ಅಕ್ಷರ ಪ್ರಕಾಶನ, ಹೆಗ್ಗೋಡು ೧೯೮೮.

೨೭. ನಾರಾಯಣ ಕೆ.ವಿ. ೨೦೧೧ ,'ತೊಂಡು ಮೇವು ಕಂತೆ ೧ ಮತ್ತು ೭' ಬರಹ ಪಬ್ಲಿಷಿಂಗ್ ಹೌಸ್,ಬೆಂಗಳೂರು ೨೦೧೧.

೨೮. ನಿತ್ಯಾನಂದ ಬಿ.ಶೆಟ್ಟಿ ೨೦೦೬,' ಕನ್ನಡ ಸಂಸ್ಕೃತಿ ವಾಙ್ಮಯ', ಪಿ.ಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿ.ವಿ.(ಅಪ್ರಕಟಿತ) ೨೦೦೬.

೨೯. ನಿತ್ಯಾನಂದ ಬಿ.ಶೆಟ್ಟಿ, (ಸಂ.) ೨೦೦೪, 'ರಾಷ್ಟ್ರ ನಿರ್ವಚನ : ಕುವೆಂಪು ವಾಙ್ಮಯ– ಒಂದು ವರ್ತಮಾನದ ವಾಗ್ವಾದ', ಆಳ್ವಾಸ್ ಪ್ರಕಾಶನ, ಮೂಡಬಿದಿರೆ, ೨೦೦೪.

೩೦. ಪತ್ತೆಸಿಂಹ,೧೯೭೧ 'ಭಾರತದ ರಾಷ್ಟ್ರೀಯತೆ', ಎಂ.ಎಸ್.ನರಸಿಂಹ ಮೂರ್ತಿ (ಅನು), ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು ೧೯೭೧.

೩೧. Partha chatterjee, 'The Nation and Its Fragments', Oxford University Press,Dehli-1992.

೩೨. ಪ್ರೊ.ಪರಮೇಶ್ವರ ಭಟ್ಟ ಎಸ್.ವಿ.,೧೯೯೫, 'ರಸಋಷಿ ಕುವೆಂಪು', ಪ್ರಸಾರಾಂಗ, ಮೈಸೂರು ವಿ.ವಿ. ೧೯೯೫.

೩೩. ಪಾಟೀಲ ಪುಟ್ಟಪ್ಪ, ೨೦೦೭, 'ನಾಡು–ನುಡಿ', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ. ೨೦೦೭.

೩೪. ಪಾಸ್ಕಲ್ ಆಲೆನ್ ನಜರತ್, ೨೦೦೫, 'ಅಮೋಘ ನಾಯಕ ಗಾಂಧೀ', ನೀಲತ್ತ ಹಳ್ಳಿ ಕಸ್ತೂರಿ (ಅನು), ಭಾರತೀಯ ವಿದ್ಯಾಭವನ, ಬೆಂಗಳೂರು ೨೦೦೭.

೩೫. ಬದ್ರೀ ಶಹಾ ಟುಲಘರಿಯಾ, ೧೯೭೮, 'ದೈಶಿಕ ಶಾಸ್ತ್ರ,' ಸುರೇಶ ಕುಮಾರ್ (ಅನು), ಭಾರತೀಯ ಇತಿಹಾಸ ಸಂಕಲನ ಸಮಿತಿ, ಕರ್ನಾಟಕ, ೨೦೦೮.

೩೬. ಬಾಲಗಂಗಾಧರ ಎಸ್.ಎನ್. ೨೦೧೦, 'ಪೂರ್ವಾವಲೋಕನ', ರಾಜಾರಾಮ ಹೆಗಡೆ, ಸದಾನಂದ ಜೆ.ಎಸ್.(ಅನು), ಅಭಿನವ ಪ್ರಕಾಶನ, ಬೆಂಗಳೂರು – ೨೦೧೦

೩೭. ಬುದ್ದಣ್ಣ ಹಿಂಗಮಿರೆ (ಸಂ.), ೧೯೭೭, 'ಇಳಿದು ಬಾ ತಾಯಿ' (ಬೇಂದ್ರೆ ಅಭಿನಂದನಾ ಗ್ರಂಥ), ಸಮಾಜ ಪುಸ್ತಕಾಲಯ, ಧಾರವಾಡ– ೧೯೭೭.

೩೮. ಬೇಂದ್ರೆ ದ.ರಾ. ೧೯೭೪, 'ಸಾಹಿತ್ಯದ ವಿರಾಟ್ ಸ್ವರೂಪ', ವಾಮನ ಬೇಂದ್ರೆ (ಸಂ), ಸಮಾಜ ಪುಸ್ತಕಾಲಯ, ಧಾರವಾಡ ೧೯೭೪.

೩೯. ಮನ್ವಾಚಾರ ಎಸ್.ವಿ. ಶ್ರೀನಿವಾಸ ಮೂರ್ತಿ ಕಾ.ವೆಂ(ಸಂ), ೧೯೯೭,
'ಅಭಿರಾಮ' (ರಾಮಣ್ಣ ಕೋಡಿ ಹೊಸಹಳ್ಳಿ ಅವರ ಅಭಿನಂದನ ಗ್ರಂಥ),
ರಾಮಣ್ಣ ಕೇಡಿ ಹೊಸ ಹಳ್ಳಿ ಅಭಿನಂದನ ಸಮಿತಿ, ಬೆಂಗಳೂರು– ೧೯೯೭.

೪೦. ಮನು ಚಕ್ರವರ್ತಿ ಎನ್, ೨೦೧೦, 'ಮಾಧ್ಯಮ ಮಾರ್ಗ', ಅಕ್ಷರ ಪ್ರಕಾಶನ,
ಹೆಗ್ಗೋಡು, ಸಾಗರ– ೨೦೧೦.

೪೧. ಮಲ್ಲೇಪುರಂ ಜಿ. ವೆಂಕಟೇಶ್ (ಸಂ), ೧೯೯೮, 'ಸಾಹಿತ್ಯ ವಿಮರ್ಶೆ',
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು– ೧೯೯೮.

೪೨. ಮಾಲಿನಿ ಮಲ್ಯ (ಸಂ), ೧೯೯೫, 'ಶಿವರಾಮ ಕಾರಂತರ ಲೇಖನಗಳು
ಸಂಪುಟ –೬', ಪ್ರಸಾರಾಂಗ, ಮಂಗಳೂರು ವಿ.ವಿ ೧೯೯೫.

೪೩. ಮಹಾಬಲೇಶ್ವರ ರಾವ್, ೨೦೧೦, 'ಮೆಕಾಲೆಯ ಮಕ್ಕಳು', ನವಕರ್ನಾಟಕ
ಪ್ರಕಾಶನ, ಬೆಂಗಳೂರು – ೨೦೧೦.

೪೪. ಮುಜಾಫರ್ ಅಸ್ಸಾದಿ ( ಸಂ) ,೨೦೦೯, 'ಗಾಂಧಿಯ ಹಿಂದ್ ಸ್ವರಾಜ್'
ವಿಸ್ಮಯ ಪ್ರಕಾಶನ, ಮೈಸೂರು – ೨೦೦೯.

೪೫.. ಮೂರ್ತಿರಾವ್ ಎ. ಎನ್. ೧೯೯೯, 'ಬಿ.ಎಂ.ಶ್ರೀಕಂಠಯ್ಯ', ಕನ್ನಡ ಸಾಹಿತ್ಯ
ಪರಿಷತ್ ಬೆಂಗಳೂರು– ೧೯೯೯.

೪೬. ಮೊಗಳ್ಳಿ ಗಣೇಶ್, ೨೦೦೮, 'ನಡುಗಾಲದ ಕನ್ನಡ ನಾಡು'(ಏಕೀಕರಣೋತ್ತರ
ಕನ್ನಡ ಸಾಹಿತ್ಯ ಸಂಸ್ಕೃತಿ ಕಥನ), ಪ್ರಸಾರಾಂಗ, ಕನ್ನಡ ವಿವಿ. ಹಂಪಿ.
೨೦೦೮.

೪೭. Rabindranath Tagore, 1917, 'Nationalism' Rupa
Publications, New Delhi, 2002.

೪೮. ರಹಮತ್ ತರೀಕೆರೆ(ಸಂ),೨೦೦೭, 'ಇಂಗ್ಲಿಷ್ ಗೀತಗಳು:ಸಾಂಸ್ಕೃತಿಕ
ಮುಖಾಮುಖಿ', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೭.

೪೯. ರಾಘವೇಂದ್ರ ರಾವ್ ಎಚ್.ಎಸ್. (ಸಂ), ೨೦೦೫, 'ಸಾಹಿತ್ಯ ಸಂವಾದ–
ಹೊಸತು ವಾಚಿಕೆ', ನವಕರ್ನಾಟಕ ಪ್ರಕಾಶನ, ಬೆಂಗಳೂರು ೨೦೦೫.

೫೦. ರಾಘವೇಂದ್ರ ರಾವ್ ಎಚ್.ಎಸ್. ೧೯೯೫. 'ಹಾಡೆ ಹಾದಿಯ ತೋರಿತು'.
ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು,೧೯೯೫

೫೧. ರಾಘವೇಂದ್ರ ರಾವ್ ಕೆ. (ಸಂ.), ೨೦೦೬, 'ಬೇಂದ್ರೆ ಅನುಸಂಧಾನ', ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ, ೨೦೦೬.

೫೨. ರಾಘವೇಂದ್ರ ರಾವ್, ೨೦೦೫, 'ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು', ಆರ್ಯ(ಅನು), ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೫.

೫೩. ರಾಜಶೇಖರ್ ವಿ.ಟಿ. ೨೦೦೫, 'ಜಾತಿ: ರಾಷ್ಟ್ರದೊಳಗೊಂದು ರಾಷ್ಟ್ರ', ಬುಕ್ಸ್ ಫಾರ್ ಚೇಂಜ್, ಬೆಂಗಳೂರು – ೨೦೦೫.

೫೪. ರಾಜಾರಾಮ ಹೆಗಡೆ, ೨೦೦೫, 'ಗತ–ಕಥನ' (ರಾಷ್ಟ್ರೀಯ ಇತಿಹಾಸ ಮತ್ತು ಕನ್ನಡ ಜಗತ್ತು), ಆನಂದ ಕಂದ ಗ್ರಂಥಮಾಲೆ, ಚಿತ್ರದುರ್ಗ, ೨೦೦೫.

೫೫. ರಾಜಾರಾಮ ಹೆಗಡೆ, ೨೦೦೮, 'ವಸಾಹತು ಪೂರ್ವ ಕರ್ನಾಟಕದ ರಾಜ್ಯ ಪದ್ಧತಿ', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೮.

೫೬. ರಾಜಾರಾಮ ಹೆಗಡೆ,(ಸಂ), ೨೦೦೪, 'ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು– ೨೦೦೪.

೫೭. ರಾಜೇಂದ್ರ ಚೆನ್ನಿ, ೨೦೦೧, 'ಕರುಳ ಬಳ್ಳಿಯ ಸೊಲ್ಲು', ಅಭಿನವ, ಬೆಂಗಳೂರು – ೨೦೦೧

೫೮. ರಾಮಚಂದ್ರನ್ ಸಿ.ಎನ್. ೨೦೦೦, 'ವಸಾಹತೋತ್ತರ ಚಿಂತನೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು – ೨೦೧೦.

೫೯. ರಾಮಸ್ವಾಮಿ ಎಸ್.ಆರ್.೨೦೧೧,'ದ್ರುವ ಜಲ',ರಾಷ್ಟ್ರೋತ್ಥಾನ ಸಾಹಿತ್ಯ,ಬೆಂಗಳೂರು ೨೦೧೧.

೬೦. ವಿನಯ ಲಾಲ್, ಆಶೀಶ್ ನಂದಿ (ಸಂ), ೨೦೦೭,'ಹೊಸ ಶತಮಾನಕ್ಕೆ ಹೊಸ ಪರಿಭಾಷೆಗಳು', ಜಸವಂತ ಜಾದವ್ (ಅನು), ಅಕ್ಷರ ಪ್ರಕಾಶನ ಹೆಗ್ಗೋಡು, ೨೦೦೭.

೬೧. ಪ್ರೊ. ವೆಂಕಟ ಸುಬ್ಬಯ್ಯ ಮತ್ತು ಇತರರು, ೧೯೮೪, 'ಲೋಚನ– ಶ್ರೀ ವಿಶೇಷಾಂಕ', ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು – ೧೯೮೪.

೬೨. ಶಿವರಾಮ ಪಡಿಕ್ಕಲ್, ೨೦೦೧, 'ನಾಡು-ನುಡಿಯ ರೂಪಕ'(ರಾಷ್ಟ್ರ, ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು), ಪ್ರಸಾರಾಂಗ, ಮಂಗಳೂರು ವಿ.ವಿ. ೨೦೦೧.

೬೩. ಶಿವರಾಮ ಶೆಟ್ಟಿ ಬಿ.(ಸಂ), ೨೦೦೬, 'ನಾಡು-ನುಡಿ ಪ್ರತಿನಿಧೀಕರಣದ ಕಥನ' ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿ.ವಿ. ೨೦೦೬.

೬೪. ಶಿವರುದ್ರಪ್ಪ ಜಿ.ಎಸ್.(ಸಂ), ೧೯೯೮, 'ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೮.

೬೫. ಶಿವರುದ್ರಪ್ಪ ಜಿ.ಎಸ್. ೧೯೮೯, 'ಬೆಡಗು', ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೮೯.

೬೬. ಶಿವರುದ್ರಪ್ಪ ಜಿ.ಎಸ್. ೨೦೦೫, 'ಕುವೆಂಪು ಪುನರಾವಲೋಕನ', ಅಂಕಿತ ಪುಸ್ತಕ, ಬೆಂಗಳೂರು ೨೦೦೫.

೬೭. ಶಿವರುದ್ರಪ್ಪ ಜಿ.ಎಸ್.(ಸಂ), ೧೯೮೫, 'ಶ್ರೀನಿಧಿ'(ಬಿ.ಎಂ.ಶ್ರೀ ಜನ್ಮ ಶತಮಾನೋತ್ಸವ ನೆನಪಿನ ಸಂಪುಟ), ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು- ೧೯೮೫.

೬೮. ಶಿವಾರೆಡ್ಡಿ ಕೆ.ಸಿ. ೨೦೦೩, 'ಕನ್ನಡದ ಹಾಡು ಪಾಡು', ಅಧ್ಯಯನ ಮಂಡಲ ಬೆಂಗಳೂರು ೨೦೦೩.

೬೯. ಶೆಟ್ಟರ್. ಷ. ೨೦೦೭, 'ಶಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ'. ಅಭಿನವ ಪ್ರಕಾಶನ, ಬೆಂಗಳೂರು ೨೦೦೭.

೭೦. ಶೇಖರ ಎನ್. ೨೦೧೧, 'ಪ್ರಬುದ್ಧ ಕರ್ನಾಟಕ ನಾಡು ನುಡಿ', ನೆಮ್ಮದಿ ಪ್ರಕಾಶನ, ಮೈಸೂರು – ೨೦೧೧.

೭೧. ಪ್ರೊ. ಶೇಷಗಿರಿ ರಾವ್ ಎಲ್.ಎಸ್., ಚಿದಾನಂದ ಮೂರ್ತಿ, ಚಂದ್ರಶೇಖರ ನಂ.(ಸಂ), ೨೦೦೯, 'ಕನ್ನಡ –ಕನ್ನಡಿಗ – ಕರ್ನಾಟಕ', ಸ್ವಪ್ನ ಬುಕ್ ಹೌಸ್, ಬೆಂಗಳೂರು- ೨೦೦೯.

೭೨. ಶಂಕರ ಮೊಕಾಶಿ ಪುಣೇಕರ್. ೧೯೮೯, 'ಬೇಂದ್ರೆ ಕಾವ್ಯ ಮೀಮಾಂಸೆ'. ಸಾಹಿತ್ಯ ಭಂಡಾರ, ಬೆಂಗಳೂರು, ೧೯೮೯.

೭೩. ಶ್ರೀಕಂಠಯ್ಯ ಬಿ.ಎಂ. ೨೦೦೨, 'ಶ್ರೀ ಸಾಹಿತ್ಯ', ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ ೨೦೦೨.

೭೪. ಶ್ರೀನಿವಾಸ ಮೂರ್ತಿ ಕಾ.ವೆಂ. ೨೦೦೦. 'ಕನ್ನಡಪರ ಚಿಂತನೆ ಮತ್ತು ಪರಂಪರೆ', ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು ೨೦೦೩.

೭೫. ಸರಜೂ ಕಾಟ್ಕರ್(ಸಂ), ೨೦೦೮, 'ಕನ್ನಡವೇ ಸತ್ಯ ಕನ್ನಡವೇ ನಿತ್ಯ', ರೂಪ ಪ್ರಕಾಶನ, ಮೈಸೂರು, ೨೦೦೮.

೭೬. ಸಿದ್ದಲಿಂಗಯ್ಯ ಜಿ.ಎಸ್. ೧೯೮೬,'ಪಂಚಮುಖಿ', ಜಿ.ಕಲ್ಲಯ್ಯ ಆ್ಯಂಡ್ ಸನ್ಸ್, ಬೆಂಗಳೂರು – ೧೯೮೬.

೭೭. ಸುಬ್ಬಣ್ಣ ಕೆ.ವಿ. ೨೦೦೦, 'ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು', ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೨೦೦೭.

೭೮. ಷೇಕ್ ಅಲಿ ಬಿ. (ಸಂ), ೧೯೯೭, 'ಕರ್ನಾಟಕ ಚರಿತ್ರೆ ಸಂಪುಟ- ಏಳು' ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ ೧೯೯೭.

೭೯. ಹರ್ಡೇಕರ ಮಂಜಪ್ಪ,೧೯೨೧,'ರಾಷ್ಟ್ರ ಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ', ಹರ್ಡೇಕರ ಮಂಜಪ್ಪ ಸ್ಮಾರಕ ಗ್ರಂಥಮಾಲೆ,ಧಾರಾವಾಡ ೧೯೬೬.

೮೦. ಹರೀಶ್ ಜಿ.ಬಿ. ೨೦೧೧, '೧೯ನೇ ಶತಮಾನ: ಭಾಷೆ, ಸಂಸ್ಕೃತಿ ಸಂವಾದ', ಪ್ರಸಾರಾಂಗ, ತುಮಕೂರು ವಿ.ವಿ. ೨೦೧೧.

